# ಎಂ.ಎಸ್.ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್., ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧನ ವಿದ್ಯಾರ್ಥಿನಿ
ಸುಮ.ಎಚ್.ಎಸ್

ಮಾರ್ಗದರ್ಶಕರು
ಡಾ.ರಹಮತ್ ತರೀಕೆರೆ
ಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೫-೧೬

# ಎಂ.ಎಸ್.ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್., ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧನ ವಿದ್ಯಾರ್ಥಿನಿ
ಸುಮ ಎಚ್.ಎಸ್.

ಮಾರ್ಗದರ್ಶಕರು
ಪ್ರೊ. ರಹಮತ್ ತರೀಕೆರೆ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

೨೦೧೫–೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಎಂ.ಎಸ್.ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಸ್ವರೂಪ** ಎಂಬ ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದಲ್ಲಿ ೨೦೧೫-೨೦೧೬ನೇ ಶೈಕ್ಷಣಿಕ ಸಾಲಿನಲ್ಲಿ **ಸುಮ.ಎಚ್.ಎಸ್.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಎಂ.ಫಿಲ್., ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.

**ಡಾ.ರಹಮತ್ ತರೀಕೆರೆ**
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

**ದಿನಾಂಕ** : 30/7/16
**ಸ್ಥಳ** : ವಿದ್ಯಾರಣ್ಯ

# ಘೋಷಣಾ ಪತ್ರ

**ಎಂ.ಎಸ್.ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಸ್ವರೂಪ** ಎಂಬ ಈ ಪ್ರಬಂಧವನ್ನು **ಪ್ರೊ. ರಹಮತ್ ತರೀಕೆರೆ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಭಾಷಾ ನಿಕಾಯದ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

Suma H.S

**ಸುಮ.ಎಚ್.ಎಸ್**
ಸಂಶೋಧನ ವಿದ್ಯಾರ್ಥಿನಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

**ದಿನಾಂಕ** : 30-07-16
**ಸ್ಥಳ** : ವಿದ್ಯಾರಣ್ಯ

# ಪರಿವಿಡಿ

*****

## ಅಧ್ಯಾಯ-ಒಂದು

# ಅಧ್ಯಯನದ ತಾತ್ವಿಕ ಸ್ವರೂಪ

### ೧.೧.ಪ್ರವೇಶ

ಕನ್ನಡ ಸಾಹಿತ್ಯದಲ್ಲಿ ಇಪ್ಪತ್ತನೆಯ ಶತಮಾನದ ಆರಂಭದ ಘಟ್ಟಗಳಲ್ಲಿ ವಿಮರ್ಶೆಯ ಚಿಂತನೆಗಳು ಬೆಳೆಯತೊಡಗಿದವು. ಈ ವಿಮರ್ಶೆ ಪ್ರಕಾರವು ಪಾಶ್ಚಾತ್ಯರ ಪ್ರಭಾವದಿಂದ ಕನ್ನಡ ಸಾಹಿತ್ಯಕ್ಕೆ ಪ್ರವೇಶ ಪಡೆಯಿತು. ಹೀಗೆ ಹುಟ್ಟಿಕೊಂಡ ವಿಮರ್ಶೆಯಿಂದ ಕಾಲಾನಂತರದಲ್ಲಿ, ಅಂದರೆ ೭೦-೮೦ರ ದಶಕದ ವೇಳೆಗೆ ಹಲವಾರು ಪಂಥಗಳು ಹುಟ್ಟಿಕೊಂಡವು. ಅನಂತರದಲ್ಲಿ ವಿಮರ್ಶೆಯ ಧೋರಣೆಗಳು ಕೂಡ ಬದಲಾಗುತ್ತ ಬಂದವು. ಆದರೆ ವಿಮರ್ಶೆಯಲ್ಲಿ ಒಂದು ಕಾಲಕ್ಕೆ ಕೃತಿಯನ್ನು ಕೇಂದ್ರವಾಗಿಟ್ಟುಕೊಂಡು ಕೃತಿನಿಷ್ಠ ವಿಮರ್ಶೆ ಬಂದರೆ, ಮತ್ತೊಂದು ಕಾಲಕ್ಕೆ ಕರ್ತೃವನ್ನು ಕೇಂದ್ರವಾಗಿಟ್ಟುಕೊಂಡ ಕರ್ತೃನಿಷ್ಠ ವಿಮರ್ಶೆಯು ತನ್ನ ವಿಸ್ತಾರವನ್ನು ಪಡೆದುಕೊಳ್ಳುತ್ತ ಬಂದಿತು. ಹಾಗೆಯೇ ಕಾಲಮಾನಗಳಲ್ಲಿ ವಿಮರ್ಶೆಯ ಹಲವು ಪಂಥಗಳು ಕೂಡ ಹುಟ್ಟಿಕೊಂಡವು. ಸೃಜನಶೀಲ ಸಾಹಿತ್ಯವಾದ ಕಥೆ ಕಾದಂಬರಿ ಕಾವ್ಯ ಬರೆಯುವ ವಿಧಾನ, ಶೈಲಿ ತಂತ್ರಗಳು ಬದಲಾದ ಹಾಗೆ, ವಿಮರ್ಶೆಯು ಕೂಡ ಸಾಹಿತ್ಯ ಕೃತಿಗಳ ಪ್ರಕಾರ, ಅವುಗಳ ವಸ್ತು ಧೋರಣೆಗೆ ತಕ್ಕಂತೆ ಬದಲಾಗುತ್ತ ಬಂದಿತು. ಇದರಿಂದ ಕನ್ನಡದ ವಿಮರ್ಶಾ ಘಟ್ಟಗಳಲ್ಲಿ ನವೋದಯ ವಿಮರ್ಶೆ, ನವ್ಯ ವಿಮರ್ಶೆ, ದಲಿತ-ಬಂಡಾಯ ವಿಮರ್ಶೆ, ಸ್ತ್ರೀವಾದಿ ವಿಮರ್ಶಾ ಪಂಥಗಳು ಬೆಳೆದವು.

ಈ ವಿಮರ್ಶಾ ಪಂಥಗಳು ಬೆಳೆಯಲು ಆಯಾ ಕಾಲದ ಚಾರಿತ್ರಿಕ, ಸಾಮಾಜಿಕ ಒತ್ತಡಗಳು ಕಾರಣವಾಗಿವೆ. ಇದರಲ್ಲಿ ಮುಖ್ಯವಾಗಿ ಸ್ತ್ರೀವಾದಿ ವಿಮರ್ಶೆಯು ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಹುಟ್ಟಿಕೊಂಡಿದ್ದು ಕಾರಣವಾಗಿದೆ. ಈ ಸ್ತ್ರೀವಾದಿ ಚಿಂತನೆಯು ಪಾಶ್ಚಾತ್ಯರಿಂದ ಪ್ರೇರಣೆ ಪಡೆದು ಹುಟ್ಟಿದೆ ಎಂದು ಹೇಳಬಹುದಾದರೂ, ಇದು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ನೆಲೆಯನ್ನು ರೂಪಿಸಿಕೊಂಡಿತು. ಇದು ಮಹಿಳಾ ಪರವಾದ ತತ್ವ ಸಿದ್ಧಾಂತದಲ್ಲಿ ತನ್ನನ್ನು ಗುರುತಿಸಿಕೊಂಡಿತು. ಆದ್ದರಿಂದ ಕನ್ನಡದ ಸ್ತ್ರೀವಾದಿ ತತ್ವ ಚಿಂತನೆಯನ್ನು ದೇಸಿ ನೆಲೆಯಿಂದ ವಿವರಿಸಿಕೊಳ್ಳುವುದು ಹೆಚ್ಚು ಸೂಕ್ತವಾಗಿದೆ. ಸ್ತ್ರೀವಾದಿ ವಿಮರ್ಶೆಯು ದಲಿತ-ಬಂಡಾಯ ವಿಮರ್ಶೆಯ ನಂತರದಲ್ಲಿ ಹೆಚ್ಚು ವ್ಯಾಪಕವಾಗಿ ಬೆಳೆಯಿತು. ಸ್ತ್ರೀವಾದಿ ಚಿಂತನೆಯ ಪ್ರಧಾನ ಕಾಳಜಿ ಮಹಿಳೆಯೇ ಆಗಿದ್ದಾಳೆ. ಹೆಚ್ಚು ಹೆಚ್ಚು ಮಹಿಳಾಪರ ಕಾಳಜಿಯುಳ್ಳ ವಿಮರ್ಶಕಿಯರು ಸ್ತ್ರೀವಾದಿ ವಿಮರ್ಶೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇದರಿಂದ ಇದುವರೆಗೆ ವಿಮರ್ಶೆ ಕನ್ನಡ ಸಾಹಿತ್ಯವನ್ನು ಗ್ರಹಿಸಿದ ಮಾದರಿಗಿಂತ ಭಿನ್ನ ನೆಲೆಯಲ್ಲಿ ನೋಡುವ ಮಾದರಿಯೊಂದನ್ನು ಸ್ತ್ರೀವಾದಿ ವಿಮರ್ಶೆಯು ರೂಪಿಸಿಕೊಟ್ಟಿತು. ಈ ವಿಮರ್ಶಾ ಪಂಥವು ಆರಂಭದಲ್ಲಿ ಮಹಿಳಾಪರ ಚಳುವಳಿಗಳ ಭಾಗವಾಗಿ ಹುಟ್ಟಿಕೊಂಡಿತು. ಆರಂಭಿಕ ಘಟ್ಟದಲ್ಲಿ ಇದಕ್ಕೆ ಹಲವಾರು ಪ್ರತಿರೋಧಗಳು ಎದುರಾದರು ಕೂಡ, ಕನ್ನಡ ಸಾಹಿತ್ಯದಲ್ಲಿ ಮಹಿಳೆಯರನ್ನು ಕುರಿತ ಮೂಲಭೂತವಾದಿ ನಿಲುವುಗಳನ್ನು ಮೀರುವ ನೆಲೆಯಲ್ಲಿ ಅದು ಬೆಳೆದು, ಮಹಿಳಾ ಸಂವೇದನೆಗೆ ಭದ್ರವಾದ ಬುನಾದಿಯನ್ನು ರೂಪಿಸಿತು.

ಹಲವು ಭಿನ್ನಮತ ವಿರೋಧಗಳ ನಡುವೆಯೇ ಸ್ತ್ರೀವಾದಿ ಚಿಂತನೆಯು ಇಂದು ವ್ಯಾಪಕವಾಗಿ ಬೆಳೆಯುತ್ತ ತನ್ನದೆ ಆದ ಚೌಕಟ್ಟನ್ನು ನಿರ್ಮಿಸಿಕೊಂಡಿದೆ. ಹೀಗೆಯೇ ಸ್ತ್ರೀವಾದವು ಲಿಂಗ, ಜಾತಿ, ಪುರುಷ ಪ್ರಧಾನ ಹಾಗೂ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಅನಿವಾರ್ಯವಾಗಿ ಹುಟ್ಟಿಕೊಂಡಿತು. ಹೀಗೆ ಒಂದು ಪ್ರಮುಖ ಚಳುವಳಿಯಾಗಿ ರೂಪುಗೊಂಡು ಸ್ತ್ರೀಯರ ಸಾಮಾಜಿಕ, ಸಾಂಸ್ಕೃತಿಕ ಸ್ಥಾನಮಾನಗಳಲ್ಲಿ ಬದಲಾವಣೆಗಳನ್ನು ತರಲು ಸಮರ್ಥವಾದ ಹೋರಾಟವನ್ನು ಈ ಪ್ರಕಾರವು ಹುಟ್ಟಿಹಾಕಿತು. ಇದರಿಂದ ಸ್ತ್ರೀಯರು ತಮ್ಮ ಸ್ಥಿತಿಗತಿಗಳ ಬಗ್ಗೆ ಚಿಂತಿಸುವಂತೆ ಮತ್ತು ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗುವಂತೆ ಅರಿವು ಮೂಡಿಸಿತು. ಸ್ತ್ರೀ-ಪುರುಷ ಎಂಬ ಲಿಂಗ ಅಸಮಾನತೆಯ ಸಮಸ್ಯೆಗಳು ಸಾಮಾಜಿಕ ಕ್ಷೇತ್ರವನ್ನು ಆವರಿಸಿವೆ ಎಂಬ ಅರಿವು ಹುಟ್ಟಿಕೊಂಡ ನಂತರ ಮಹಿಳಾ ಸಾಹಿತ್ಯವನ್ನು ಹೊಸ ನಿಲುವಿನಿಂದ ನೋಡುವುದಕ್ಕೆ ಇದರಿಂದ ಸಾಧ್ಯವಾಯಿತು.

ಈ ಸ್ತ್ರೀವಾದಿ ಚಿಂತನೆಯ ಬೇರುಗಳನ್ನು ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಲ್ಲಿ ಹಾಗೂ ನಂತರದ ಹಲವಾರು ಪ್ರಾಚೀನ ಪಠ್ಯಗಳಲ್ಲಿ ಗುರುತಿಸಬಹುದು. ಆದರೆ ಈ ಸ್ತ್ರೀ ಚಿಂತನೆಯು ಸಂಘಟಿತವಾದ ಒಂದು ಹೋರಾಟ ಮತ್ತು ಸಂಘರ್ಷದ ಭಾಗವಾಗಿ ಮೂಡಿಬರಲಿಲ್ಲ. ಇದಕ್ಕೆ ಹೋಲಿಸಿದರೆ ಆಧುನಿಕ ಸ್ತ್ರೀವಾದಿ ಚಿಂತನೆ ಮತ್ತು ವಿಮರ್ಶೆಗಳು ಹೆಚ್ಚು ಸಂಘಟಿತವಾದ ಹೋರಾಟದ ಭಾಗವಾಗಿ ರೂಪುಗೊಂಡಿವೆ. ಕನ್ನಡದಲ್ಲಿ ವಿಮರ್ಶೆ ಮತ್ತು ಚಿಂತನ ಸಾಹಿತ್ಯವು ಹುಟ್ಟಿಕೊಂಡು ಒಂದು ಶತಮಾನವಾದರೂ ಅದರಲ್ಲಿ ಪುರುಷ ವಿಮರ್ಶಕರೇ ಹೆಚ್ಚಾಗಿ ತೊಡಗಿಸಿಕೊಂಡಿರುವರು. ಆದರೆ ಆರಂಭದಲ್ಲಿ ಸೃಜನಶೀಲ ಸಾಹಿತ್ಯ ಕೃತಿಗಳನ್ನು ರಚಿಸಿದ ಮಹಿಳೆಯರು ೭೦ರ ದಶಕದ ನಂತರದಲ್ಲಿ ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿಸಿಕೊಳ್ಳಲು ಪ್ರಾರಂಭಿಸಿದರು. ಇದಕ್ಕೆ ಪ್ರಮುಖ ಕಾರಣ, ಸ್ತ್ರೀಶಿಕ್ಷಣದ ಪ್ರಮಾಣ ಹೆಚ್ಚಿದ್ದು; ಆಧುನೀಕರಣಕ್ಕೆ ಹೆಣ್ಣು ತೆರೆದುಕೊಂಡಿದ್ದು. ಸಾಂಪ್ರದಾಯಿಕ ಆಲೋಚನ ಪದ್ಧತಿಯಿಂದ ಹೊರಬಂದು ತನ್ನ ಸ್ಥಾನಮಾನಗಳ ಕಂಡುಕೊಂಡಿದ್ದು. ಇದರ ಫಲವಾಗಿಯೇ ಸ್ತ್ರೀವಾದಿ ಚಿಂತನೆಗಳು ಹುಟ್ಟಿಕೊಂಡವು.

ಕನ್ನಡದ ಸ್ತ್ರೀವಾದಿ ವಿಮರ್ಶೆಗೆ ಹಲವಾರು ಮಹಿಳಾ ಲೇಖಕಿಯರು ತಮ್ಮ ಕೊಡುಗೆ ನೀಡಿದ್ದಾರೆ. ಸಾಹಿತ್ಯದಲ್ಲಿ ಹೆಣ್ಣನ್ನು ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿದ ಕೆಲವೊಂದು ಮಾದರಿಗಳಿಗೆ ಸೀಮಿತಗೊಳಿಸಿ ಚಿತ್ರಿಸುತ್ತಿರುವುದನ್ನು, ತನ್ನ ಹಿತಾಸಕ್ತಿಗೆ ತಕ್ಕ ಹಾಗೆ ಅವಳ ವ್ಯಕ್ತಿತ್ವವನ್ನು ತಿರುಚುತ್ತಿರುವುದನ್ನು ಬಯಲು ಮಾಡುವ ಮೂಲಕ ಈ ವಿಮರ್ಶೆಗೆ ಒಂದು ತಾತ್ವಿಕ ಚೌಕಟ್ಟನ್ನು ರೂಪಿಸಿದ್ದಾರೆ. ಸ್ತ್ರೀವಾದದಿಂದ ಪ್ರಭಾವಿತರಾದ ಲೇಖಕಿಯರು ಬಿಡುಗಡೆಯ ಆಶಯದ ಲೇಖನಗಳನ್ನು ಹಾಗೂ ಸ್ತ್ರೀವಾದಿ ಸಾಹಿತ್ಯ ಕೃತಿಗಳನ್ನು ರಚಿಸುವ ಮೂಲಕ ಅಥವಾ ಅನುವಾದಿಸುವ ಮೂಲಕ ಈ ವಿಚಾರದಲ್ಲಿ ಸ್ಪಷ್ಟ ಪರಿಕಲ್ಪನೆಯನ್ನು ಮೂಡಿಸುವುದಕ್ಕೆ ನೆರವಾಗಿದ್ದಾರೆ. ಇವರಲ್ಲಿ ಎನ್.ಗಾಯತ್ರಿ, ವಿಜಯಾ ದಬ್ಬೆ, ಬಿ.ಎನ್.ಸುಮಿತ್ರಾಬಾಯಿ, ಎಂ.ಎಸ್.ಆಶಾದೇವಿ, ಎಚ್.ಎಸ್.ಶ್ರೀಮತಿ, ಕೆ.ನೀಲಾ, ತಾರಿಣಿ ಶುಭದಾಯಿನಿ, ಎಚ್.ಎಲ್.ಪುಷ್ಪ, ಎಸ್.ಉಷಾ, ಶೈಲಜಾಹಿರೇಮಠ ಮುಂತಾದ ಚಿಂತಕಿಯರು ಮತ್ತು ಸಂಶೋಧಕಿಯರು ಪ್ರಮುಖರಾಗಿದ್ದಾರೆ. ಈ ಚಿಂತಕಿ-ವಿಮರ್ಶಕಿಯರು ಇಂದು ತಮ್ಮದೇ ಆದ ತಾತ್ವಿಕ ಧೋರಣೆಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ವಿಭಿನ್ನ ದೃಷ್ಟಿಕೋನಗಳ ಅಡಿಯಲ್ಲಿ ಸ್ತ್ರೀವಾದವನ್ನು ಬೆಳೆಸುತ್ತಿದ್ದಾರೆ. ಇವರಲ್ಲಿ ಎಂ.ಎಸ್.ಆಶಾದೇವಿಯವರು ವಿಶಿಷ್ಟರಾಗಿದ್ದಾರೆ. ಇವರು

ಮಹಿಳಾಪರ ಚಿಂತನೆಯನ್ನು ಒಂದು ಎತ್ತರಕ್ಕೆ ಕೊಂಡೊಯ್ಯುವ ಕೆಲಸ ಮಾಡಿದ್ದಾರೆ. ಈ ಎಲ್ಲಾ ವಿಮರ್ಶಕಿಯರ ಸ್ತ್ರೀವಾದದ ನೆಲೆಯೂ ಮಹಿಳಾ ಅಸ್ಮಿತೆಯ ಹುಡುಕಾಟವು ಮುಖ್ಯ ವಿಚಾರವಾಗಿದೆ.

ಮೂಲತಃ ಸಾಹಿತ್ಯದ ವಿದ್ಯಾರ್ಥಿನಿಯಾದ ಆಶಾದೇವಿಯವರು ಸಮಾಜದಲ್ಲಿ ನಡೆಯುವ ಘಟನೆಗಳಿಗೆ ಮತ್ತು ಚರಿತ್ರೆಯಲ್ಲಿ ನಡೆದ ವಿದ್ಯಮಾನಗಳಿಗೆ ತಮ್ಮ ಚಿಂತನೆಯ ಮೂಲಕ ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತ ಬಂದವರು. ಈಗಾಗಲೇ ಇರುವ ಸ್ತ್ರೀವಾದಿ ವಿಮರ್ಶೆಯನ್ನು ತಮ್ಮ ಚಿಂತನೆಗಳ ಮೂಲಕ ವಿಸ್ತರಿಸುವ ಪ್ರಯತ್ನದಲ್ಲಿ ತೊಡಗಿದವರು. ಸಾಹಿತ್ಯವನ್ನು ಕುರಿತ ಭಿನ್ನವಾದ ವಿಮರ್ಶಾ ಮಾನದಂಡವನ್ನು ತಮ್ಮ ಬರವಣಿಗೆಯ ಮೂಲಕ ನಿರೂಪಿಸುತ್ತಿರುವವರು. ಇವರ ಚಿಂತನೆಯು ಕನ್ನಡದ ಸ್ತ್ರೀವಾದದ ಬೆಳವಣಿಗೆಯ ವಿಭಿನ್ನ ಆಯಾಮಗಳನ್ನು ಒಳಗೊಂಡು ರೂಪುಗೊಂಡಿದೆ. ಅವರ ಚಿಂತನೆಗಳ ಹೆಚ್ಚಾಗಿ ಸಾರ್ವಜನಿಕ ಚರ್ಚೆಗೆ ಒಳಪಡುತ್ತಿವೆ.

### ೧.೨. ಅಧ್ಯಯನದ ಉದ್ದೇಶ

ಎಂ.ಎಸ್.ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಸ್ವರೂಪ ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದು, ಪ್ರಸ್ತುತ ಅಧ್ಯಯನದ ಉದ್ದೇಶಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

**ಅ.** ಆಧುನಿಕ ಕನ್ನಡ ಸಾಹಿತ್ಯದಲ್ಲಿ ೭೦ರ ದಶಕದ ನಂತರ ವ್ಯಾಪಿಸಿಕೊಂಡ ಸ್ತ್ರೀವಾದಿ ವಿಮರ್ಶಾ ಸಾಹಿತ್ಯದಲ್ಲಿ ಎಂ.ಎಸ್.ಆಶಾದೇವಿ ಅವರ ಚಿಂತನೆಯು ಹಲವಾರು ವಿಭಿನ್ನ ಆಯಾಮಗಳಿಂದ ಕೂಡಿವೆ. ಅವರ ಚಿಂತನೆಯ ವಿಶಿಷ್ಟತೆಯನ್ನು ಮತ್ತು ಅದರ ಸ್ವರೂಪವನ್ನು ವಿಶ್ಲೇಷಿಸುವುದು.

**ಆ.** ಆಶಾದೇವಿ ಅವರ ವಿಚಾರಗಳ ಕುರಿತಾಗಿ ಸಾರ್ವಜನಿಕ ಚರ್ಚೆಯಿದ್ದರೂ ಸಂಶೋಧನೆಯಲ್ಲಿ ಅವರ ಚಿಂತನೆಯನ್ನು ಆಕರವಾಗಿಸಿಕೊಂಡು ಹೆಚ್ಚು ಚರ್ಚೆಗಳು ನಡೆದಿರುವುದಿಲ್ಲ. ಒಟ್ಟಾರೆ ಕನ್ನಡ ಸಂಶೋಧನೆಯಲ್ಲಿ ವಿಮರ್ಶೆಯೇ ನಿರ್ಲಕ್ಷ್ಯಕ್ಕೆ ಒಳಗಾದ ಪ್ರಕಾರವಾಗಿದೆ. ಹೀಗಾಗಿ ಅವರ ವಿಮರ್ಶೆ ಚಿಂತನೆಯನ್ನು ಅಧ್ಯಯನಕ್ಕೆ ಒಳಪಡಿಸುವುದು.

**ಇ.** ಆಶಾದೇವಿಯವರ ಸ್ತ್ರೀವಾದಿ ಚಿಂತನೆಯಲ್ಲಿ ವ್ಯಕ್ತವಾಗುವ ನಿರೂಪಣಾ ಶೈಲಿ, ಅಭಿವ್ಯಕ್ತಿಯ ವಿನ್ಯಾಸ, ಭಾಷಾ ವಿಶಿಷ್ಟತೆ, ಪರಿಭಾಷೆ, ಪರಿಕಲ್ಪನೆ ಹಾಗೂ ರೂಪಕಗಳನ್ನು ಗುರುತಿಸುವುದು, ಚರ್ಚಿಸುವುದು.

**ಈ.** ಕನ್ನಡದ ಸ್ತ್ರೀವಾದ ಹಾಗೂ ಸ್ತ್ರೀ ಸಂಘಟನೆಗೆ ಆಶಾದೇವಿಯವರ ಸ್ತ್ರೀ ಚಿಂತನೆಯ ಕೊಡುಗೆಯ ಮಹತ್ವವನ್ನು ಗುರುತಿಸಿ ಅಧ್ಯಯನಕ್ಕೆ ಒಳಪಡಿಸುವುದು.

**ಉ.** ಸ್ತ್ರೀವಾದಿ ವಿಮರ್ಶಾ ಚಿಂತನೆಯಲ್ಲಿ ಹಲವಾರು ಲೇಖಕಿಯರು ತಮ್ಮದೇ ಆದ ತಾತ್ವಿಕ ಧೋರಣೆಗಳ ಮೂಲಕ ಸ್ತ್ರೀವಾದವನ್ನು ಬೆಳೆಸಿಕೊಂಡು ಬಂದಿದ್ದಾರೆ. ಪ್ರತಿಯೊಬ್ಬ ಲೇಖಕಿಯರ ಚಿಂತನೆಗಳು ಹಾಗೂ ವಿಮರ್ಶೆಯ ವಿನ್ಯಾಸಗಳು ವಿಭಿನ್ನತೆಯಿಂದ ಕೂಡಿವೆ. ಇವರು ತಮ್ಮ

ಚಿಂತನೆಗಳನ್ನು ವ್ಯಕ್ತಪಡಿಸಲು ಹಲವಾರು ಮಾದರಿಗಳನ್ನು ಬಳಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ನೆಲೆಗಳು ಬೇರೆ ಮಹಿಳಾ ವಿಮರ್ಶಕಿಯರ ಸ್ತ್ರೀವಾದಿ ಚಿಂತನಾ ಕ್ರಮಕ್ಕಿಂತ ಹೇಗೆ ಭಿನ್ನತೆಯಿಂದ ಕೂಡಿವೆ ಎಂಬುದನ್ನು ವಿಶ್ಲೇಷಿಸುವುದು.

**ಊ.** ಕನ್ನಡದ ಸ್ತ್ರೀವಾದಿ ಚಿಂತನೆಗೆ ಆಶಾದೇವಿಯವರು ನೀಡುವ ಹೊಸ ಆಯಾಮ ಯಾವುವು, ಹೊಸಕಾಲದ ಪ್ರಸ್ತುತ ವಿದ್ಯಮಾನಗಳನ್ನು ಅರ್ಥೈಸಲು ಆಶಾದೇವಿಯವರ ಯಾವ ಮಾದರಿಯು ಸಹಾಯಕವಾಗುತ್ತವೆ ಎಂಬುದನ್ನು ಕಂಡುಕೊಳ್ಳುವುದು.

### ೧.೩. ಅಧ್ಯಯನದ ವಿಧಾನ

**ಅ.** ಇಲ್ಲಿ ಆಶಾದೇವಿ ಅವರ ಸ್ತ್ರೀವಾದಿ ಚಿಂತನೆಯನ್ನು ಅಧ್ಯಯನಕ್ಕೆ ಒಳಪಡಿಸುತ್ತಿರುವುದರಿಂದ ಈ ಅಧ್ಯಯನದಲ್ಲಿ ಆಶಾದೇವಿಯವರ ಕೃತಿಗಳನ್ನು ಮುಖ್ಯ ಕೇಂದ್ರವಾಗಿಟ್ಟುಕೊಂಡು ಕೃತಿಕೇಂದ್ರಿತ ವಿಧಾನವನ್ನು ಅನುಸರಿಸಲಾಗಿದೆ.

**ಆ.** ಆಶಾದೇವಿಯವರ ಚಿಂತನೆಯ ವಿನ್ಯಾಸಗಳನ್ನು ಶೋಧಿಸುವಾಗ ಅವರ ವಿಮರ್ಶೆಯ ಭಾಷೆ, ವಸ್ತು, ರೂಪಕ, ಪ್ರತಿಮೆ, ಪರಿಕಲ್ಪನೆಗಳನ್ನು ಒಳಗೊಂಡ ಆಶಾದೇವಿಯವರ ಚಿಂತನೆಯಲ್ಲಿ ತಾತ್ವಿಕ ಧೋರಣೆಗಳು ಹೇಗೆ ಅಂತರ್ಗತವಾಗಿವೆ ಎಂಬುದನ್ನು ಅಧ್ಯಯನ ಮಾಡಲಾಗುವುದು. ಕನ್ನಡದ ಸ್ತ್ರೀವಾದಿ ವಿಮರ್ಶಾ ಸಾಹಿತ್ಯದಲ್ಲಿ ಆಶಾದೇವಿಯವರ ಸ್ತ್ರೀವಾದಿ ಚಿಂತನೆಗಳು ಹೇಗೆ ಭಿನ್ನತೆಯಿಂದ ಕೂಡಿವೆ ಎಂಬುದನ್ನು ತೌಲನಿಕ ವಿಮರ್ಶಾ ವಿಧಾನದ ಮೂಲಕ ಅಧ್ಯಯನ ಮಾಡಲಾಗುವುದು.

**ಇ.** ಆಶಾದೇವಿಯವರು ಸಾಹಿತ್ಯ, ಸಮಾಜವನ್ನು ಕುರಿತು ಯಾವ ಧೋರಣೆಯನ್ನು ತಾಳುತ್ತಾರೆ ಹಾಗೂ ಅವರ ಸ್ತ್ರೀವಾದಿ ಚಿಂತನೆಯ ಸಾಮಾಜಿಕ ಮಹತ್ವ ಮತ್ತು ಮಿತಿಗಳನ್ನು ತಿಳಿಯುವ ಭಾಗವಾಗಿ ಮೌಲ್ಯಮಾಪನ ವಿಧಾನವನ್ನು ಅನುಸರಿಸಲಾಗುವುದು.

**ಈ.** ಆಶಾದೇವಿಯವರ ಸ್ತ್ರೀವಾದಿ ವಿಮರ್ಶೆಯು ಸಾಂಸ್ಕೃತಿಕ ಮಹತ್ವ ಹೊಂದಿರುವುದರಿಂದ ಇವರ ಹೆಚ್ಚಿನ ಲೇಖನಗಳು ಸಮಾಜ, ಸಾಹಿತ್ಯವನ್ನು ಪ್ರತಿನಿಧಿಸುವುದರಿಂದ ಇವರ ಚಿಂತನೆಗಳನ್ನು ಬಹುಶಿಸ್ತಿಯ ವಿಧಾನದ ಮೂಲಕ ಅಧ್ಯಯನಕ್ಕೆ ಒಳಪಡಿಸಲಾಗುವುದು.

**ಉ.** ಆಶಾದೇವಿಯವರ ಚಿಂತನೆಯ ವೈಶಿಷ್ಟತೆಯನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿರುವುದರಿಂದ ಲೇಖಕಿ ಕೇಂದ್ರಿತ ವಿಧಾನವನ್ನು ಅನುಸರಿಸಲಾಗುವುದು.

### ೧.೪. ಅಧ್ಯಯನದ ವ್ಯಾಪ್ತಿ

ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಸ್ತ್ರೀವಾದಿ ವಿಮರ್ಶೆಯು ತನ್ನದೆ ಆದ ಪ್ರಾಮುಖ್ಯತೆ ಪಡೆದುಕೊಂಡಿದೆ. ಸ್ತ್ರೀವಾದಿ ವಿಮರ್ಶೆಗೆ ಹಲವಾರು ಮಹಿಳಾ ಲೇಖಕಿಯರು ಮತ್ತು ಪುರುಷ ಲೇಖಕರು ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ತಮ್ಮದೇ ಆದ ವಿಭಿನ್ನ

ದೃಷ್ಟಿಕೋನದ ಮೂಲಕ ಸ್ತ್ರೀವಾದಿ ವಿಮರ್ಶೆಯಲ್ಲಿ ಗುರುತಿಸಿಕೊಂಡಿರುವ ಎಂ.ಎಸ್.ಆಶಾದೇವಿಯವರ ಸಾಹಿತ್ಯವನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುತ್ತಿದ್ದು, ಅವರ 'ನಾರೀಕೇಳಾ' ಶೀರ್ಷಿಕೆಯ ಮೂಲಕ ಪತ್ರಿಕೆಗಳಿಗೆ ಬರೆದಿರುವ ಪ್ರಮುಖ ೪೫ ಅಂಕಣಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುವುದು. ಇದರ ಜತೆಗೆ ಇವರ 'ನಡುವೆ ಸುಳಿವ ಆತ್ಮ' (ಸ್ತ್ರೀ ಸಂಕಥನದ ಚಹರೆಗಳು), 'ಸ್ತ್ರೀ ಮತವನುತ್ತರಿಸಲಾಗದೆ?', (ಸಾಹಿತ್ಯ-ಸಂಸ್ಕೃತಿ ಕುರಿತ ಲೇಖನಗಳು) ಕೃತಿಗಳನ್ನೂ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇಲ್ಲಿ ಅವರು ಮಾಡಿರುವ ಅನುವಾದಗಳನ್ನು (ಡಿ.ಆರ್. ನಾಗರಾಜ ಅವರ ಫ್ಲೇಮಿಂಗ್ ಫೀಟ್: ಉರಿಚಮ್ಮಾಳಿಗೆ) ಬಳಸಿಕೊಂಡಿಲ್ಲ.

### ೧.೫. ಅಧ್ಯಯನದ ಸ್ವರೂಪ

ಪ್ರಸ್ತುತ ಸಂಶೋಧನ ಪ್ರಬಂಧದಲ್ಲಿ ಒಂಬತ್ತು ಅಧ್ಯಾಯಗಳಾಗಿ ವಿಷಯವನ್ನು ವಿಭಾಗಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮೊದಲ ಅಧ್ಯಾಯದಲ್ಲಿ, ಅಧ್ಯಯನದ ತಾತ್ವಿಕ ಸ್ವರೂಪವನ್ನು ಚರ್ಚಿಸಲಾಗಿದೆ. ಅಧ್ಯಾಯ ಎರಡರಲ್ಲಿ, ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆಯ ಬೆಳವಣಿಗೆಯ ಸ್ಥಿತ್ಯಂತರಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಅಧ್ಯಾಯ ಮೂರರಲ್ಲಿ, ಆಶಾದೇವಿ ಅವರ ಪರಿಚಯ ಮತ್ತು ಪೂರ್ವಾಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಅವರ ವಿಮರ್ಶೆಯ ಪ್ರತಿಶಕ್ತಿ ನೆಲೆಯ ಚಿಂತನೆಗಳನ್ನು ಚರ್ಚಿಸಲಾಗಿದೆ. ಅಧ್ಯಾಯ ಐದರಲ್ಲಿ, ಅವರ ವಿಮರ್ಶೆಯ ಪ್ರತಿರೋಧ ಚಿಂತನ ನೆಲೆಯ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ. ಅಧ್ಯಾಯ ಆರರಲ್ಲಿ, ಸ್ತ್ರೀ ಚೈತನ್ಯದ ವಿವಿಧ ಧಾತುಗಳಾದ ತಾಯ್ತನ, ತ್ಯಾಗ, ಪ್ರೀತಿ, ಧಾರಣ ಶಕ್ತಿಯನ್ನು ಅವರ ವಿಮರ್ಶೆಯ ಮೂಲಕ ಚರ್ಚೆಗೆ ಒಳಪಡಿಸಲಾಗಿದೆ. ಅಧ್ಯಾಯ ಏಳರಲ್ಲಿ, ಅವರ ಬರೆಹದ ಸ್ತ್ರೀಅಭಿವ್ಯಕ್ತಿಯ ವಿವಿಧ ಆಯಾಮಗಳನ್ನು ಗುರುತಿಸಲಾಗಿದೆ. ಅಧ್ಯಾಯ ಎಂಟರಲ್ಲಿ, ಆಶಾದೇವಿಯವರ ಅಭಿವ್ಯಕ್ತಿ ವಿಧಾನ ಮತ್ತು ಭಾಷಾ ಬಳಕೆಯ ಕ್ರಮವನ್ನು ಚರ್ಚಿಸಲಾಗಿದೆ. ಅಧ್ಯಾಯ ಒಂಬತ್ತರಲ್ಲಿ, ಅಧ್ಯಯನದ ಮುಖ್ಯ ಫಲಿತಗಳನ್ನು ದಾಖಲಿಸಲಾಗಿದೆ. ಅನುಬಂಧದಲ್ಲಿ ಅವರ ಸಂದರ್ಶನವನ್ನು ಕೊಡಲಾಗಿದೆ.

*****

# ಅಧ್ಯಾಯ–ಎರಡು

# ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆ: ಬೆಳವಣಿಗೆಯ ಸ್ಥಿತ್ಯಂತರಗಳು

## ೨.೧.ಪ್ರವೇಶ

ಸ್ತ್ರೀವಾದಿ ಚಿಂತನೆ ಎಂಬುದು ಕನ್ನಡದ ನೆಲದಲ್ಲಿ ಉಗಮಗೊಂಡಿದ್ದಲ್ಲ. ಕನ್ನಡದಲ್ಲಿ ಈ ಚಿಂತನೆ ಹುಟ್ಟುವುದಕ್ಕೆ ಪೂರ್ವದಲ್ಲಿ ಒಂದು ದೀರ್ಘವಾದ ಇತಿಹಾಸ ಇದೆ. ಪಾಶ್ಚಾತ್ಯ ಜಗತ್ತಿನಲ್ಲಿ ಈ ಸ್ತ್ರೀವಾದಿ ಚಿಂತನೆಯ ಮೊದಲ ಘಟ್ಟಗಳಲ್ಲಿ ಚಳುವಳಿಯ ನೆಲೆಯನ್ನು ಹೊಂದಿತ್ತು. ನಂತರದ ಘಟ್ಟಗಳಲ್ಲಿ ಈ ಚಿಂತನೆಯ ಬಗೆಗೆ ಆಳವಾದ ಬುನಾದಿ ಹಾಕಿ ಬೆಳಸಿದವರು ಎಲೆನಾ ಶೋವಾಲ್ಟರ್, ಸಿಮೋನ್ ದಿ ಬೋವಾ, ವರ್ಜೀನಿಯಾ ವುಲ್ಫ್ ಮೊದಲಾದವರು. ಇವರು ತಮ್ಮ ಕೃತಿಗಳ ಮೂಲಕ ಸ್ತ್ರೀವಾದಿ ಚಿಂತನೆಯ ಧ್ಯೇಯ ಧೋರಣೆಗಳನ್ನು ಗುರುತಿಸುವ ಭಾಗವಾಗಿ ತಾತ್ವಿಕವಾದ ಸ್ವರೂಪವನ್ನು ಒದಗಿಸಿದರು. ಈ ಚಿಂತನೆಯ ಮೊದಲ ಘಟ್ಟವು ೧೯ನೇ ಶತಮಾನದ ಅಂತ್ಯ ಮತ್ತು ೨೦ನೇ ಶತಮಾನದ ಆರಂಭದ ಕಾಲಘಟ್ಟಕ್ಕೆ ಸಂಬಂಧಿಸಿದೆ. ಮಹಿಳೆಯರಿಗೆ ಮತ ಚಲಾಯಿಸುವ ಹಕ್ಕು ಒದಗಿಸಿಕೊಡುವುದು ಈ ಚಳುವಳಿಗಳ ಮುಖ್ಯ ಧ್ಯೇಯವಾಗಿತ್ತು. ಎರಡನೆಯ ಘಟ್ಟದ ಸ್ತ್ರೀವಾದವು ೧೯೬೦ರ ಅಂತ್ಯ ಮತ್ತು ೧೯೭೦ರ ದಶಕಗಳಲ್ಲಿ ಮೊಳಕೆ ಒಡೆಯಿತು. ಸ್ತ್ರೀವಾದಿ ಚಳುವಳಿಗಳು ಎಲ್ಲಾ ಕ್ಷೇತ್ರಗಳಲ್ಲೂ ಮಹಿಳಾ ಅಸಮಾನತೆಯನ್ನು ಪ್ರತಿಭಟಿಸಿದವು. ಈ ಹಂತದ ಪ್ರತಿಭಟನೆ ಕೇವಲ ರಾಜಕೀಯ ಸಮಾನತೆಗಾಗಿ ನಡೆಸಿದ ಹೋರಾಟ ಮಾತ್ರವಾಗಿರದೆ, ಕೌಟುಂಬಿಕ, ಲೈಂಗಿಕ ಮತ್ತು ಔದ್ಯೋಗಿಕ, ಲಿಂಗ ಸಮಾನತೆ, ವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟವಾಗಿತ್ತು.

ಮಹಿಳೆಯರ ಸ್ಥಾನಮಾನ ಎಲ್ಲಾ ಸಮಾಜಗಳಲ್ಲಿ ಏಕ ಪ್ರಕಾರವಾಗಿ ಇರುವುದರಿಂದಲೇ, ಪಾಶ್ಚಾತ್ಯರಲ್ಲಿ ಹುಟ್ಟಿಕೊಂಡ ಈ ಚಿಂತನೆಯು, ಕಾಲಾನಂತರದಲ್ಲಿ ಭಾರತಕ್ಕೆ, ಆ ನಂತರ ಕನ್ನಡಕ್ಕೆ ಕಾಲಿಟ್ಟಿತು. ಕನ್ನಡದ ಸ್ತ್ರೀವಾದಿ ಚಿಂತನೆಯ ಮೇಲೆ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಯ ಪ್ರಭಾವವಿದ್ದರೂ ಕನ್ನಡದ ಚಿಂತನೆಗೆ ಸ್ಥಳೀಯ ಪ್ರೇರಣೆಗಳಿವೆ. ಈ ಚಿಂತನೆಯನ್ನು ಪಾಶ್ಚಾತ್ಯರ ಬಳುವಳಿ ಎಂದು ಹೇಳಬಹುದಾದರೂ, ಕನ್ನಡದಲ್ಲಿ ಹಿಂದಿನಿಂದಲೂ ಈ ಚಿಂತನೆಗೆ ಬೇಕಾದ ಪರಂಪರೆಯಿದೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಲ್ಲಿ ಅನೇಕ ಮಹಿಳಾ ಶರಣೆಯರು ಸ್ತ್ರೀವಾದದ ನೆಲೆಯಲ್ಲಿಯೇ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಟ ಮಾಡಿರುವುದು ಇದರಲ್ಲಿ ಮುಖ್ಯವಾದುದು. ಅದಲ್ಲದೆ ದ್ರೌಪದಿ, ಸೀತೆ ಮೊದಲಾದ ಪೌರಾಣಿಕ ಪಾತ್ರಗಳ ಮೂಲಕ ನಾವು ಸ್ತ್ರೀವಾದಿ ಹೋರಾಟವನ್ನು ಗುರುತಿಸಬಹುದು. ಯಾವಾಗ ಈ ಪುರುಷ ಪ್ರಧಾನ ಸಮಾಜದಲ್ಲಿ ದಬ್ಬಾಳಿಕೆ ಹುಟ್ಟಿಕೊಂಡಿತೋ ಅಂದೇ ಸ್ತ್ರೀವಾದ ಚಿಗುರೊಡೆಯಿತು ಎಂದು ಹೇಳಬಹುದು. ಮಹಿಳೆಗೆ ತಾನು ಶೋಷಣೆಗೆ ಒಳಗಾಗಿದ್ದೇನೆ ಎಂಬ ಅರಿವು ಬಂದ ಕ್ಷಣದಿಂದಲೇ ಸ್ತ್ರೀವಾದಿ ಚಿಂತನೆಯ ಹುಟ್ಟಿತು ಎನ್ನುವ ಪ್ರಸಿದ್ಧ ಮಾತಿದೆ. ಅಂತೆಯೇ ಅದರ ಅರಿವಿನ ನೆಲೆಗಳನ್ನು ಹೀಗೆ ಗುರುತಿಸಬಹುದು:

**ಅ.**ಮಹಿಳೆಯನ್ನು ಎಲ್ಲಾ ಸಮಾಜಗಳಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಶೋಷಣೆಗೆ ಗುರಿಪಡಿಸಿರುವುದು. **ಆ.**ಮಹಿಳೆಯ ನೈತಿಕ ಸ್ವಾತಂತ್ರ್ಯವನ್ನು, ಲೈಂಗಿಕ ಸ್ವಾತಂತ್ರ್ಯವನ್ನು, ಸಮಾನತೆಯ ಹಕ್ಕನ್ನು ಹತ್ತಿಕ್ಕಿರುವುದು. **ಇ.**ಕುಟುಂಬದಲ್ಲಿ ಅಧೀನ ಸ್ಥಿತಿಗೆ ತಳ್ಳಿರುವುದು ಹಾಗೂ ಪುರುಷನು ಆಕೆಯ ಎಲ್ಲಾ ಹಕ್ಕು, ಸ್ವಾತಂತ್ರ್ಯವನ್ನು ನಿಯಂತ್ರಿಸುತ್ತಿರುವುದು. **ಈ.**ಮಹಿಳೆಯು ಎಲ್ಲಾ ಮಾದರಿಗಳಲ್ಲಿ ಎರಡನೆಯ ದರ್ಜೆಯವಳೆಂದು, ಅವಳು ದೈಹಿಕವಾಗಿ, ಜೈವಿಕವಾಗಿ ಹುಟ್ಟಿನಿಂದಲೇ ದುರ್ಬಲಳು ಎಂದು ಪಿತೃಪ್ರಧಾನ ಸಮಾಜ ಗುರುತಿಸುವುದು. **ಉ.**ಮಹಿಳೆಯ ಸ್ವತಂತ್ರ ತೀರ್ಮಾನಗಳನ್ನು ಕಿತ್ತುಕೊಂಡಿರುವುದು ಹಾಗೂ ಕುಟುಂಬದ ಹೊರಗೆ ಮತ್ತು ಒಳಗೆ ಆಕೆಯ ವ್ಯಕ್ತಿತ್ವವನ್ನು ಹತ್ತಿಕ್ಕಿರುವುದು. **ಊ.**ಶಿಕ್ಷಣ, ಉದ್ಯೋಗ, ವೇತನ ಮತ್ತು ಅಭಿವೃದ್ಧಿ ಸವಲತ್ತುಗಳಲ್ಲಿ ಸಮಾನ ಸ್ಥಾನ-ಮಾನ ಇಲ್ಲದಿರುವುದು. **ಎ.**ಪುರುಷ ಸಮಾಜದ ಈ ನಿಯಂತ್ರಣದ ಮಾದರಿಗಳನ್ನು, ದಬ್ಬಾಳಿಕೆಗಳನ್ನು, ವಿರೋಧಿಸುವುದು ಮತ್ತು ಗುರುತಿಸುವುದು ಹಾಗೂ ಮಹಿಳೆಯ ಸಹಜ ವಿಕಸನಕ್ಕೆ ದಾರಿ ಮಾಡಿಕೊಡುವುದು. **ಏ.**ಮಹಿಳೆಯರನ್ನು ಕುರಿತ ಇದುವರೆಗಿನ ಸ್ಥಾಪಿತ ಮೌಲ್ಯಗಳನ್ನು, ದೃಷ್ಟಿಕೋನಗಳನ್ನು ಹೊಡೆಯುವ ಮೂಲಕ ಮಹಿಳೆಯ ನೈಜ ಸ್ವರೂಪವನ್ನು ಗುರುತಿಸುವುದು. **ಐ.** ಮಹಿಳಾ ಅಭಿವ್ಯಕ್ತಿಯನ್ನು ಮುನ್ನೆಲೆಗೆ ತರುವುದು, ಪುರುಷ ಧೋರಣೆಯ ನೆಲೆಯಲ್ಲಿ ಸಾಹಿತ್ಯದ ಓದನ್ನು ನಿರಾಕರಿಸುವುದು, ಆ ಮೂಲಕ ಮಹಿಳಾ ಸಾಹಿತ್ಯವನ್ನು ಭಿನ್ನ ಮಾದರಿಯಲ್ಲಿ ಗುರುತಿಸುವ ಮೂಲಕ ಮಹಿಳಾ ಸಾಹಿತ್ಯಕ್ಕೆ ಸೂಕ್ತ ನೆಲೆ-ಬೆಲೆಗಳನ್ನು ದೊರಕಿಸಿಕೊಡುವುದು.

### ೨.೨. ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆಯ ನೆಲೆಗಳು

ಈ ಸ್ತ್ರೀವಾದವು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ಹಲವಾರು ಸ್ಥಿತ್ಯಂತರವನ್ನು ಹಾಗೂ ಭಿನ್ನ ಸ್ವರೂಪಗಳನ್ನು ಪಡೆದುಕೊಂಡಿದೆ. ಮಹಿಳೆಯ ಸ್ಥಿತಿ-ಗತಿ, ಸ್ಥಾನ-ಮಾನಗಳು ಏಕರೂಪವಾಗಿದ್ದರೂ ವಿವಿಧ ಮಗ್ಗಲುಗಳಿಂದ ಕೂಡಿವೆ. ಆ ಕಾರಣಕ್ಕಾಗಿಯೇ ಸ್ತ್ರೀವಾದದ ವಿವಿಧ ಮಾದರಿಗಳನ್ನು ಗುರುತಿಸಬಹುದು. ಮುಖ್ಯವಾಗಿ ಮಾರ್ಕ್ಸ್‌ವಾದಿ ಸ್ತ್ರೀವಾದ, ಉದಾರವಾದಿ ಸ್ತ್ರೀವಾದ, ತೀವ್ರಗಾಮಿ ಸ್ತ್ರೀವಾದ, ಕಪ್ಪು ಸ್ತ್ರೀವಾದ ಎಂಬ ಮಾದರಿಗಳಿವೆ. ಈ ಎಲ್ಲಾ ಸ್ತ್ರೀವಾದಗಳು ಆ ಹೊತ್ತಿನ ಸಾಮಾಜಿಕ ಒತ್ತಡ, ಮಹಿಳೆಯ ಸ್ಥಿತಿ-ಗತಿ, ಪುರುಷ ಸಮಾಜದ ನಿಲುವುಗಳಿಗೆ ಅನುಗುಣವಾಗಿ ಹಲವಾರು ಒತ್ತಡಗಳಿಂದ ಹಾಗೂ ಹಲವಾರು ಕಾರಣಗಳಿಂದ ಹುಟ್ಟಿಕೊಂಡಿವೆ. ಈ ಎಲ್ಲಾ ಸ್ತ್ರೀವಾದಿ ಸಿದ್ಧಾಂತಗಳ ಆಶಯ, ಉದ್ದೇಶ ಹಾಗೂ ಹೋರಾಟದ ನೆಲೆಗಳು ಒಂದೇ ಆಗಿವೆ. ಈ ಎಲ್ಲಾ ಸಿದ್ಧಾಂತಗಳು, ಹೋರಾಟಗಳು ಮಹಿಳಾ ಬಿಡುಗಡೆ ಮತ್ತು ಸಮಾನತೆಗೆ ಮುಖ್ಯವಾಗಿ ಒತ್ತಾಯಿಸುತ್ತವೆ.

ಸ್ತ್ರೀವಾದಿ ಚಿಂತನೆಯು ೭೦-೮೦ರ ದಶಕಗಳಲ್ಲಿ ಚಳುವಳಿಗಳ ರೂಪದಲ್ಲಿ ಉಗಮಗೊಂಡರು ಕೂಡ ಆನಂತರದಲ್ಲಿ ಒಂದು ಸಿದ್ಧಾಂತವಾಗಿ ತಾತ್ವಿಕ ಸ್ವರೂಪವನ್ನು ಪಡೆದುಕೊಂಡು ಹಲವಾರು ಪಲ್ಲಟಗಳನ್ನು ಕಂಡಿತು. ಸ್ತ್ರೀವಾದಿ ಚಿಂತನೆಯು ಕೇವಲ ಸಾಮಾಜಿಕ ಹೋರಾಟವಾಗಿರದೆ, ಮಹಿಳೆಯು ಎಲ್ಲಿ ಶೋಷಣೆಗೆ ಒಳಪಟ್ಟಿರುವಳೋ, ಆ ಎಲ್ಲಾ ವಿಭಾಗಗಳಿಗೂ ಈ ಚಿಂತನೆ ಕಾಲಿಟ್ಟಿತು. ಮೊದಲು ಸ್ತ್ರೀವಾದಿ ಚಿಂತಕಿಯರು ಮಹಿಳೆಯ ಸಮಾನತೆಯನ್ನು ಸಾಮಾಜಿಕವಾಗಿ, ಕೌಟುಂಬಿಕವಾಗಿ

ದೊರಕಿಸಿಕೊಳ್ಳಲು ಹೋರಾಟ ಮಾಡಿದವರು. ಆನಂತರ ಅದು ಸೃಜನಶೀಲ ಮತ್ತು ಸೃಜನೇತರ ಸಾಹಿತ್ಯದವರೆಗೂ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು.

ಸ್ತ್ರೀವಾದಿ ನೆಲೆಯ ಚಿಂತನೆ ಎನ್ನುವುದು ಕನ್ನಡದಲ್ಲಿ ಪ್ರಾರಂಭವಾಗಿ ಮತ್ತು ಅದು ಪಡೆದುಕೊಂಡ ಸ್ಥಿತ್ಯಂತರದ ಮಾದರಿಗಳನ್ನು ಗುರುತಿಸುವುದು ಈ ಹೊತ್ತಿನ ಅಗತ್ಯವಾಗಿದೆ. ಏಕೆಂದರೆ, ಹೀಗೆ ಈ ಒಂದು ಚಿಂತನೆಯ ಹುಟ್ಟಿನ ಬಗ್ಗೆ, ಅದರ ಇಂದಿನ ಮುಂದುವರಿಕೆಯ ಬಗ್ಗೆ, ಅದರ ನಿಲುವುಗಳ ಬಗ್ಗೆ, ಉದ್ದೇಶಗಳ ಬಗ್ಗೆ, ಅದರ ಮುಂದಿನ ನಡೆಯ ಬಗ್ಗೆ ಗಂಭೀರವಾದ ಅಧ್ಯಯನ ಇದುವರೆಗೂ ನಡೆದಿರುವುದಿಲ್ಲ. ಈ ನೆಲೆಯ ಚಿಂತನೆಗೆ ದೊಡ್ಡ ಇತಿಹಾಸವೂ ಇಲ್ಲ. ಈ ಸ್ತ್ರೀವಾದಿ ಚಿಂತನೆ ಮೊದಲಿನಿಂದಲೂ ಇರಲಿಲ್ಲ ಅನ್ನುವುದು ನಿಜ. ಆದರೆ ಅದನ್ನು ಗುರುತಿಸುವುದಕ್ಕೆ ನಮಗೆ ಸಾಧ್ಯ ಆಗಿರಲಿಲ್ಲ ಅನ್ನುವುದು ನಮ್ಮ ಎದುರಿಗೆ ಇರುವ ದೊಡ್ಡ ಸವಾಲು ಎನ್ನಬಹುದು.

ಕನ್ನಡದ ಸಂದರ್ಭದಲ್ಲಿ ಈ ವಿಮರ್ಶೆಯ ಪ್ರಕಾರ ಹುಟ್ಟಿಕೊಂಡಿದ್ದು ತಿರುಮಲಾಂಬಾ ಅವರ ಕಾದಂಬರಿಗಳಿಗೆ ಮಾಸ್ತಿ ಅವರು ಬರೆದ ವಿಮರ್ಶನ ಲೇಖನದಿಂದ (೧೯೧೪). ಕನ್ನಡದಲ್ಲಿ ಇದು ಒಬ್ಬ ಲೇಖಕಿಯ ಮೇಲೆ ಒಬ್ಬ ಲೇಖಕನು ಬರೆದ ಮೊದಲ ವಿಮರ್ಶೆಯಾಗಿದೆ. ವಿಪರ್ಯಾಸ ಎಂದರೆ, ಮಾಸ್ತಿಯವರು ತುಂಬಾ ಕಟುವಾಗಿ ತಿರುಮಲಾಂಬಾ ಅವರ ಕೃತಿಯನ್ನು ವಿಮರ್ಶೆ ಮಾಡಿದ್ದರು. ಮಹಿಳಾ ಲೇಖಕಿಯನ್ನು ಕುರಿತು ಮಾಸ್ತಿಯಂತಹ ದೊಡ್ಡ ಲೇಖಕರು ಅಡುಗೆ ಮನೆಯಲ್ಲಿ ಇರುವವರು ಸಾಹಿತ್ಯ ಬರೆಯಬಾರದು ಎಂದು ಕಟುವಾದ ನೆಲೆಯಲ್ಲಿ ಟೀಕಿಸಿದರು. ಕನ್ನಡದ ವಿಮರ್ಶಾ ಸಾಹಿತ್ಯ ಹುಟ್ಟಿಕೊಂಡಿದ್ದು ಪುರುಷವಾದಿ ಧೋರಣೆಯಿಂದ ಎಂದು ಇದು ಸೂಚಿಸುತ್ತದೆ. ಕನ್ನಡ ಸಾಹಿತ್ಯ ವಿಮರ್ಶೆಯು ಬಹು ವರ್ಷಗಳ ತನಕ ಪುರುಷವಾದಿ ಧೋರಣೆಯಿಂದಲೇ ಸಾಗಿ ಬಂದಿದೆ. ಯಾವಾಗ ಕನ್ನಡ ಸಾಹಿತ್ಯದಲ್ಲಿ ಹೊಸಸಾಹಿತ್ಯ ಸಂವೇದನೆಗಳು ಆರಂಭಗೊಂಡು ಹೊಸ ಕೃತಿಗಳು ಬಂದವೋ ಆಗ ಹೊಸ-ಹೊಸ ವಿಮರ್ಶಾ ಸಿದ್ಧಾಂತಗಳು, ಮಾನದಂಡಗಳು ಹುಟ್ಟಿಕೊಂಡವು. ಈ ಕಾಲಘಟ್ಟಗಳಲ್ಲಿ ಮಹಿಳಾ ದೃಷ್ಟಿಕೋನದ ವಿಮರ್ಶೆಯು ಪುರುಷ ವಿಮರ್ಶೆಯ ಒಂದು ಭಾಗ ಮಾತ್ರ ಆಗಿತ್ತು. ಸ್ತ್ರೀವಾದಿ ವಿಮರ್ಶೆಯು ಸ್ವತಂತ್ರವಾಗಿ ಬೆಳೆಯಲಿಲ್ಲ. ದಮನಿತ ಸಮುದಾಯದ ಸಂವೇದನೆಗಳಿಗೆ ಸ್ಪಂದಿಸುವ ದಲಿತ ಬಂಡಾಯ ಪ್ರಕಾರವು ತೀವ್ರ ಸ್ವರೂಪ ಪಡೆದುಕೊಂಡ ನಂತರದಲ್ಲಿ, ಇದರ ಒಂದು ಭಾಗವಾಗಿ ಮಹಿಳಾ ಸಾಹಿತ್ಯ ವಿಮರ್ಶೆಯು ಕವಲೊಡೆದು ಬೆಳೆಯಿತು. ದಲಿತ ಬಂಡಾಯ ಚಳುವಳಿಯಲ್ಲಿ ಗ್ರಾಮೀಣ ಮಹಿಳೆಯನ್ನು ಕುರಿತಾದ ಹೋರಾಟದ ಹಾಡುಗಳು ಬಂದರು ಕೂಡ ಸ್ವತಂತ್ರವಾಗಿ ಮಹಿಳೆಯರೇ ಬರೆದಿರುವುದು ಕಡಿಮೆ. ಇದನ್ನು ದಲಿತ ಬಂಡಾಯ ಸಾಹಿತ್ಯ ಮತ್ತು ಚಳುವಳಿಗಿರುವ ಮಿತಿಯಾಗಿಯೂ ನೋಡಬಹುದು. ಇದರ ನಂತರ ಮಹಿಳೆಯು ಹೆಚ್ಚು ಶಿಕ್ಷಣ ಪಡೆದಂತೆ, ಆಕೆಯು ಹೆಚ್ಚು ಪ್ರಖರವಾದ ಮಟ್ಟದಲ್ಲಿ ಸೃಜನಶೀಲ ಮತ್ತು ಸೃಜನೇತರ ಸಾಹಿತ್ಯ ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತ ಸಾಗಿದಳು. ಆಗ ಮಹಿಳೆಯು ಕೇವಲ ಪುರುಷ ನೆಲೆಯಲ್ಲಿ ಮಾತ್ರ ರೂಪಗೊಂಡಿರುವ ಸಾಹಿತ್ಯವನ್ನು ಗುರುತಿಸಿ, ಇಲ್ಲಿನ ಪುರುಷ ಹುನ್ನಾರಗಳನ್ನು ಮೀರುವ ನೆಲೆಯಲ್ಲಿ ಸ್ತ್ರೀವಾದಿ ವಿಮರ್ಶಾ ಸಿದ್ಧಾಂತ ಹುಟ್ಟಿಕೊಂಡಿತು.

ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆಗಳನ್ನು ಇಲ್ಲಿಯವರೆಗೂ ಅಧ್ಯಯನ ಮಾಡುತ್ತ ಬಂದಿರುವುದು ಒಂದು ಆನುಷಂಗಿಕ ನೆಲೆಯಲ್ಲಿ ಮಾತ್ರ. ಅದನ್ನು ವಿಶೇಷ ಓದಿನ ನೆಲೆಯಲ್ಲಿ ಅಧ್ಯಯನ ಮಾಡಿರುವುದು ವಿರಳ. ೮೦ನೇ ದಶಕದ ಮಹಿಳಾ ಕಾವ್ಯವನ್ನು ಆನುಷಂಗಿಕವಾಗಿ ಕೊನೆಯಲ್ಲಿ ಅಧ್ಯಯನ ಉಲ್ಲೇಖಿಸುತ್ತಿದ್ದರು. ಮೊದಲು ಪುರುಷರು ಬರೆದ ಮೇಲುದರ್ಜೆಯ ಕಾವ್ಯಗಳನ್ನು ಚರ್ಚೆಮಾಡಿ, ಕೊನೆಯಲ್ಲಿ ಪ್ರತಿಭಾನಂದಕುಮಾರ್ ಕಾವ್ಯವನ್ನು ಚರ್ಚೆ ಮಾಡುತ್ತಿದ್ದರು. ಆದರೆ ಕಳೆದ ಇಪ್ಪತ್ತು, ಮೂವತ್ತು ವರ್ಷಗಳಿಂದ ಈ ಒಂದು ರಾಜಕೀಯ ಓದನ್ನು ಪ್ರಶ್ನಿಸಲಾಯಿತು. ಮಹಿಳೆಯರ ಬರವಣಿಗೆಯನ್ನು ಮೀಸಲಾತಿಯ ನೆಲೆಯಲ್ಲಿ ನೋಡುವ ಕ್ರಮ ಬದಲಾಗುತ್ತ ಬಂದಿತು. ಇಂದು ತಮ್ಮ ಸ್ತ್ರೀವಾದಿ ಚಿಂತನೆಯನ್ನು ಕೇವಲ ಬರವಣಿಗೆ ಹಾಗೂ ಮೀಸಲಾತಿಯ ನೆಲೆಯಲ್ಲಿ ನೋಡಬೇಕಾದ ಅಗತ್ಯ ಇಲ್ಲ ಎಂಬ ಹಾಗೆ, ಅದು ಒಂದು ದೊಡ್ಡ ಹೋರಾಟದ ಭಾಗವಾಗಿ ಬೆಳೆದಿದೆ. ತಮ್ಮದೇ ಆದ ಸ್ಥಾನ ಮತ್ತು ಅವಕಾಶವನ್ನು ಮಹಿಳೆಯರು ತುಂಬಾ ಸಹಜವಾಗಿ ಪಡೆದುಕೊಂಡಿದ್ದಾರೆ. ಹಿಂದೆ ಕನ್ನಡದಲ್ಲಿ ಸಣ್ಣಕತೆಗಳ ಮೇಲೆ ಅಧ್ಯಯನ ಮಾಡುವವರು ಕೊಡಗಿನ ಗೌರಮ್ಮನವರನ್ನು ಕೊನೆಗೆ ಸೇರಿಸಿಕೊಳ್ಳುತ್ತಿದ್ದರು. ಇನ್ನೂ ಕೊನೆಯಲ್ಲಿ ಸರಸ್ವತಿ ಬಾಯಿ ರಾಜವಾಡೆ ಅಥವಾ ಶ್ಯಾಮಲಾ ಬೆಳಗಾಂವಕರ್‌ರಂತಹ ಲೇಖಕಿಯರನ್ನು ಚರ್ಚೆ ಮಾಡುತ್ತಿದ್ದರು. ಆದರೆ ಇಂದು ಕೊಡಗಿನ ಗೌರಮ್ಮನವರನ್ನು ಕನ್ನಡದ ಮುಖ್ಯ ಕಥಾ ಪರಂಪರೆಯಲ್ಲಿಯೇ ಚರ್ಚೆ ಮಾಡಬೇಕಾಗಿದೆ. ಏಕೆಂದರೆ, ಅವರು ತಮ್ಮ ವಸ್ತು ಮತ್ತು ಭಾಷೆ ಎರಡರಲ್ಲಿಯೂ ಆ ಕಾಲಕ್ಕೆ ತುಂಬಾ ವಿಶಿಷ್ಟವಾಗಿದ್ದಾರೆ ಮತ್ತು ಭಿನ್ನವಾಗಿದ್ದಾರೆ. ಮತಾಂತರದ ಬಗ್ಗೆ, ವಿಧವಾ ವಿವಾಹದ ಬಗ್ಗೆ, ವೇಶ್ಯೆಯರ ಸಮಸ್ಯೆಗಳ ಬಗ್ಗೆ ಕತೆಗಳನ್ನು ಬರೆದಿದ್ದಾರೆ. ಆ ಹೊತ್ತಿನಲ್ಲಿಯೇ ಮಹಿಳಾ ಸಂವೇದನೆಯನ್ನು ತುಂಬಾ ಭಿನ್ನವಾದ ನೆಲೆಯಲ್ಲಿ ನೋಡಿದ್ದಾರೆ. ಹೀಗೆ ಮಹಿಳಾ ಅಭಿವ್ಯಕ್ತಿಯನ್ನು ಪ್ರಧಾನ ನೆಲೆಗೆ ತಂದು ಚರ್ಚಿಸುವ ಅನಿವಾರ್ಯತೆಯನ್ನು ಸ್ತ್ರೀವಾದಿ ಚಿಂತನೆ ತಂದುಕೊಟ್ಟಿತು.

ಬೇಂದ್ರೆಯವರು ಕೊಡಗಿನ ಗೌರಮ್ಮನವರ ಕತೆಗಳಿಗೆ ಮುನ್ನುಡಿಯನ್ನು ಬರೆದಿದ್ದಾರೆ. ಆ ಮುನ್ನುಡಿಯಲ್ಲಿ ಕೊಡಗಿನ ಗೌರಮ್ಮನವರ ಕತೆಗಳು ಕಟು ಮಧುರವಾಗಿವೆ ಎಂದು ಅವರು ಹೇಳುತ್ತಾರೆ. ಬೇಂದ್ರೆಯವರಂತಹ ಮೇಲ್‌ದರ್ಜೆಯ ಲೇಖಕರು ಸಖೀಗೀತದಲ್ಲಿ ಹೆಣ್ಣನ್ನು ಅಷ್ಟು ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನ ಪಡುವವರು, ಮಹಿಳೆಯರ ಬಗ್ಗೆ ಬರೆಯುವಾಗ ಒಂದು ತೋರಿಕೆಯ ನೆಲೆಯಲ್ಲಿ ಬರೆಯುತ್ತಾರೆ. ಇದರ ಅರ್ಥ ಬೇಂದ್ರೆಯವರನ್ನು ಪುರುಷ ಪ್ರಧಾನ ಸಮಾಜದ ಪ್ರತಿನಿಧಿಯಾಗಿ ನೋಡಬೇಕಿಲ್ಲ. ಈ ಒಂದು ಸಂವೇದನೆಯಲ್ಲಿ ಲೇಖಕಿಯರನ್ನು ಹಾಗೇ ನೋಡವುದರಲ್ಲಿಯೇ ಹಲವಾರು ತೊಡಕುಗಳಿವೆ. ಪ್ರತಿಭಾ ನಂದಕುಮಾರರ ಸಂಕಲನ ಸಾಹಿತ್ಯ ಪರಿಷತ್ತಿನ ಪರಿಷತ್ ಪತ್ರಿಕೆಯಲ್ಲಿ ಬಂದಾಗ, ಒಂದು ವಿಮರ್ಶೆಯಲ್ಲಿ ಇದನ್ನು ಬೇಂದ್ರೆಯವರು ಕಾಫೀ ಕುಡಿಯುತ್ತಾ ಓದುವುದಕ್ಕೆ ಚೆನ್ನಾಗಿದೆ ಎಂದು ಹೇಳುತ್ತಾರೆ. ಅಂದರೆ ಕಾಫಿಯನ್ನು ಕುಡಿಯುತ್ತಾ ಕಾವ್ಯವನ್ನು ಓದಬಾರದು ಎಂಬುದು ಅವರ ಉದ್ದೇಶ ಅಲ್ಲ. ಅವರ ಈ ಧೋರಣೆಯು ಮಹಿಳೆಯರನ್ನು ಮಹಿಳಾ ಲೇಖಕಿಯರ ಬರಹಗಳನ್ನು ತುಂಬಾ ಗಂಭೀರವಾಗಿ ತೆಗೆದುಕೊಳ್ಳಬೇಕಿಲ್ಲ ಎಂಬುದಾಗಿದೆ. ಅಂದರೆ ಬೇಂದ್ರೆಯವರು ಲೇಖಕಿಯರನ್ನು ಕುರಿತು ಹಾಗೂ ಅವರ ಕತೆ, ಕಾವ್ಯಗಳನ್ನು ಕುರಿತು ಈ ಮಾತುಗಳನ್ನು ಹೇಳುತ್ತಾರೆ. ಈ ಮೂಲಕ ಮಹಿಳೆಯರು ಈ ಕಾವ್ಯವನ್ನು ಬರೆದಿದ್ದಾರೆ

ಎಂಬುದನ್ನು ತುಂಬಾ ಗಂಭೀರ ನೆಲೆಯಲ್ಲಿ ತೆಗೆದುಕೊಳ್ಳಬೇಕಿಲ್ಲ ಎಂಬುದು ಅವರ ನಿಲುವು. ಆದರೆ ಇಂದು ಸ್ತ್ರೀವಾದಿ ಚಿಂತನೆಯು ಮಹಿಳೆಯರ ಅನುಭವಗಳನ್ನು ರಾಜಕಾರಣದ ವಿವಿಧ ನೆಲೆಯಲ್ಲಿ ಗುರುತಿಸುತ್ತದೆ. ಈ ಮೂಲಕ ಸ್ತ್ರೀವಾದಿ ವಿಮರ್ಶೆಯು ಪುರುಷ ಗ್ರಹಿಕೆಯ ಚಿಂತನೆಯನ್ನು ಬದಲಾಯಿಸಿಕೊಳ್ಳಬೇಕಾದ ಒಂದು ಅನಿವಾರ್ಯತೆಯನ್ನು ಗುರುತಿಸುತ್ತಿದೆ. ಈ ಅನಿವಾರ್ಯತೆಯಲ್ಲಿ ಮಹಿಳೆಯ ಅಸ್ಮಿತೆಯನ್ನು ಸ್ತ್ರೀವಾದಿ ಚಿಂತನೆ ತೋರಿಸಿ ಕೊಡುತ್ತಿದೆ. ಅಂತಹ ಒಂದು ಹಕ್ಕೊತ್ತಾಯವನ್ನು ಇಂದಿನ ಮಹಿಳಾಪರ ಚಿಂತಕಿಯರು ಕಟ್ಟಿ ಬೆಳೆಸುತ್ತಿದ್ದಾರೆ.

**೨.೩. ಕನ್ನಡದ ಸ್ತ್ರೀವಾದಿ ಚಿಂತಕಿಯರ ತಾತ್ವಿಕ ಗ್ರಹಿಕೆಯ ನೆಲೆಗಳು**

ಕನ್ನಡದಲ್ಲಿ ಸ್ತ್ರೀವಾದಿ ವಿಮರ್ಶೆ ಹುಟ್ಟಿಕೊಂಡಿದ್ದು ಮುಖ್ಯವಾಗಿ ಬರಗೂರು ರಾಮಚಂದ್ರಪ್ಪನವರು ಬರೆದ ಪುನರ್ ಮೌಲ್ಯೀಕರಣ ಮಾಲೆಯಲ್ಲಿ. ಇದರಲ್ಲಿ ಸಾಹಿತ್ಯ ಮತ್ತು ಮಹಿಳಾ ದೃಷ್ಟಿಕೋನದ ಬರವಣಿಗೆಗಳು ಶುರುವಾದವು. ಹೀಗೆ ಅನೇಕ ವಿಮರ್ಶಕರು ಮಹಿಳಾ ದೃಷ್ಟಿಕೋನದ ಮೂಲಕ ಕನ್ನಡದ ವಿಮರ್ಶಾ ಸಾಹಿತ್ಯವನ್ನು ಪ್ರವೇಶ ಮಾಡಿದರು. ಈ ಪರಂಪರೆಯನ್ನು ಇತ್ತೀಚಿನ ದಿನಗಳಲ್ಲಿ ತುಂಬಾ ಪ್ರಖರವಾಗಿ ಬೆಳೆಸುತ್ತ ಬಂದಿರುವವರು ಬಿ.ಎನ್.ಸುಮಿತ್ರಾ ಬಾಯಿ, ಎನ್.ಗಾಯತ್ರಿ, ವಿಜಯಾದಬ್ಬೆ, ಎಚ್.ಎಸ್.ಶ್ರೀಮತಿ, ವಿನಯಾ, ಕೆ.ನೀಲಾ, ಮೀನಾಕ್ಷಿ ಬಾಳಿ, ಎಂ.ಎಸ್.ಆಶಾದೇವಿ, ತಾರಿಣಿ ಶುಭದಾಯಿನಿ ಹಾಗೂ ಮುಂತಾದವರು. ಈ ಎಲ್ಲಾ ವಿಮರ್ಶಕಿಯರು ಸ್ತ್ರೀವಾದಕ್ಕೆ ಒಂದು ತಾತ್ವಿಕವಾದ ನೆಲೆಗಟ್ಟನ್ನು ಕೊಟ್ಟು ಮುನ್ನೆಲೆಗೆ ತರುತ್ತಿದ್ದಾರೆ. ಈ ಚಿಂತಕಿಯರು ಹಲವಾರು ವಿಭಿನ್ನ ಮಾದರಿಗಳಲ್ಲಿ ತಮ್ಮ ವಾದವನ್ನು ಕಟ್ಟಿ ಬೆಳೆಸುವಲ್ಲಿ, ವಿಸ್ತರಿಸುವಲ್ಲಿ ಮುನ್ನಡೆಯುತ್ತಿದ್ದಾರೆ. ಈ ಎಲ್ಲಾ ಚಿಂತಕಿಯರ ಉದ್ದೇಶ ಮಹಿಳಾ ವಿಮೋಚನೆ ಆಗಿದ್ದರು ಕೂಡ ಅವರ ಕಾರ್ಯ-ತಂತ್ರಗಳು, ಸಂಘಟನೆಯ ವಿಧಾನಗಳು ಹಲವಾರು ಮಾದರಿಗಳಲ್ಲಿ ಕಂಡು ಬರುತ್ತವೆ. ಮುಖ್ಯವಾಗಿ ಕನ್ನಡದಲ್ಲಿ ಸ್ತ್ರೀವಾದ ದಾಪುಗಾಲು ಇಡುತ್ತಿದ್ದ ಕಾಲದಲ್ಲಿ ಕನ್ನಡದ ಸ್ತ್ರೀವಾದಿ ಚಿಂತನೆಯ ತಾತ್ವಿಕತೆ, ಅದರ ಉದ್ದೇಶ, ಸ್ವರೂಪಗಳನ್ನು ಗುರುತಿಸುವಲ್ಲಿ ಬಿ.ಎನ್. ಸುಮಿತ್ರಾ ಬಾಯಿಯವರ ಬರವಣಿಗೆ ಕೆಲಸ ಮಾಡಿದೆ. ಇನ್ನು ಮೊದಲ ಘಟ್ಟದಲ್ಲಿ ಸ್ತ್ರೀವಾದಿ ಚಿಂತನೆಯಲ್ಲಿ ಹೆಚ್ಚು ಮಹಿಳೆಯರು ತೊಡಗಿಸಿಕೊಂಡಿರಲಿಲ್ಲ. ಆ ಒಂದು ಜಾಗೃತ ಮನಸ್ಥಿತಿ ಬಂದಿರದೇ ಇದ್ದ ಸಮಯದಲ್ಲಿ ಸ್ತ್ರೀವಾದಕ್ಕೆ ಒಂದು ತಾತ್ವಿಕವಾದ ಚೌಕಟ್ಟನ್ನು ಸುಮಿತ್ರಾಬಾಯಿ ಹಾಕಿಕೊಟ್ಟಿದ್ದಾರೆ. ಈ ನಿಟ್ಟಿನಲ್ಲಿ ಅವರ 'ವಿಚಯ' 'ಸಾರ್ವತ್ರಿಕದೆಡೆಗೆ' ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ 'ಸ್ತ್ರೀವಾದ' ಈ ಕೃತಿಗಳು ತುಂಬಾ ಪ್ರಮುಖವಾಗಿವೆ. 'ವಿಚಯ' ಕೃತಿಯಲ್ಲಿ ಒಟ್ಟು ಕನ್ನಡದ ಸಾಹಿತ್ಯದಲ್ಲಿನ ಸ್ತ್ರೀವಾದದ ಎಳೆಗಳನ್ನು ಗುರುತಿಸುವ ಕೆಲಸವನ್ನು ಅವರು ಮಾಡಿದ್ದಾರೆ.

ನಂತರ ಇವರ ಸಮಕಾಲೀನರಾದ ವಿಜಯಾದಬ್ಬೆ ಅವರು ಸಂಪಾದನೆ, ಅನುವಾದ, ವೈಚಾರಿಕ ಬರಹ ಮತ್ತು ವಿಮರ್ಶೆ ಹೀಗೆ ಹಲವು ರಂಗಗಳಲ್ಲಿ ಕೆಲಸ ಮಾಡಿದ್ದಾರೆ. 'ಸಂಪ್ರತಿ', 'ನಾರಿ ನೆಲೆ ದಿಗಂತ', 'ಮಹಿಳಾ ಸಾಹಿತ್ಯ ಸಮಾಜ' ಇವರ ಪ್ರಮುಖ ಕೃತಿಗಳಾಗಿವೆ. ಈ ಕೃತಿಗಳಲ್ಲಿ ವಿಚಾರ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳು ಹೆಚ್ಚಾಗಿವೆ. 'ಮಹಿಳಾ ಸಾಹಿತ್ಯ ಸಮಾಜ' ಕೃತಿಯಲ್ಲಿ ಮಹಿಳಾ ಸಾಹಿತ್ಯದಲ್ಲಿ ಪ್ರತಿಭಟನೆ, ಮಹಿಳಾ ವಿಮೋಚನೆ, ಶಿಕ್ಷಣ, ವರದಕ್ಷಿಣೆ ಸಮಸ್ಯೆ ಹೀಗೆ ಹಲವಾರು

ವಿಷಯಗಳನ್ನು ಒಳಗೊಂಡಿದೆ. ಮಹಿಳೆಯ ಬದುಕು ಕಾಲದಿಂದ ಕಾಲಕ್ಕೆ ಪಡೆದುಕೊಂಡ ಸ್ಥಿತ್ಯಂತರಗಳನ್ನು, ಬದಲಾವಣೆಯ ಕಾರಣಗಳನ್ನು ಹಾಗೂ ಅದರಲ್ಲಿನ ವಿನ್ಯಾಸಗಳನ್ನು ವಿಜಯಾದಬ್ಬೆ ತಮ್ಮ ಲೇಖನಗಳ ಮೂಲಕ ಆಳವಾದ ಚರ್ಚೆ ಮಾಡಿದ್ದಾರೆ. 'ನಾರಿ ನೆಲೆ ದಿಗಂತ' ಕೃತಿಯಲ್ಲಿ ಸ್ತ್ರೀವಾದ, ಸ್ತ್ರೀವಾದಿ ವಿಮರ್ಶೆ, ಮಹಿಳಾ ಸಬಲೀಕರಣ, ಮಹಿಳಾ ವಿಮೋಚನೆ ಚರ್ಚೆಯನ್ನು ಗಂಭೀರವಾಗಿ ಮಂಡಿಸುತ್ತಾರೆ.

ಮತ್ತೊಬ್ಬ ಸ್ತ್ರೀವಾದಿ ಚಿಂತಕಿಯಾದ ಎನ್.ಗಾಯತ್ರಿಯವರು 'ಮಹಿಳೆಯ ಬಿಡುಗಡೆಯ ಹಾದಿಯಲ್ಲಿ' ಹಾಗೂ 'ಮಹಿಳಾ ಚಳುವಳಿಯ ಮಜಲುಗಳು' ಕೃತಿಗಳಲ್ಲಿ ಮಹಿಳಾ ಚಳುವಳಿಯ ಹಾದಿಗಳ ವಿವಿಧ ಮಜಲುಗಳನ್ನು ಚರ್ಚೆಗೆ ಒಳಪಡಿಸಿದ್ದಾರೆ. ಇನ್ನೊಬ್ಬ ಪ್ರಮುಖ ಚಿಂತಕಿಯಾದ ಎಚ್.ಎಸ್.ಶ್ರೀಮತಿ ಅವರು ಸ್ತ್ರೀವಾದದಲ್ಲಿ ತಮ್ಮನ್ನು ವಿಶಿಷ್ಟ ಚಿಂತನೆಯ ಮೂಲಕ ಗುರುತಿಸಿಕೊಂಡಿದ್ದಾರೆ. ಅವರು 'ಸ್ತ್ರೀವಾದಿ ತಾತ್ವಿಕತೆ' 'ಸ್ತ್ರೀವಾದಿ ಅನ್ವಯಿಕತೆ' 'ಸೇರಿಕೊಂಡ ಎಳೆಗಳು' ಎಂಬ ಕೃತಿಗಳಲ್ಲಿ ಸ್ತ್ರೀವಾದದ ನೆಲೆಯಲ್ಲಿ ಸಾಹಿತ್ಯವನ್ನು ಚರ್ಚೆಗೆ ಒಳಪಡಿಸಿದ್ದಾರೆ. ಇವರು ಪುರುಷರಲ್ಲಿ ಮಹಿಳಾಪರ ನಿಲುವುಗಳನ್ನು ಗುರುತಿಸುವ ಕಾರ್ಯ ಮಾಡಿದ್ದಾರೆ. ಸ್ತ್ರೀವಾದಕ್ಕೆ ತಾತ್ವಿಕ ನೆಲೆಯನ್ನು ಇವರು ತಮ್ಮ ಬರವಣಿಗೆಯ ಮೂಲಕ ದೊರಕಿಸಿಕೊಟ್ಟಿದ್ದಾರೆ. ಇನ್ನು ಮುಖ್ಯವಾಗಿ 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ' ಕೃತಿಯನ್ನು ಸಂಪಾದಿಸಿ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಮೂಲಕ, ಕಳೆದು ಹೋದ, ಕಾಣೆಯಾದ, ಉದ್ದೇಶ ಪೂರ್ವಕವಾಗಿ ಹೂಳಲ್ಪಟ್ಟ ಮಹಿಳಾ ಲೇಖಕಿಯರನ್ನು ಬೆಳಕಿಗೆ ತಂದು ಮಹಿಳಾ ಅಭಿವ್ಯಕ್ತಿಯನ್ನು ಗುರುತಿಸುವ ಮೂಲಕ ಪುರುಷ ರಾಜಕಾರಣದ ಹುನ್ನಾರವನ್ನು ಬಯಲಿಗೆ ಎಳೆದಿದ್ದಾರೆ. ಹೀಗೆ ಈ ಮೇಲ್ಕಂಡ ಪ್ರಮುಖ ಚಿಂತಕಿಯರು ಸ್ತ್ರೀವಾದಿ ಚಿಂತನೆಯು ಕನ್ನಡದಲ್ಲಿ ಚಿಗುರೊಡೆಯುತ್ತಿದ್ದ ಕಾಲದಲ್ಲಿ, ಸ್ತ್ರೀವಾದಿ ವಿಮರ್ಶೆಗೆ ಒಂದು ಭದ್ರ ಬುನಾದಿಯನ್ನು ರೂಪಿಸುವ ಮೂಲಕ ಸೈದ್ಧಾಂತಿಕ ನೆಲೆಯನ್ನು ದೊರಕಿಸಿಕೊಟ್ಟಿದ್ದಾರೆ.

ಸಿಮೋನ್ ದಿ ಬೋವಾ, ಎಲೆನಾ ಶೋವಾಲ್ಟರ್, ಸುಮಿತ್ರಾಬಾಯಿ, ವಿಜಯಾದಬ್ಬೆ ಮುಂತಾದವರು ಹಾಕಿಕೊಟ್ಟ ದಾರಿಯಲ್ಲಿಯೇ ಇಂದಿನ ಸ್ತ್ರೀವಾದವನ್ನು ಕಟ್ಟಿ ಬೆಳೆಸುವಲ್ಲಿ ಪ್ರಮುಖವಾಗಿ ಎಂ.ಎಸ್.ಆಶಾದೇವಿ, ಕೆ.ನೀಲಾ, ತಾರಿಣಿ ಶುಭದಾಯಿನಿ, ಮೀನಾಕ್ಷಿ ಬಾಳಿ, ಚೇತನಾ ತೀರ್ಥಹಳ್ಳಿ ಇನ್ನು ಮುಂತಾದವರು ಕೆಲಸ ಮಾಡುತ್ತಿದ್ದಾರೆ. ಈ ಚಿಂತಕಿಯರು ಪ್ರಬಂಧ ರಚನೆಯ ಮೂಲಕ ಹಾಗೂ ಪತ್ರಿಕೆಗಳಿಗೆ ಅಂಕಣಗಳನ್ನು ಬರೆಯುವ ಮೂಲಕ ತಮ್ಮ ಚಿಂತನೆಯನ್ನು ವಿಸ್ತರಿಸುತ್ತಿದ್ದಾರೆ. ತಾರಿಣಿ ಮತ್ತು ಆಶಾದೇವಿ ಅವರು ತಮ್ಮ ಚಿಂತನೆಯನ್ನು ವ್ಯಕ್ತಪಡಿಸಲು ಸಾಹಿತ್ಯವನ್ನು ಕೇಂದ್ರವಾಗಿಸಿ ಆಯ್ಕೆಮಾಡಿಕೊಂಡಿದ್ದಾರೆ. ಮುಖ್ಯವಾಗಿ ಈ ಇಬ್ಬರು ಚಿಂತಕಿಯರು ಪುರುಷ ರಚಿತ ಸಾಹಿತ್ಯವನ್ನು, ಮಹಿಳೆ ರಚಿಸಿದ ಸಾಹಿತ್ಯದಲ್ಲಿನ ಮಹಿಳೆಯ ಚಹರೆಯನ್ನು ಹಾಗೂ ಹೋರಾಟದ ಮಗ್ಗಲುಗಳನ್ನು ಗುರುತಿಸುವ ಕಾರ್ಯದಲ್ಲಿ ತೊಡಗಿದ್ದಾರೆ. ಈ ಮೂಲಕ ಪುರುಷ ರಚಿತ ಸಾಹಿತ್ಯವನ್ನು ನಿಷ್ಠುರವಾಗಿ ಆಳವಾದ ವಿಶ್ಲೇಷಣೆಗೆ ಒಳಪಡಿಸುವ ಮೂಲಕ ಅವರಲ್ಲಿನ ಮಹಿಳಾ ಕುರಿತ ನಿಲುವನ್ನು ಗುರುತಿಸುತ್ತಾರೆ. ಆನಂತರದಲ್ಲಿ ಮಹಿಳಾ ಬರಹಗಾರರಲ್ಲಿನ ಪಿತೃಪ್ರಧಾನತೆಯನ್ನು ನಿರಾಕರಿಸುವ ಮೂಲಕ ಅವರಲ್ಲಿನ ಸ್ತ್ರೀಪರವಾದ ವಿಚಾರಗಳನ್ನು ತಮ್ಮ ಕನ್ನಡದ ಸ್ತ್ರೀವಾದದ ವಿಸ್ತರಣೆಗೆ ಬಳಸಿಕೊಳ್ಳುತ್ತಾರೆ. ಹೀಗೆ ಇಲ್ಲಿ ಗುರುತಿಸಿದ ಎರಡು ಮಾದರಿಗಳಲ್ಲಿ ಕನ್ನಡದ ಈ ಚಿಂತಕಿಯರು

ಮಹಿಳಾ ವಾದವನ್ನು ಕಟ್ಟುತ್ತಿದ್ದಾರೆ. ಕೆ.ನೀಲಾ ಅವರು ದುಡಿಯುವ ವರ್ಗದವರ ಜೊತೆಯಲ್ಲಿದ್ದು ಕ್ಷೇತ್ರಕಾರ್ಯಗಳ ಮೂಲಕ ಮಹಿಳೆಯರ ಸ್ಥಿತಿ-ಗತಿಗಳನ್ನು ಆಳವಾದ ಚಿಂತನೆಗೆ ಒಳಪಡಿಸಿ ತಾತ್ವಿಕವಾದ ಮಹಿಳಾ ಸಿದ್ಧಾಂತವನ್ನು ಕಟ್ಟುತ್ತಿದ್ದಾರೆ. ಮಹಿಳೆಯ ಇಂದಿನ ಸಾಮಾಜಿಕ ಸ್ಥಾನ-ಮಾನ, ಆಕೆ ಶೋಷಣೆಗೆ ಒಳಗಾಗುತ್ತಿರುವ ವಿವಿಧ ಮಜಲುಗಳನ್ನು ಗುರುತಿಸಿ ಸ್ತ್ರೀವಾದಕ್ಕೆ ಒಂದು ಸ್ಪಷ್ಟವಾದ ನೆಲೆಯನ್ನು ದೊರಕಿಸಿಕೊಡುತ್ತಿದ್ದಾರೆ.

ಈ ಎಲ್ಲಾ ಚಿಂತಕಿಯರು ಮಹಿಳಾ ಅಭಿವ್ಯಕ್ತಿಯ ಮೂಲಕ ಹೆಣ್ಣಿಗೆ ಸಮಾಜದಲ್ಲಿ ಸಮಾನತೆಯನ್ನು ಮತ್ತು ಗೌರವವನ್ನು ದೊರಕಿಸಿಕೊಡುವ ನೆಲೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಂದರೆ ಸಾಹಿತ್ಯದಲ್ಲಿ ಮಾತ್ರವಲ್ಲದೆ ಚಿತ್ರ ಕಲಾವಿದೆ, ಸಂಗೀತ ಕಲಾವಿದೆ, ನಟಿಯರಾಗಿರಬಹುದು ಅವರೆಲ್ಲರನ್ನು ನೋಡುವ ಕ್ರಮದಲ್ಲಿ ಬದಲಾವಣೆಯನ್ನು ತರಬೇಕು ಎನ್ನುವುದು ಈ ಸ್ತ್ರೀವಾದಿಗಳ ಹಕ್ಕೊತ್ತಾಯವಾಗಿದೆ. ಈ ಮೂಲಕ ಇಂದಿನ ಚಿಂತಕಿಯರು ಒಟ್ಟು ಮಹಿಳಾ ಅಭಿವ್ಯಕ್ತಿಯನ್ನು ಮುನ್ನೆಲೆಗೆ ತರಬೇಕು, ಅದನ್ನು ಸಮಾನ ವೇದಿಕೆಯಲ್ಲಿ ಇಡಬೇಕು ಎಂದು ಹೋರಾಟ ಮಾಡುತ್ತಿದ್ದಾರೆ. ಆದ್ದರಿಂದ ಹೋರಾಟದ ಭಾಗವಾಗಿಯೂ ತಮ್ಮ ಚಿಂತನೆಯನ್ನು ಅವರು ವಿಸ್ತರಿಸುತ್ತಿದ್ದಾರೆ.

ಹಿಂದಿನ ಸ್ತ್ರೀವಾದಿಗಳಿಗೂ ಈಗಿನ ಸ್ತ್ರೀವಾದಿಗಳಿಗೂ ಇರುವ ಒಂದು ಪ್ರಮುಖ ವ್ಯತ್ಯಾಸವೆಂದರೆ, ಹಿಂದಿನ ಸ್ತ್ರೀವಾದಿಗಳು ಮಹಿಳೆಯರ ಪ್ರಜಾಪ್ರಭುತ್ವ ಹಕ್ಕುಗಳಿಗಾಗಿ ಹೋರಾಟ ನಡೆಸಿ ಶಿಕ್ಷಣ, ಉದ್ಯೋಗ ಹಕ್ಕು, ಆಸ್ತಿಯ ಹಕ್ಕು, ಮತ ಚಲಾಯಿಸುವ ಹಕ್ಕು ಹೀಗೆ ಅನೇಕ ವಿಚಾರಗಳಿಗೆ ಸಂಬಂಧಿಸಿದಂತೆ ಕಾನೂನು ಬದ್ಧವಾಗಿ ಸಮಾಜದಲ್ಲಿ ಸಮಾನತೆ ಕಲ್ಪಿಸಿಕೊಳ್ಳಲು ಹೋರಾಟ ನಡೆಸಿದರು. ಇವರ ಹೋರಾಟ ಬಹುಪಾಲು ಮನೆಯ ಹೊರಗಿನ ಸಮಸ್ಯೆಗಳಿಗೆ ಮೀಸಲಾಗಿತ್ತು; ಇಂದಿನ ಸ್ತ್ರೀವಾದಿಗಳು, ಹೋರಾಟಗಾರರು ಕೇವಲ ಕಾನೂನು ಸಮರವನ್ನಷ್ಟೇ ಅಲ್ಲದೆ, ಮನೆಯ ಒಳಗೆ ಕುಟುಂಬದವರಿಂದ ಮಹಿಳೆಯರು ಎದುರಿಸುವ ದೌರ್ಜನ್ಯ, ಉದ್ಯೋಗ ಸ್ಥಳಗಳಲ್ಲಿರುವ ಅಸಮಾನತೆ, ಕುಟುಂಬದ ಒಳಗಿನ ಸಮಾನತೆ, ಸ್ವಾತಂತ್ರ್ಯದ ಬಗ್ಗೆ ಹೋರಾಟವನ್ನು ರೂಪಿಸಿಕೊಂಡಿದ್ದಾರೆ. ಆಶಾದೇವಿ ಅವರ ಚಿಂತನೆಗಳು ಈ ನೆಲೆಯಲ್ಲಿ ಕನ್ನಡದಲ್ಲಿ ಸಂಚಲನವನ್ನು ಮೂಡಿಸಿದ್ದು, ಅವನ್ನು ವಿಶ್ಲೇಷಿಸುವುದು ಮುಖ್ಯವಾದ ಕೆಲಸವಾಗಿದೆ.

*****

# ಅಧ್ಯಾಯ–ಮೂರು

# ಎಂ.ಎಸ್.ಆಶಾದೇವಿ: ಸಂಕ್ಷಿಪ್ತ ಪರಿಚಯ ಮತ್ತು ಪೂರ್ವಾಧ್ಯಯನಗಳ ಸಮೀಕ್ಷೆ

## ೩.೧. ಪ್ರವೇಶ

ಯಾವುದೇ ಬರಹಗಾರ್ತಿ, ಕಲಾವಿದೆ ಹಾಗೂ ಸೃಜನಕ್ರಿಯೆಗಳಲ್ಲಿ ತೊಡಗಿಕೊಂಡ ಮಹಿಳೆಯನ್ನು ಅಧ್ಯಯನಕ್ಕೆ ಒಳಪಡಿಸಿದರೆ ಅವರ ವೈಯಕ್ತಿಕ ಪರಿಚಯ ಕೂಡ ಮುಖ್ಯವಾಗಿರುತ್ತದೆ. ಕಾರಣ ಅವರ ಸೃಜನಕ್ರಿಯೆಗೆ ಎಷ್ಟೋ ಬಾರಿ ವೈಯಕ್ತಿಕ ನೆಲೆಯೇ ಕಾರಣವಾಗಿರುವ ಸಾಧ್ಯತೆಯೂ ಇರುತ್ತದೆ. ಹಾಗಾಗಿ ಈ ಭಾಗದಲ್ಲಿ ಪ್ರಸ್ತುತದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ವಿಮರ್ಶಕಿ ಎಂ.ಎಸ್.ಆಶಾದೇವಿ ಅವರನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡಲು ಪ್ರಯತ್ನಿಸಲಾಗಿದೆ. ಈ ಪರಿಚಯವು ಅವರ ಒಟ್ಟು ವಿಮರ್ಶೆಯ ಧೋರಣೆ, ಒಲವು, ನಿಲುವುಗಳು ರೂಪುಗೊಳ್ಳಲು ಹೇಗೆ ನೆರವಾದವು ಮತ್ತು ಹೇಗೆ ಅಂತರ್ ಸಂಬಂಧವನ್ನು ಹೊಂದಿವೆ ಎಂಬುದನ್ನು ತಿಳಿಸುತ್ತದೆ. ಅಂತೆಯೇ ಎಂ.ಎಸ್.ಆಶಾದೇವಿ ಅವರ ಬಗ್ಗೆ ಈ ತನಕ ನಡೆದ ಚರ್ಚೆಗಳನ್ನು ಸಂಕ್ಷಿಪ್ತವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಆಶಾದೇವಿಯವರು ೧೯೬೬ ರಲ್ಲಿ ಚನ್ನಗಿರಿ ಸಮೀಪದ ಹಿರೇಕೋಗಲೂರಿನಲ್ಲಿ ಜನಿಸಿದರು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ ಪದವಿ ಪಡೆದರು. 'ನವೋದಯ ವಿಮರ್ಶೆ ಮೇಲೆ ಪಾಶ್ಚಾತ್ಯ ವಿಮರ್ಶೆಯ ಪ್ರಭಾವ' ಎಂಬ ವಿಷಯದ ಕುರಿತು ಪಿಎಚ್.ಡಿ., ಮಹಾಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಡಾಕ್ಟರೇಟ್ ಪದವಿಯನ್ನು ಪಡೆದರು. ಪ್ರಸ್ತುತ ಇವರು ಬೆಂಗಳೂರಿನ ಮಹಾರಾಣಿ ವಿಜ್ಞಾನ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇದುವರೆಗೆ ಇವರು ರಚಿಸಿರುವ ಕೃತಿಗಳು 'ಸ್ತ್ರೀಮತವನುತ್ತರಿಸಲಾಗದೇ?' (ಸಾಹಿತ್ಯ ಸಂಸ್ಕೃತಿ ಕುರಿತು ಲೇಖನಗಳು), 'ಉರಿಚಮ್ಮಾಳಿಗೆ' (ಡಿ.ಆರ್.ನಾಗರಾಜ ಅವರ ದಿ ಫ್ಲೇಮಿಂಗ್ ಫೀಟ್ ಕೃತಿಯ ಅನುವಾದ), ವಚನ ಪ್ರವೇಶ, ವೀಣಾ ಶಾಂತೇಶ್ವರ ವಾಚಿಕೆ (ಸಂಪಾದನೆ), ನಡುವೆ ಸುಳಿವ ಆತ್ಮ(ಸ್ತ್ರೀ ಸಂಕಥನದ ಚಹರೆಗಳು). 'ಸ್ತ್ರೀಮತವನುತ್ತರಿಸಲಾಗದೇ?' ಕೃತಿಗೆ ಶಿವಮೊಗ್ಗ ಕರ್ನಾಟಕ ಸಂಘದ ಎಂ.ಕೆ.ಇಂದಿರಾ ಪ್ರಶಸ್ತಿ, ಉತ್ತರ ಕರ್ನಾಟಕ ಲೇಖಕಿಯರ ಸಂಘದ ಇನ್ಫೋಸಿಸ್ ಸುಧಾಮೂರ್ತಿ ಪ್ರಶಸ್ತಿ ದೊರಕಿದೆ.

ಇತ್ತೀಚಿನ ದಿನಗಳಲ್ಲಿ ವಿಚಾರ ಸಾಹಿತ್ಯದಲ್ಲಿ ಹೊಸತಲೆಮಾರಿನ ವಿಮರ್ಶಕಿಯಾಗಿ ಗುರುತಿಸಿಕೊಂಡಿರುವ ಆಶಾದೇವಿಯವರು ಪತ್ರಿಕೆಗಳಿಗೆ ಅಂಕಣ ಬರಹಗಳನ್ನು ಬರೆಯುತ್ತಾರೆ. ಸುಮಾರು ಎರಡು–ಮೂರು ವರ್ಷಗಳ ಕಾಲ ಪ್ರಜಾವಾಣಿ ಪತ್ರಿಕೆಗೆ 'ನಾರೀಕೇಳಾ' ಎಂಬ ಶೀರ್ಷಿಕೆಯ ಅಡಿಯಲ್ಲಿ ಸ್ತ್ರೀವಾದವನ್ನು ಬೆಳೆಸುವ, ವಿಸ್ತರಿಸುವ ಭಾಗವಾಗಿ ಸುಧೀರ್ಘವಾಗಿ ಅಂಕಣಗಳನ್ನು ಬರೆದರು. ಇದರ ಜೊತೆಯಲ್ಲಿ ಹಲವಾರು ವಿಚಾರ ಸಂಕಿರಣ ಮತ್ತು ಸಾಹಿತ್ಯ ಸಮಾವೇಶಗಳಲ್ಲಿ ಪ್ರಬಂಧ ಮಂಡನೆಯ ಕೆಲಸಗಳನ್ನು ನಿರ್ವಹಿಸುವ ಮೂಲಕ ಪ್ರಸ್ತುತದಲ್ಲಿ ಸ್ತ್ರೀವಾದವನ್ನು ಮಹಿಳೆಯರ ಜೀವನದ ಕೊಂಡಿಯಾಗಿ ಬೆಳೆಸಿಕೊಂಡು ಬಂದಿದ್ದಾರೆ.

**೩.೨.ಪೂರ್ವಾಧ್ಯಯನಗಳ ಸಮೀಕ್ಷೆ**

ಇಂದಿನ ಯಾವುದೇ ಸಂಶೋಧಕರು ಸ್ತ್ರೀವಾದವನ್ನು ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಬಹಳ ಮುಖ್ಯವಾಗಿ ಎಂ.ಎಸ್.ಆಶಾದೇವಿಯವರನ್ನು ಚರ್ಚೆಗೆ ತೆಗೆದುಕೊಳ್ಳುತ್ತಾರೆ. ನಂತರ ಸ್ತ್ರೀವಾದವನ್ನು ಕುರಿತ ಹಲವಾರು ಪುಸ್ತಕಗಳಲ್ಲಿ ಇಂದಿನ ಹೊಸ ತಲೆಮಾರಿನ ಸ್ತ್ರೀವಾದಿ ಚಿಂತಕಿಯರನ್ನು ಕುರಿತು ಚರ್ಚಿಸುವಾಗ ಆಶಾ ಅವರ ಪ್ರಸ್ತಾಪವನ್ನು ಮಾಡಲಾಗುತ್ತಿದೆ. ಏಕೆಂದರೆ ಸ್ತ್ರೀವಾದವನ್ನು ತನ್ನ ಮೊದಲ ಆದ್ಯತೆಯನ್ನಾಗಿ ಮಾಡಿಕೊಂಡು ಅದಕ್ಕೆ ಒಂದು ಸೈದ್ಧಾಂತಿಕತೆಯನ್ನು, ತಾತ್ವಿಕತೆಯನ್ನು ತನ್ನ ಬರಹದಲ್ಲಿ ದೊರಕಿಸಿಕೊಡುವ ಮೂಲಕ ಅವರು ಸ್ತ್ರೀ ಧ್ವನಿಯಾಗಿದ್ದಾರೆ. ಎಲ್ಲೇ ಸ್ತ್ರೀವಾದವನ್ನು ಕುರಿತು ಚರ್ಚಿಸುವಾಗ ಇವರ ಸ್ತ್ರೀವಾದಿ ಚಿಂತನೆಗಳು ಹೆಚ್ಚು ಚರ್ಚೆಗೆ ಒಳಪಡುತ್ತಿವೆ. ಇವರ ಚಿಂತನಾ ಬರವಣಿಗೆಯು ಇತ್ತೀಚೆಗೆ ಪ್ರಕಟಗೊಳ್ಳುತ್ತಿರುವುದರಿಂದ ಇಂದು ಇವರ ವಿಮರ್ಶೆಯನ್ನು ಕುರಿತು ಚರ್ಚೆಮಾಡಬೇಕಾದ ಆವಶ್ಯಕತೆ ಇದೆ ಎಂದು ಭಾವಿಸಲಾಗಿದೆ. ಈ ಹಿನ್ನೆಲೆಯಲ್ಲಿ 'ಎಂ.ಎಸ್.ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಸ್ವರೂಪ' ಎಂಬ ವಿಷಯದ ಮೂಲಕ ಅವರ ಚಿಂತನ ಮತ್ತು ವಿಮರ್ಶಾ ಸಾಹಿತ್ಯವನ್ನು ಕುರಿತು ಬಂದಿರುವ ವಿಮರ್ಶೆಗಳನ್ನು ಸಮೀಕ್ಷೆ ಮಾಡುವುದು ಅಗತ್ಯವಾಗಿದೆ. ಇದರಿಂದ ಪ್ರಸ್ತುತ ಅಧ್ಯಯನಕ್ಕೆ ಒಂದು ಹಿನ್ನೆಲೆ ದೊರೆಯುತ್ತದೆ.

ಆಶಾದೇವಿಯವರ 'ಸ್ತ್ರೀಮತವನುತ್ತರಿಸಲಾಗದೆ?' ಕೃತಿಗೆ ರಾಜೇಂದ್ರ ಚೆನ್ನಿ ಅವರು ಮುನ್ನುಡಿಯನ್ನು ಹಾಗೂ ಯು.ಆರ್.ಅನಂತಮೂರ್ತಿ ಅವರು ಬೆನ್ನುಡಿಯನ್ನು ಬರೆದಿದ್ದಾರೆ. ಆಶಾ ಅವರ 'ನಡುವೆ ಸುಳಿವ ಆತ್ಮ' ಕೃತಿಗೆ ಬಿ.ಎನ್.ಸುಮಿತ್ರಾಬಾಯಿ ಅವರು ಮುನ್ನುಡಿ ಬರೆದಿದ್ದಾರೆ. ಇವನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗುತ್ತದೆ. ಪ್ರಮುಖವಾಗಿ ಆಶಾ ಅವರನ್ನು ಕುರಿತು ಬಂದಿರುವ ಕೆಲವು ವಿಮರ್ಶಾ ಲೇಖನಗಳನ್ನು ಕೂಡ ಚರ್ಚೆಗೆ ಒಳಪಡಿಸಲಾಗಿದೆ. ಮುಖ್ಯವಾಗಿ 'ಮರುಓದಿಗೆ ಒತ್ತಾಯಿಸುವ ಸೈದ್ಧಾಂತಿಕ ಸ್ಪಷ್ಟತೆಯ ವಿಮರ್ಶೆ' ಹಾಗೂ ಪ್ರಜಾವಾಣಿ ಪತ್ರಿಕೆಗೆ ಆಶಾ ಅವರ ಅಂಕಣಗಳನ್ನು ಕುರಿತು ಬರೆದಿರುವ ಬಿ.ಯು.ಸುಮಾ ಅವರ 'ಸ್ತ್ರೀವಾದದ ಅನೇಕ–ಅನನ್ಯ ಅರ್ಥಗಳ ಶೋಧ' ಎಂಬ ಲೇಖನವನ್ನು, ಐ.ಎಸ್.ಇಂಜಗನೇರಿ ಅವರು ಬರೆದಿರುವ 'ಆಶಾದೇವಿ ಚಿಂತನೆಗಳಲ್ಲಿ ದ್ರೌಪದಿ:ಒಂದು ನೋಟ' ಎಂಬ ಲೇಖನಗಳ ತಾತ್ವಿಕ ಅಭಿಪ್ರಾಯಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.

ಆಶಾದೇವಿ ಅವರ 'ನಡುವೆ ಸುಳಿವ ಆತ್ಮ' ಕೃತಿಗೆ ಮುನ್ನುಡಿ ಬರೆದಿರುವ ಸುಮಿತ್ರಾಬಾಯಿ ಅವರು ಆಶಾದೇವಿ ಅವರ ಬರಹದ ಶೈಲಿ ಹಾಗೂ ವಿಶ್ಲೇಷಣಾ ಸಾಮರ್ಥ್ಯವನ್ನು ಕುರಿತು ಹೇಳುತ್ತಾರೆ. 'ನಡುವೆ ಸುಳಿವ ಆತ್ಮ' ಕೃತಿಗೆ ಕೊಟ್ಟಿರುವ ಮೂಲಪುಟವನ್ನು ಕುರಿತು ಚರ್ಚಿಸುತ್ತಾ ಮುಖಪುಟದ ವಿನ್ಯಾಸದಲ್ಲಿಯೇ ಸ್ತ್ರೀವಾದವನ್ನು ಅವರು ಗುರುತಿಸಿದ್ದಾರೆ. ಪ್ರಸ್ತುತ ಕೃತಿಯಲ್ಲಿ 'ಸಾಹಿತ್ಯ–ಸ್ತ್ರೀ–ಅಭಿವ್ಯಕ್ತಿ–ಸಹಜತೆ', ಮತ್ತು 'ಮಹಿಳಾ ಪ್ರತಿಭಟನೆಯ ಸಾಂಸ್ಕೃತಿಕ ಚಹರೆಗಳು' ಎಂಬ ಎರಡು ಲೇಖನಗಳನ್ನು ಚರ್ಚಿಸುವ ಮೂಲಕ "ಆಶಾ ಅವರ ವಿಚಾರಗಳು ಮೂಲಭೂತ ತಾತ್ವಿಕ ಚೌಕಟ್ಟನ್ನು ಗ್ರಹಿಸಲು ನೆರವಾಗಬಲ್ಲದು ಎಂದು ಹೇಳುತ್ತಾರೆ."[೧] ಈ ಕೃತಿಯಲ್ಲಿ ಇರುವ ಲೇಖನಗಳನ್ನು ಚರ್ಚಿಸುತ್ತಾ ಲಿಂಗ ತಾರತಮ್ಯದ ನೆಲೆಗಳನ್ನು ಗುರುತಿಸುತ್ತಾರೆ. ಒಟ್ಟು ಲೇಖನಗಳನ್ನು ಅವುಗಳ ತಾತ್ವಿಕ ನೆಲೆಯಲ್ಲಿ ಹಾಗೂ ಸಮಾಜದಲ್ಲಿನ ಮಹಿಳೆಯ ಸ್ಥಾನಮಾನದ ಬಗ್ಗೆ ಚರ್ಚಿಸಿದ್ದಾರೆ. ಆದರೆ ಆಶಾ ಅವರ ಚಿಂತನೆಯ

ಬಹುಮುಖ್ಯ ಅಂಶವಾದ ಸ್ತ್ರೀ ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳುವುದಕ್ಕೆ ಮಾಡುತ್ತಿರುವ ಹೋರಾಟದ ಮಜಲುಗಳನ್ನು ಗುರುತಿಸುವದಿಲ್ಲ. ಮಹಿಳಾ ಪ್ರತಿಭಟನೆಯ ಹಾದಿಯನ್ನು, ವಿಧಾನಗಳನ್ನು ಹಾಗೂ ಸ್ತ್ರೀವಾದಿ ವಿಮರ್ಶೆಯ ವಿಶಿಷ್ಟತೆಯನ್ನು ಗುರುತಿಸುವುದಿಲ್ಲ.

'ಸ್ತ್ರೀಮತವನುತ್ತರಿಸಲಾಗದೆ?' ಕೃತಿಗೆ ಮುನ್ನುಡಿ ಬರೆದಿರುವ ರಾಜೇಂದ್ರ ಚೆನ್ನಿಯವರು ಆಶಾದೇವಿಯವರ ವಿಮರ್ಶೆಯನ್ನು "ಲಿಂಗಪ್ರಜ್ಞೆಯನ್ನು ಮೀರುವ ಕೆಲಸವೆಂದೇ ಹೇಳುತ್ತಾರೆ."[೨] ಇವರ ವಿಮರ್ಶೆಯು ವರ್ಗ-ಜಾತಿ-ಲಿಂಗವನ್ನು ಮೀರಿ ಬೆಳೆಯುತ್ತದೆ ಎಂದು ಪ್ರಸ್ತುತ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಚೆನ್ನಿಯವರು ಈ ಕೃತಿಯಲ್ಲಿ ಕೆಲವೇ ಕೆಲವು ಲೇಖನಗಳನ್ನು ಮಾತ್ರ ಚರ್ಚೆಗೆ ಒಳಪಡಿಸಿದ್ದಾರೆ. ಮುಖ್ಯವಾಗಿ ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ಚರ್ಚಿಸುತ್ತಾರೆ. ಇಡಿಯಾಗಿ ಆಶಾ ಅವರ ಲೇಖನಗಳ ತಾತ್ವಿಕತೆಯತ್ತ ಗಮನ ಹರಿಸುವುದಿಲ್ಲ. ಬೆನ್ನುಡಿಯನ್ನು ಬರೆದಿರುವ ಯು.ಆರ್.ಅನಂತಮೂರ್ತಿಯವರು ಆಶಾ ಅವರ ಸ್ತ್ರೀವಾದದ ವಿಶಿಷ್ಟತೆಯನ್ನು ಗುರುತಿಸುತ್ತಾ, ಸಾಹಿತ್ಯ ಕೃತಿಗಳನ್ನು ಮರು ಓದಿಗೆ ಒಳಪಡಿಸುವ ಮೂಲಕ "ನನ್ನದೂ ಆಗಬೇಕಿದ್ದ ಒಳನೋಟಗಳನ್ನು ಆಶಾದೇವಿ ನನಗೆ ಒದಗಿಸಿದ್ದಾರೆ ಎಂದು ಅಭಿಪ್ರಾಯ ಪಡುತ್ತಾರೆ."[೩] ಈ ಮೂಲಕ ಆಶಾ ಅವರ ವಿಮರ್ಶೆಯ ತಾತ್ವಿಕತೆಯ ಮಹತ್ವವನ್ನು ಗುರುತಿಸುವ ಪ್ರಯತ್ನ ಮಾಡುತ್ತಾರೆ.

'ಮರು ಓದಿಗೆ ಒತ್ತಾಯಿಸುವ ಸೈದ್ಧಾಂತಿಕ ಸ್ಪಷ್ಟತೆಯ ವಿಮರ್ಶೆ' ಲೇಖನದಲ್ಲಿ ಅವಿನಾಶ್ ಅವರು ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ತಾತ್ವಿಕ ತಳಹದಿಯನ್ನು ಚರ್ಚಿಸಿದ್ದಾರೆ. ಅವರ ವಿಮರ್ಶೆಯ ಸೈದ್ಧಾಂತಿಕ ನೆಲೆಯನ್ನು ಗುರುತಿಸುವಲ್ಲಿ ಸಫಲರಾಗಿದ್ದಾರೆ. ಈ ಲೇಖನದಲ್ಲಿ ಅವರ 'ಸ್ತ್ರೀಮತವನುತ್ತರಿಸಲಾಗದೆ?' ಹಾಗೂ 'ಮಹಿಳೆ: ಬಸವಣ್ಣನ ನಿಲುವುಗಳು' ಈ ಲೇಖನಗಳ ಮೂಲಕ ಆಶಾ ಅವರ ತಾತ್ವಿಕ ಗ್ರಹಿಕೆಯ ನೆಲೆಯನ್ನು ಗುರುತಿಸಿದ್ದಾರೆ. ಅವರ ವಿಮರ್ಶೆಯ ಧ್ಯೇಯ, ಗುರಿ ಹಾಗೂ ಮುಂದಿನ ನಡೆಯನ್ನು ಕುರಿತು ಚರ್ಚೆಗೆ ಒಳಪಡಿಸಿದ್ದಾರೆ. ಇವರ ವಿಮರ್ಶೆಯನ್ನು ಕುರಿತಂತೆ ಇರುವ ಹಲವಾರು ಜಿಜ್ಞಾಸೆಗಳಿಗೆ ಉತ್ತರವನ್ನು, ಅದಕ್ಕಿರುವ ಕಾರಣಗಳನ್ನು ಕೊಟ್ಟಿದ್ದಾರೆ. ಒಟ್ಟಾರೆಯಾಗಿ ಇವರ ವಿಮರ್ಶೆಯ ಸೂಕ್ಷ್ಮತೆ, ಸ್ಪಷ್ಟತೆಯ ನೆಲೆಯಲ್ಲಿ ಪ್ರಸ್ತುತ ಲೇಖನವನ್ನು ಚರ್ಚಿಸಿದ್ದಾರೆ.

'ಸ್ತ್ರೀವಾದದ ಅನೇಕ ಅನನ್ಯ ಅರ್ಥಗಳ ಶೋಧ' ಪ್ರಸ್ತುತ ಈ ಲೇಖನದಲ್ಲಿ 'ನಾರೀಕೇಳಾದ' ಅಂಕಣಗಳ ತಾತ್ವಿಕತೆಯನ್ನು ಕುರಿತಂತೆ ಬಿ.ಯು.ಸುಮಾ ಅವರು ಬರೆದಿದ್ದಾರೆ. ಇಲ್ಲಿ ಸುಮಾ ಅವರು ನಾರೀಕೇಳಾ ಅಂಕಣಗಳಲ್ಲಿನ ಸಾಧ್ಯತೆಗಳನ್ನು ಚರ್ಚಿಸಿದ್ದಾರೆ. ಇವರ ಸ್ತ್ರೀವಾದವು ಸಮಾಜದಲ್ಲಿ ಮಾಡಿರುವ ಹಲವಾರು ಪಲ್ಲಟಗಳನ್ನು ಕುರಿತು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮಹಿಳಾ ವಾದವನ್ನು ಕುರಿತ ಆಶಾ ಅವರ ನಿಲುವುಗಳನ್ನು 'ನಾರೀಕೇಳಾ' ಅಂಕಣಗಳ ಮೂಲಕ ನಿಷ್ಕರ್ಷೆಗೆ ಒಳಪಡಿಸಿದ್ದಾರೆ. ಆಶಾ ಅವರ ಸ್ತ್ರೀವಾದಿ ತತ್ವವನ್ನು, 'ನಾರೀಕೇಳಾ' ಅಂಕಣಗಳ ಮೂಲಕ ಓರೆಗೆ ಹಚ್ಚಿ ನೋಡಿದ್ದಾರೆ. ಒಟ್ಟಾರೆಯಾಗಿ ಆಶಾ ಅವರ ಬರಹಗಳು ಸಮಾಜದ ಮೇಲೆ ಯಾವ ರೀತಿ ಪರಿಣಾಮ

ಬೀರಿವೆ, ಓದುಗರ ಮೇಲೆ ಯಾವ ರೀತಿ ಪರಿಣಾಮ ಬೀರಿವೆ ಎಂಬುದನ್ನು ಪ್ರಮುಖವಾಗಿ ಚರ್ಚಿಸಿದ್ದಾರೆ. ಹಾಗೆಯೇ ಸ್ತ್ರೀವಾದದ ತಾತ್ವಿಕ ಚೌಕಟ್ಟನ್ನು ಗುರುತಿಸಲು ಪ್ರಯತ್ನಿಸಿದ್ದಾರೆ.

'ಆಶಾದೇವಿ ಚಿಂತನೆಗಳಲ್ಲಿ ದ್ರೌಪದಿ: ಒಂದು ನೋಟ' ಎಂಬ ಲೇಖನದಲ್ಲಿ ಐ.ಎಸ್.ಇಂಜಗನೇರಿ ಅವರು ಆಶಾ ಅವರು ಕಟ್ಟಿಕೊಟಿರುವ ದ್ರೌಪದಿಯ ವ್ಯಕ್ತಿತ್ವದ ನೆಲೆಗಳನ್ನು ಪರಿಶೀಲನೆಗೆ ಒಳಪಡಿಸಿದ್ದಾರೆ. ಲೇಖಕಿ ಅನಾವರಣಗೊಳಿಸಿರುವ ದ್ರೌಪದಿಯ ಅಸ್ಮಿತೆ, ಅಸ್ತಿತ್ವದ ವಿನ್ಯಾಸಗಳನ್ನು ಮಹಿಳಾವಾದಿ ನೆಲೆಯಲ್ಲಿ ವಿಸ್ತರಿಸುವ ಭಾಗವಾಗಿ ಕೆಲಸ ಮಾಡಿದ್ದಾರೆ. ಅಧಿಕಾರದ ನೆಲೆಗಳು, ಸಾಹಿತ್ಯಕ ನೆಲೆಗಳು, ಸಾಂಸ್ಕೃತಿಕ ನೆಲೆಗಳು, ಸಾಮಾಜಿಕ ನೆಲೆಗಳು, ಜೈವಿಕ ನೆಲೆಗಳು ಎಂಬುದಾಗಿ ವಿಭಾಗಿಸಿಕೊಂಡು ಆಶಾ ಹೇಳುವ ದ್ರೌಪದಿಯ ವ್ಯಕ್ತಿತ್ವವನ್ನು ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನ ಮಾಡಿದ್ದಾರೆ. ಹೀಗೆ ಪ್ರತಿಯೊಂದು ವಿಭಾಗದಲ್ಲಿ ಹೇಗೆ ದ್ರೌಪದಿಯು ವಂಚನೆಗೆ, ಅನ್ಯಾಯಕ್ಕೆ ಒಳಗಾಗಿದ್ದಾಳೆ ಎಂಬುದನ್ನು, ಹೇಗೆ ಆಕೆಯ ವ್ಯಕ್ತಿತ್ವವನ್ನು, ಅಸ್ಮಿತೆಯನ್ನು, ಹೋರಾಟವನ್ನು ತಿರುಚಲಾಗಿದೆ ಎಂಬುದನ್ನು ಅವರು ಚರ್ಚಿಸಿದ್ದಾರೆ. ಕುಮಾರವ್ಯಾಸನನ್ನು ಕುರಿತು ಅವನು ತಾಳಿದ ಮಹಿಳೆಯನ್ನು ಕುರಿತ ಧೋರಣೆಗಳನ್ನು ಚರ್ಚಿಸುತ್ತಾ, ಕುಮಾರವ್ಯಾಸನಲ್ಲಿ ಕಂಡುಬರುವ ಮಹಿಳಾ ವಿರೋಧಿ ನೆಲೆಗಳನ್ನು ಗುರುತಿಸುತ್ತಾರೆ. ಇಂಜನಗೇರಿಯವರ ಚರ್ಚೆಯು ಒಂದು ಲೇಖನಕ್ಕೆ ಮಾತ್ರ ಸೀಮಿತವಾಗಿರುವುದು ಕಂಡುಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ಆಶಾದೇವಿ ಎಂ. ಎಸ್., ನಡುವೆ ಸುಳಿವ ಆತ್ಮ, ಪು. ೧೨,೧೩

೨. ಆಶಾದೇವಿ ಎಂ. ಎಸ್., ಸ್ತ್ರೀಮತವನುತ್ತರಿಸಲಾಗದೆ?, ಪು. ೫

೩. ಆಶಾದೇವಿ ಎಂ. ಎಸ್., ಸ್ತ್ರೀಮತವನುತ್ತರಿಸಲಾಗದೆ?, (ಬೆನ್ನುಡಿಯಿಂದ)

# ಅಧ್ಯಾಯ–ನಾಲ್ಕು

# ಆಶಾದೇವಿಯವರ ಚಿಂತನೆ: ಪ್ರತಿಶಕ್ತಿ ನೆಲೆಯ ಚಿಂತನೆಗಳು

## ೪.೧.ಪ್ರವೇಶ

ಇಂದಿನ ಪ್ರಸ್ತುತ ಸಂದರ್ಭದಲ್ಲಿ ಮಹಿಳೆಯನ್ನು ನಿಯಂತ್ರಣಕ್ಕೊಳಪಡಿಸಿರುವ ಪುರುಷ ಪ್ರಧಾನ ಸಮಾಜವನ್ನು ಪ್ರತಿಶಕ್ತಿ ನೆಲೆಯಲ್ಲಿ ಗ್ರಹಿಸಲಾಗಿದೆ. ಮಹಿಳೆಯರಿಗೆ ವಿರೋಧವಾಗಿ ಇರುವ ಇನ್ನೊಂದು ಮಾಧ್ಯಮವೇ ಪುರುಷ ಸಮಾಜ. ಆದ್ದರಿಂದ ಮಹಿಳೆಯ ಅಸ್ತಿತ್ವವನ್ನು ಹತ್ತಿಕ್ಕಿದ ಪಿತೃ ಸಮಾಜದ ದಬ್ಬಾಳಿಕೆಯನ್ನು ಪ್ರತಿಶಕ್ತಿ ನೆಲೆಯಲ್ಲಿ ಇಲ್ಲಿ ಚರ್ಚಿಸಲಾಗುವುದು. ಈ ಅಧ್ಯಾಯದಲ್ಲಿ ಪುರುಷ ಸಮಾಜವು ಮಹಿಳಾ ಶಕ್ತಿಯನ್ನು ಅಡಗಿಸಲು ಕುಟುಂಬದ ಒಳಗೆ ಮತ್ತು ಹೊರಗೆ ಪ್ರತಿಶಕ್ತಿಯಾಗಿ ರೂಪಿಸಿದ ಕಾರ್ಯತಂತ್ರಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗುವುದು. ಮಹಿಳೆಯ ಶಕ್ತಿಗೆ ವಿರುದ್ಧವಾದ ಇನ್ನೊಂದು ವ್ಯವಸ್ಥೆಯೇ ಪ್ರತಿಶಕ್ತಿಯಾಗಿದ್ದು, ಇದರ ಬಹುನೆಲೆಗಳನ್ನು ಎಂ.ಎಸ್.ಆಶಾದೇವಿ ಅವರು ಹೇಗೆ ಗುರುತಿಸಿದ್ದಾರೆ ಎನ್ನುವುದನ್ನು ಈ ಅಧ್ಯಾಯದಲ್ಲಿ ಚರ್ಚೆಗೆ ಒಳಪಡಿಸಲಾಗುವುದು.

## ೪.೨. ಮೌಲ್ಯ ವ್ಯವಸ್ಥೆಯೊಂದಿಗಿನ ಮುಖಾಮುಖಿ ನೆಲೆ

ಈ ಪ್ರತಿಶಕ್ತಿ ಎಂಬ ಪರಿಕಲ್ಪನೆಯನ್ನು ಗಮನಿಸಿದರೆ ಮಹಿಳೆಯ ಸವಾಲುಗಳು, ದೌರ್ಜನ್ಯ, ಹಿಂಸೆಗಳು ಯಾವ ಮಟ್ಟದಲ್ಲಿ ಇವೆ ಎಂಬುದು ಗೊತ್ತಾಗುವುದು. ಮುಖ್ಯವಾಗಿ ತುಂಬಾ ಜನಕ್ಕೆ ಅದರಲ್ಲಿ ಮಹಿಳೆಯರಿಗೂ ಈ ಪುರುಷ ಪ್ರಧಾನ ಸಮಾಜ ಪ್ರತಿಶಕ್ತಿ ಎಂಬುದೇ ತಿಳಿದಿರುವುದಿಲ್ಲ. ಏಕೆಂದರೆ ಈ ಸಮಾಜವು ರೂಪಿಸಿದ ಕಾರ್ಯ ತಂತ್ರಗಳನ್ನು ಕೆಲವು ಮಹಿಳೆಯರು ಇವು ನಮಗೆ ಇರಬಹುದಾದ ಮೌಲ್ಯಗಳೆಂದು ನಂಬಿಕೊಂಡು ಚಾಚು ತಪ್ಪದೇ ಪಾಲಿಸುತ್ತಿದ್ದಾರೆ. ಈ ಒಂದು ಮಿಥ್ ಅನ್ನು ನಂಬುವ ಹಾಗೇ ಮಾಡಿರುವುದೇ ಈ ಮೌಲ್ಯ ವ್ಯವಸ್ಥೆಯ ಹುನ್ನಾರ ಎಂದು ಹೇಳಬಹುದು. ಕೆಲವು ಜನರಿಗೆ ಈ ವ್ಯವಸ್ಥೆಯನ್ನು ಪ್ರತಿಶಕ್ತಿ ಎಂದು ಒಪ್ಪಿಕೊಳ್ಳುವುದಕ್ಕೆ ಕಷ್ಟವಾಗುತ್ತದೆ. ಮುಖ್ಯವಾಗಿ ಗಮನಿಸುವುದಾದರೆ, ಈ ಪುರುಷ ಪ್ರಧಾನ ಸಮಾಜದಲ್ಲಿ ಇಂದು ಮಹಿಳೆಯ ಎರಡನೆಯ ದರ್ಜೆಯಲ್ಲಿ ಗುರುತಿಸಲ್ಪಡುತ್ತಿದ್ದಾಳೆ. ಆದ್ದರಿಂದ ದಾಂಪತ್ಯ ಸಂಬಂಧದಲ್ಲಿ, ಕುಟುಂಬದಲ್ಲಿ, ಮದುವೆ ಈ ಮೂರು ಸಂಸ್ಥೆಗಳು ಮಹಿಳೆಯನ್ನು ಇದುವರೆಗೂ ಕಂಡಿರುವುದರ, ಕಾಣುತ್ತಿರುವುದರ ಹಾಗೂ ಅವಳು ನಿಜವಾಗಿ ಇರುವ ವಾಸ್ತವಗಳ ಸತ್ಯಾಸತ್ಯತೆಯನ್ನು ಇಂದು ವ್ಯಾಪಕ ಚರ್ಚೆಗಳ ಮೂಲಕ ಅವಲೋಕನಕ್ಕೆ ಒಳಪಡಿಸಲಾಗುತ್ತಿದೆ. ಈ ಮೂರು ಸಂಸ್ಥೆಗಳ ಮೂಲಕ ವಾಸ್ತವದಲ್ಲಿ ಗಂಡು–ಹೆಣ್ಣಿನ ಸಂಬಂಧದ ನೆಲೆಗಳಲ್ಲಿ ಮಹಿಳೆಯ ಸ್ಥಾನಮಾನಗಳನ್ನು ಮರುಪರಿಶೀಲನೆಗೆ ಒಳಪಡಿಸುವುದು ಇಂದಿನ ಅಗತ್ಯವಾಗಿದೆ. ಹೆಣ್ಣಿಗೆ ಪ್ರತಿಶಕ್ತಿಯಾಗಿ ಮೊದಲು ಗಂಡು ಇರುತ್ತಾನೆ. ನಂತರದಲ್ಲಿ ಅವರೇ ಮುಖ್ಯ ಪ್ರತಿನಿಧಿಗಳಾಗಿ ಮಹಿಳೆಯನ್ನು ನಿಯಂತ್ರಿಸಲು ಸ್ಥಾಪಿಸಿಕೊಂಡಿರುವ ಮದುವೆ, ಕುಟುಂಬ, ದಾಂಪತ್ಯ ಇವುಗಳಲ್ಲಿ ಪುರುಷ ಹೇಗೆ ಪ್ರತಿಶಕ್ತಿಯಾಗಿ ನಿರ್ಧಾರಕ ಸ್ಥಾನದಲ್ಲಿ ನಿಲ್ಲುತ್ತಾನೆ ಎಂಬುದನ್ನು ಪ್ರಸ್ತುತವಾಗಿ

ಚರ್ಚೆಗೆ ಒಳಪಡಿಸುವುದು ಮುಖ್ಯವಾಗಿದೆ. ಈ ಮೂರು ಸಾಮಾಜಿಕ ಸಂಸ್ಥೆಗಳನ್ನು ಮನುಷ್ಯ ತನ್ನ ಅವಶ್ಯಕತೆಗಳಿಗಾಗಿ ಸ್ಥಾಪಿಸಿಕೊಂಡಿದ್ದಾನೆ. ಸಮಾಜದ ಏಳಿಗೆಗಾಗಿ, ವ್ಯಕ್ತಿತ್ವದ ಬೆಳವಣಿಗೆಗಾಗಿ ರೂಪಿಸಿಕೊಂಡಿದ್ದಾನೆ. ಈ ಎಲ್ಲಾ ನೆಲೆಗಳಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಎಲ್ಲಾ ನಿಯಮಗಳು ಸಮಾನ ನೆಲೆಯಲ್ಲಿ ಇವೆ ಎಂದು ನಂಬಿಸಿಕೊಂಡು ಬರಲಾಗಿದೆ. ಆದರೆ ವಾಸ್ತವದಲ್ಲಿ ಆಯ್ಕೆಗಳು, ಅವಕಾಶಗಳು, ನಿರ್ಧಾರಗಳು ಪುರುಷ ಪರವಾಗಿದ್ದು, ಸ್ತ್ರೀ ವಿರೋಧಿಯಾಗಿರುವುದು ಕಟು ಸತ್ಯವಾಗಿದೆ. ಎಲ್ಲಾ ಸಾಮಾಜಿಕ ರಂಗಗಳಲ್ಲಿ ಮಹಿಳೆಯ ಅಭಿಪ್ರಾಯ, ವರ್ತನೆ ಇವುಗಳಿಗೆ ಮಾನ್ಯತೆ ದೊರೆಯುತ್ತಿಲ್ಲ. ಆಕೆ ಯಾವುದೇ ನಿರ್ಧಾರಗಳನ್ನು ತೆಗೆದುಕೊಂಡಾಗ ನಿರ್ಧಾರಗಳನ್ನು ಹೀಗಳೆಯುತ್ತಾ ಹೋಗಲಾಗುತ್ತದೆ. ನಿನ್ನ ವ್ಯಕ್ತಿತ್ವ ಹೀಗೇ ಇರಬೇಕು, ನಿನಗೆ ನಿರ್ದಿಷ್ಟವಾದ ಖಚಿತವಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯವಿಲ್ಲ ಎಂದು ಬಿಂಬಿಸುತ್ತಾ ಹೋಗಲಾಗುತ್ತದೆ. ಗಂಡು ಇರುವುದೇ ಸದಾ ಮಹಿಳೆಗೆ ನಿರ್ದೇಶನ ಮಾಡಲು ಎಂಬಂತೆ ಪುರುಷಸಂಸ್ಕೃತಿ ವರ್ತಿಸುತ್ತಿರುತ್ತದೆ. ಆದ್ದರಿಂದ ಸ್ತ್ರೀ ಪುರುಷರು ಬದುಕಬೇಕಾದ ರೀತಿ–ನೀತಿಗಳನ್ನು ತಿಳಿಯುವ ಹಾಗೂ ನಿರ್ದೇಶಿಸುವ ಆಲೋಚನೆಗಳು ಪುರುಷ ಕೇಂದ್ರಿತವಾಗಿದೆ. ಇದರಿಂದ ಹೆಣ್ಣು ಗಂಡಿನಿಂದ ನಿರ್ಮಿಸಲ್ಪಟ್ಟ ವ್ಯಕ್ತಿ ಎನಿಸಿಕೊಂಡಿದ್ದಾಳೆ.

ಇಲ್ಲಿ ಮದುವೆಯ ಆಯ್ಕೆಯ ಪ್ರಶ್ನೆಗಳು ಬಂದಾಗ ಲಿಂಗತಾರತಮ್ಯ ನೆಲೆಗಳು ಪ್ರಧಾನವಾಗಿ ಗೋಚರಿಸುತ್ತವೆ. ಅಂದರೆ ಪುರುಷನಿಗೆ ಎಲ್ಲಾ ರೀತಿಯ ಆಯ್ಕೆಗಳು, ಆದ್ಯತೆಗಳು ಇರುತ್ತವೆ. ಮದುವೆ ವಿಚಾರಗಳಲ್ಲಿ ಸ್ವತಂತ್ರ್ಯವಾದ ನಿರ್ಧಾರ ತೀರ್ಮಾನಗಳಿಗೆ ಪ್ರಾಧಾನ್ಯತೆ ಇರುತ್ತದೆ. ಆದರೆ ಮಹಿಳೆಗೆ ಹುಟ್ಟಿನಿಂದಲೇ ಪರರ ಮನೆಯ ಸೊತ್ತು ಎಂಬಂತೆ ಬೆಳೆಸಲಾಗುತ್ತದೆ. ಹೀಗಾಗಿ ಆಕೆಯ ವ್ಯಕ್ತಿತ್ವ, ಶಿಕ್ಷಣ, ಆತ್ಮಗೌರವ, ರಕ್ಷಣೆಯನ್ನು ಪ್ರೋತ್ಸಾಯಿಸುವುದಕ್ಕೆ ಬದಲಾಗಿ, ವಿನಯ, ಸಹನೆ, ವಿಧೇಯತೆ, ಕ್ಷಮೆ, ಪ್ರೀತಿ, ವಿಶ್ವಾಸ ಇವುಗಳನ್ನು ಬೋಧಿಸಲಾಗುತ್ತದೆ. ಹೀಗೆ ಮಹಿಳೆಯ ವ್ಯಕ್ತಿತ್ವವನ್ನು ಹತ್ತಿಕ್ಕುತ್ತಾ ಮದುವೆಯ ಆಯ್ಕೆಯನ್ನು ತಿರಸ್ಕರಿಸಲಾಗಿದೆ. ಇಲ್ಲಿ ತಂದೆ ತಾಯಿಗಳು ನೋಡಿದ ಗಂಡನ್ನು ವಿರೋಧಿಸದೆ ಮದುವೆಯಾಗಬೇಕಾಗಿದೆ. ಈ ಒಂದು ಆಯ್ಕೆಯನ್ನು ತಿರಸ್ಕರಿಸಿದರೆ ಆಕೆಯ ಮೇಲೆ ದೈಹಿಕ, ಮಾನಸಿಕ ಹಲ್ಲೆಗಳು, ನಿಂದನೆಗಳು ಕಟ್ಟಿಟ್ಟ ಬುತ್ತಿ. ಆಕೆಯನ್ನು ಎದುರಿಸುವ ಮೂಲಕ ತನ್ನ ಕೈಗೊಂಬೆಯಾಗಿ ಈ ವ್ಯವಸ್ಥೆ ಮಾಡಿಕೊಂಡಿದೆ. ಹೆಣ್ಣಿನ ಮದುವೆಯು ಪುರುಷನ ನಿರ್ಧಾರಕ ಅಂಶಗಳಿಂದ ಕೂಡಿದೆ.

ದಾಂಪತ್ಯದಲ್ಲಿ ಕೂಡ ಎಲ್ಲಾ ನಿರ್ಧಾರಕ ಸ್ಥಾನಗಳಲ್ಲಿ ಪುರುಷನೇ ಇರುತ್ತಾನೆ. ಮಹಿಳೆಯು ಗಂಡ ಹೇಳಿದಂತೆ ಕೇಳಿಕೊಂಡು ಇದ್ದರೆ ಮಾತ್ರ ಆಕೆಗೆ ಉಳಿಗಾಲ. ಅವರಿಗೆ ಎದುರಾಡಿದರೂ ಆಕೆಗೆ ದೈಹಿಕ ಹಲ್ಲೆಗಳು ನಿರ್ಧರಿತ, ಆಕೆ ಕೇವಲ ಹೆರುವ, ಸಾಕುವ, ಮನೆಗೆಲಸ ನಿರ್ವಹಿಸುವ, ಗಂಡನ ನಿರ್ಧಾರಗಳನ್ನು ಬೆಲೆ ಕೊಟ್ಟು ಪಾಲಿಸುವ ಅಧೀನ ವ್ಯಕ್ತಿತ್ವದಿಂದ ಕೂಡಿರುತ್ತಾಳೆ. ಅನಂತರ ಗಂಡು ದಾಂಪತ್ಯದಲ್ಲಿ ಏನೇ ತಪ್ಪುಗಳನ್ನು ಮಾಡಿದರು ಕೂಡ ಮನ್ನಿಸಲ್ಪಡುತ್ತವೆ. ಮತ್ತೆ ಅವು ಮುಖ್ಯವಾಗಿ ಚರ್ಚೆಗೆ ವಿಶ್ಲೇಷಣೆಗೆ ಒಳಪಡುವುದಿಲ್ಲ. ಎಷ್ಟಾದರು ಗಂಡಸು ಎಂಬ ಒಂದು ತೀರ್ಮಾನಕ್ಕೆ ಬರಲಾಗಿದೆ. ಅನಂತರ ಹೆಣ್ಣು ಮನೆಯಲ್ಲಿ ದುಡಿಯುವುದು ಮಾತ್ರ ಆಕೆಯ ಕೆಲಸ, ಹೊರಗಡೆ ಹೋಗುವ ಹಾಗಿಲ್ಲ, ಹಾಗೇ ಹೊರಗಡೆ ದುಡಿಯಲು ಹೋದ ಹೆಣ್ಣು ಮಕ್ಕಳಿಗೆ ಹಲವಾರು ಅಪವಾದಗಳನ್ನು ಹೇರಲಾಗುತ್ತದೆ. ಹೀಗೆ ದಾಂಪತ್ಯದಲ್ಲಿ ಮಹಿಳೆಯ ಸ್ಥಾನ, ವ್ಯಕ್ತಿತ್ವ, ನಿರ್ಧಾರ, ಅಸ್ತಿತ್ವದ ನೆಲೆಗಳು

ಗೌಣವಾಗುತ್ತಾ ಇವೆ. ಆಕೆಯು ಸ್ವಲ್ಪ ಎಚ್ಚರದಿಂದ ಇದ್ದು ಪುರುಷನನ್ನು ವಿರೋಧಿಸಿ ನಡೆದರೆ ದಾಂಪತ್ಯದಲ್ಲಿ ಉಳಿಗಾಲವಿಲ್ಲ.

ಗಂಡು ಹೆಣ್ಣಿನ ಸಂಬಂಧವು ಇಡೀ ಸಮಾಜದಲ್ಲಿ ಹೇಗಿದೆ ಎಂಬುದನ್ನು ಇಂದಿನ ವರ್ತಮಾನದಲ್ಲಿ ಅವಲೋಕಿಸುವುದು ತುಂಬಾ ಮುಖ್ಯವಾದ ಸಂಗತಿಯಾಗಿದೆ. ಹೇಗೆ ಮಹಿಳೆಯು ಕುಟುಂಬ-ವಿವಾಹ, ದಾಂಪತ್ಯ ಹೀಗೆ ಎಲ್ಲಾ ಸಂಸ್ಥೆಗಳಲ್ಲಿ ಅಧೀನತೆಯಿಂದ ಕೂಡಿದ್ದಾಳೆಯೋ, ಹಾಗೇ ಸಮಾಜದಲ್ಲಿ ಮಹಿಳೆಯನ್ನು ನೋಡುವ ದೃಷ್ಟಿಕೋನಗಳು ಅಧೀನ ನೆಲೆಯಲ್ಲಿಯೇ ನಿಲ್ಲಿಸಿವೆ. ಅಂದರೆ ಗಂಡು-ಹೆಣ್ಣಿನ ಸಂಬಂಧವನ್ನು ನೈತಿಕ-ಅನೈತಿಕ ಎಂಬ ನೆಲೆಗಳಲ್ಲಿ ಇಂದು ನಿರ್ಧರಿಸಲಾಗುತ್ತಿದೆ. ಗಂಡು ಮಾಡಿದೆಲ್ಲವನ್ನು ನೈತಿಕ ನೆಲೆಯಲ್ಲಿ, ಒಪ್ಪಿತ ನೆಲೆಗಳಲ್ಲಿ ಸ್ವೀಕರಿಸಲಾಗುತ್ತಿದೆ. ಈ ಮೂಲಕ ಸಮಾಜದಲ್ಲಿ ಗಂಡು ಹೆಣ್ಣಿನ ಸಂಬಂಧಗಳಲ್ಲಿ ಗಂಡಿಗೆ ಬೇರೆ ಮೌಲ್ಯ, ಹೆಣ್ಣಿಗೆ ಬೇರೆ ಮೌಲ್ಯಗಳನ್ನು ಕೊಡಲಾಗಿದೆ. ಒಟ್ಟಾರೆ ಈ ಪಿತೃ ಸಂಸ್ಕೃತಿಯು ಗಂಡು ಹೆಣ್ಣಿನ ನಡುವೆ ಒಂದು ಶ್ರೇಣೀಕರಣವನ್ನು ತಂದಿದೆ. ಒಂದು ಅಧಿಕಾರ ಸಂಬಂಧವನ್ನು ತಂದಿದೆ. ಈ ಅಧಿಕಾರ ಸಂಬಂಧದಲ್ಲಿ ಅದು ದಾಂಪತ್ಯದಲ್ಲಿ ಗಂಡು ಒಂದು ಹೆಜ್ಜೆ ಮೇಲಿರುತ್ತಾನೆ. ಅಪ್ಪ ಮಗಳ ಸಂಬಂಧದಲ್ಲಿ ಅಪ್ಪ ನಿರ್ದೇಶಿಸುವ ಅಧಿಕಾರದಲ್ಲಿ ಇರುತ್ತಾನೆ. ಅಣ್ಣ ತಂಗಿಯರ ಸಂಬಂಧದಲ್ಲಿ ಅವನಿಗೆ ಮೇಲುಗೈ ಇರುತ್ತದೆ. ಈ ಅಧಿಕಾರ ಸಂಬಂಧವನ್ನು ಗಂಡು ಹೆಣ್ಣಿನ ಎಲ್ಲಾ ಸಂಬಂಧಗಳಲ್ಲಿಯೂ ತರಲಾಗಿದೆ. ಎಷ್ಟೋ ಸಲ ತಮ್ಮಂದಿರು ಅಕ್ಕಂದಿರ ಮೇಲೆ ದಬ್ಬಾಳಿಕೆ ನಡೆಸುವುದನ್ನು ನಾವು ನೋಡುತ್ತೇವೆ. ಅಂದರೆ ತಾನು ಗಂಡು ಎನ್ನುವ ಒಂದು ಅಸ್ತ್ರ ಸಾಕು ಅವಳ ಬದುಕಿನ ಎಲ್ಲಾ ಘಟ್ಟದಲ್ಲಿಯೂ ಅವರ ಕಣ್ಣಲ್ಲಿ ಮಹಿಳೆಯು ಒಪ್ಪಿತ ನೆಲೆಯಲ್ಲಿ ಇರಬೇಕು. ಇದನ್ನು ನಾವು ಅಧೀನ ವ್ಯಕ್ತಿತ್ವ ಎಂದು ಕರೆಯುತ್ತೇವೆ. ಗಂಡು ಕೇಂದ್ರದಲ್ಲಿ ಇರುತ್ತಾನೆ. ಹೆಣ್ಣು ಯಾವಾಗಲೂ ಅಂಚಿನಲ್ಲಿರುತ್ತಾಳೆ.

ನಂತರ ಗಂಡು ಹೆಣ್ಣಿನ ಸಂಬಂಧದಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಇಲ್ಲಿ ಗಂಡಿಗೆ ಬೇರೆ ಹೆಣ್ಣಿನ ಜೊತೆಯಲ್ಲಿ ಸಂಬಂಧ ಇದ್ದರೆ ಆತನು ರಸಿಕನಾಗಿರುತ್ತಾನೆ. 'ಅಯ್ಯೋ ಹೋಗ್ಲಿ ಬಿಡು ಗಂಡಸರು ಏನು ಮಾಡಿದರೂ ನಡೆಯುತ್ತದೆ' ಎನ್ನುವ ರೀತಿಯಲ್ಲಿ ಅದನ್ನು ಒಪ್ಪಿಕೊಳ್ಳಲಾಗುತ್ತದೆ ಮತ್ತು ಒಪ್ಪಿಕೊಳ್ಳುವ ಹಾಗೇ ಮಾಡಲಾಗುತ್ತದೆ. ಆದರೆ ಅದೇ ಹೆಣ್ಣು ಮಕ್ಕಳು ಅದನ್ನು ಮಾಡಿದರೆ ಮರ್ಯಾದೆ ಹತ್ಯೆ ಆಗಿರುತ್ತದೆ. ಇನ್ನು ಮುಖ್ಯವಾಗಿ ಗಂಡು ಎಷ್ಟೇ ಅನೈತಿಕವಾಗಿ ಎರಡು ಮೂರು ಮದುವೆಗಳನ್ನು ಮಾಡಿಕೊಂಡರೆ ಅವನು ಗಂಡಸು ಬಿಡು ದುಡಿಯುತ್ತಾನೆ ಎಂದು ಹೇಳಲಾಗುತ್ತದೆ. ಅದೇ ಹೆಣ್ಣಿಗೆ ಅನ್ವಯಿಸಿಕೊಂಡರೆ ಆಕೆಯನ್ನು ಎಲ್ಲಾ ಮಾದರಿಗಳಲ್ಲಿ ನಿಂದಿಸುತ್ತಾ ಆಕೆಯ ವ್ಯಕ್ತಿತ್ವಕ್ಕೆ ಮಸಿ ಬಳಿಯಲಾಗುತ್ತದೆ. ಆದರೆ ಇಂದಿನ ಮಹಿಳಾ ವಾದಿಗಳ ಪ್ರಶ್ನೆ ಇಷ್ಟೆ. ಹೀಗೆ ಮಹಿಳೆಯರಿಗೆ ಒಂದು, ಪುರುಷರಿಗೆ ಒಂದು ಸ್ಥಾನ ಅವಕಾಶಗಳು, ಅಂತಸ್ತುಗಳು ಇರಬೇಕಾಗಿಲ್ಲ ಎಂದು ಹೇಳುತ್ತಾರೆ. ಇದರಿಂದಾಗಿಯೇ ಇಂದು ಹಲವಾರು ರೀತಿಯ ಹೋರಾಟಗಳು ಪರಾಮರ್ಶೆಗಳು ನಡೆಯುತ್ತಿವೆ. ಅವರ ಪ್ರಕಾರ ಮಹಿಳೆ ಮಾಡಿದ್ದು ತಪ್ಪು ಅನ್ನುವುದಾದರೆ ಪುರುಷ ಮಾಡಿದ್ದು ಕೂಡ ತಪ್ಪು ಆಗಬೇಕು ಎಂಬ ವಾದ ಸ್ತ್ರೀವಾದಿಗಳದ್ದು. ಇಂದು ನಾವು ಯಾವ ಸರಿತಪ್ಪುಗಳ ಬಗ್ಗೆ ಮಾತನಾಡುತ್ತೇವೆಯೋ, ಯಾವ ಮೌಲ್ಯಗಳ ಬಗ್ಗೆ ಮಾತನಾಡುತ್ತೇವೆಯೋ ಶೀಲದ ಪ್ರಶ್ನೆ ಆಗಿರಬಹುದು, ಸಂಸಾರದ ಬದ್ಧತೆಯ ಪ್ರಶ್ನೆ ಆಗಿರಬಹುದು ಎಲ್ಲವುಗಳಲ್ಲಿ ಮಹಿಳೆಗೆ ಪುರುಷನಂತೆಯೇ ಅಧಿಕಾರ ಅವಕಾಶಗಳು

ಬೇಕು ಎಂದು ಒತ್ತಾಯಿಸುತ್ತಾರೆ. ಭಾರತೀಯ ಸಮಾಜದಲ್ಲಿ ಪತಿವ್ರತೆಗೆ ಸಮನಾದ ಪದ ಪುರುಷರಿಗೆ ಇಲ್ಲ. ಈ ಇಲ್ಲ ಅನ್ನುವುದು ಪುರುಷ ಮತ್ತು ಮಹಿಳೆಯ ನಡುವಿನ ತಾರಮ್ಯದ ಕಂದರವನ್ನು ತಿಳಿಸುತ್ತದೆ. ಇದರಿಂದ ಒಂದು ಮೌಲ್ಯ ಎನ್ನುವುದು ಎಲ್ಲ ಮನುಷ್ಯನಿಗೆ ಸಮಾನವಾಗಿ ಇರಬೇಕು. ಯಾವುದು ಮನುಷ್ಯನಿಗೆ ಸಮಾನವಾಗಿ ಇಲ್ಲವೋ ಅದನ್ನು ನಾವು ಮೌಲ್ಯ ಎಂದು ಒಪ್ಪಬೇಕಾಗಿಲ್ಲ ಎಂಬುದು ಇಂದಿನ ಸ್ತ್ರೀವಾದಿಗಳ ತಾತ್ವಿಕ ನೆಲೆಯಾಗಿದೆ ಮತ್ತು ತಾತ್ವಿಕ ಗ್ರಹಿಕೆಯಾಗಿದೆ.

ಪುರುಷ ಪ್ರಧಾನ ಸಮಾಜವು ಕುಟುಂಬದಲ್ಲಿ ಮಹಿಳೆಯರನ್ನು ಯಾವ ಮಾದರಿಗಳಲ್ಲಿ ಶೋಷಣೆಗೆ, ಹಿಂಸೆಗೆ ಗುರಿಪಡಿಸುತ್ತದೆ ಎಂಬುದನ್ನು ಆಶಾದೇವಿಯವರು ಪರಂಪರೆಯ ಮೂಲಕ ಶೋಧಿಸುತ್ತಾರೆ. ಈ ಮೂಲಕ ಮಹಿಳೆಯ ಸ್ಥಾನ ಮಾನಗಳನ್ನು ವ್ಯವಸ್ಥೆಯೊಡನೆ ಮುಖಾಮುಖಿಯಾಗಿಸುತ್ತಾರೆ. ಅನಾದಿಕಾಲದಿಂದಲೂ ಪುರುಷ ಪ್ರಧಾನ ವ್ಯವಸ್ಥೆಯೂ ಮಹಿಳೆಯನ್ನು ಪ್ರತ್ಯಕ್ಷ ಮತ್ತು ಪರೋಕ್ಷ ಮಾರ್ಗಗಳ ಮೂಲಕ ಹಲವಾರು ತಂತ್ರಗಳ ಮೂಲಕ ನಿಯಂತ್ರಣಕ್ಕೊಳಪಡಿಸುತ್ತಾ ಬಂದಿದೆ. ಇದರ ಒಂದು ಭಾಗವಾಗಿಯೇ ಕುಟುಂಬದ ಒಳಗೆ ಮಹಿಳೆ ಆದರ್ಶ ನಾರಿಯಾಗಿರಬೇಕು. ಸಹನೆಯಿಂದ, ವಿನಯದಿಂದ, ತಾಳ್ಮೆಯಿಂದ ಇರಬೇಕು ಎದುರಾಡಬಾರದು, ಹೆಚ್ಚು ಮಾತನಾಡಬಾರದು ಎಂಬ ಪೂರ್ವ ನಿಯೋಜಿತ ನಂಬಿಕೆಯನ್ನು ಮಹಿಳೆಗೆ ಹುಟ್ಟಿನಿಂದ ತುಂಬಲಾಗುತ್ತದೆ ಎಂದು ಅವರು ಹೇಳುತ್ತಾರೆ. ಈ ಆದರ್ಶನಾರಿ ಎಂಬ ಪರಿಕಲ್ಪನೆಯೇ ಎಷ್ಟು ಅನ್ಯೆತಿಕವಾದದ್ದು, ಎಷ್ಟು ಅಮಾನುಷವಾದದ್ದು ಎಂಬುದನ್ನು ತಿಳಿಸುತ್ತದೆ. ಈ ಪಿತೃ ಪ್ರಧಾನ ಸಮಾಜವು ಮಹಿಳೆಯನ್ನು ಆದರ್ಶನಾರಿಯಾಗಿ ಇರಬೇಕು ಎಂದು ಹೇಳುತ್ತದೆ. ಆದರೆ ಮಹಿಳೆಯು ವಾಸ್ತವದಲ್ಲಿ ಅವಳೇನಾಗಿದ್ದಾಳೆ ಎಂಬುದನ್ನು ಚರ್ಚೆಗೆ ಒಳಪಡಿಸುವುದು ಈ ಹೊತ್ತಿನ ಅಗತ್ಯವಾಗಿದೆ. ಅಂದರೆ ಆದರ್ಶ ನಾರಿಯ ಪ್ರತಿನಿಧೀಕರಣದಲ್ಲಿ ಪ್ರತಿಯೊಬ್ಬ ಮಹಿಳೆಯು ತನ್ನ ತನವನ್ನು ಕೊಂದು ಕೊಂಡು ಬದುಕುವುದಾಗಿರುತ್ತದೆ. ತನ್ನ ನಿಜ ವ್ಯಕ್ತಿತ್ವದ ಸ್ವರೂಪದಲ್ಲಿ ವ್ಯಕ್ತಿ ಘನತೆಯಲ್ಲಿ, ವೈಯಕ್ತಿಕ ಸ್ವಾತಂತ್ರ್ಯದ ನೆಲೆಯಲ್ಲಿ ಬದುಕುವ ಅವಕಾಶವನ್ನು ಹತ್ತಿಕ್ಕಿಕೊಳ್ಳುವುದಾಗಿರುತ್ತದೆ. ಆದ್ದರಿಂದ ಈ ಆದರ್ಶನಾರಿ ಎಂಬ ಪರಿಕಲ್ಪನೆಯೇ ಒಂದು ಪೂರ್ವನಿಯೋಜಿತವಾದದ್ದು ಎಂಬುದನ್ನು ತಿಳಿಯಬೇಕಾಗಿದೆ.

ಮುಖ್ಯವಾಗಿ ತಾಯಿ, ಅಕ್ಕ, ಅಜ್ಜಿ ಪಾತ್ರಗಳ ಮೂಲಕ ಒಂದು ಹೆಣ್ಣಿನಿಂದಲೇ ಮತ್ತೊಂದು ಹೆಣ್ಣಿಗೆ ಇಂತಹ ಸ್ಥಾಪಿತ ಉಪದೇಶಗಳನ್ನು ಪುರುಷ ಸಮಾಜ ಮಹಿಳೆಗೆ ಬಾಲ್ಯದಿಂದಲೇ ಬೋಧಿಸುತ್ತದೆ. ಮಹಿಳೆಗೆ ಸಮಾಜವು ಕೆಲವು ಮಾದರಿಗಳನ್ನು ಒದಗಿಸುತ್ತದೆ. ಈ ಮಾದರಿಯು ಪುರುಷರ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡಿದೆ. ಮುಖ್ಯವಾಗಿ ವಿಧೇಯ ಹೆಂಗಸಿನ ಮಾದರಿಯನ್ನು ಚಾಲ್ತಿಯಲ್ಲಿ ಬಿಡಲಾಗಿದೆ ಎನ್ನುವುದಕ್ಕಿಂತ ಈ ಹೆಂಗಸಿನ ಮಾದರಿಯನ್ನು ಚಾಲ್ತಿಯಲ್ಲಿ ಇಡಲಾಗಿದೆ ಮತ್ತು ಅದನ್ನು ಹೇರಲಾಗಿದೆ. ಹೆಣ್ಣಿಗೆ ಒಡ್ಡಲಾಗಿರುವ ಎಲ್ಲಾ ಕರಾರುಗಳನ್ನು ಈ ವ್ಯವಸ್ಥೆ ಮೌಲ್ಯ ಎಂದು ಕರೆಯುತ್ತದೆ. ಈ ಎಲ್ಲಾ ಕರಾರುಗಳನ್ನು ಹೆಣ್ಣು ಸಂಪನ್ನೆಯಾಗಿರಬೇಕು ಎಂದು ಬಿಂಬಿಸುವುದನ್ನು ಪುರುಷ ಪ್ರಧಾನ ಸಮಾಜ ಕಾನೂನು ಎಂದು ಹೇಳುವುದಿಲ್ಲ ಅದನ್ನು ಮೌಲ್ಯ ಎಂದು ಬಿಂಬಿಸುತ್ತದೆ. ಅಂದರೆ ಯಾರಿಗಾದರೂ ಕೋಲು ಹಿಡಿದುಕೊಂಡು ಎದುರಾಡಬೇಡ ಎನ್ನುವುದು ಬೇರೆ, ಹೆಣ್ಣಾದವಳು ಹೀಗಿದ್ದರೇನೆ ಎಂಬುವುದನ್ನು ಬಿಂಬಿಸುವುದು ಬೇರೆ. ಹೀಗೆ

ಬಿಂಬಿಸುವುದು ಮಹಿಳೆ ಹೀಗೆ ಇರಬೆಕು ಎಂಬುದು ಪುರುಷ ಪ್ರಧಾನ ಸಮಾಜದ ಒಂದು ಹುನ್ನಾರವಾಗಿದೆ. ಬೇಷರತ್ತಾಗಿ ತಾನು ಅಧೀನಳೆಂದು ಒಪ್ಪುವ, ತಾನು ಪುರುಷನ ಅಣತಿಯಂತೆ ನಡೆಯಬೇಕು ಎಂದು ಒಪ್ಪುವ ಹೆಂಗಸೆ ನಿಜವಾದ ಹೆಂಗಸು ಅಥವಾ ಅದೇ ನಿಜವಾದ ಹೆಂಗಸಿನ ಆದರ್ಶ. ಈ ರೀತಿ ಅಧೀನವಾಗಿಸುವಿಕೆಯ ಉದ್ದೇಶದಿಂದ ಹೆಂಗಸಿನ ಲೈಂಗಿಕ ಜೀವನದ ಮೇಲಿನ ನಿಯಂತ್ರಣಕ್ಕೆ ಅಗತ್ಯವಾಗಿ ಪಾವಿತ್ರತೆಯ ಮಾದರಿಯನ್ನು ರೂಪಿಸಲಾಗಿದೆ.

ಪಾವಿತ್ರ್ಯದ ಕಠಿಣ ಪರೀಕ್ಷೆಯನ್ನು ಸೀತೆಯ ಸಂಕೇತದಲ್ಲಿ ಚಾಲ್ತಿಗೆ ತರಲಾಗಿದೆ. ಹೆಂಗಸಿಗೆ ಈ ಸಂಕೇತ ಸದಾ ಎಚ್ಚರಿಕೆಯ ಗಂಟೆಯಾಗಿರಬೇಕೆಂಬುದು ಪಿತೃಸಂಸ್ಕೃತಿಯ ಅಪೇಕ್ಷೆಯಾಗಿದೆ. ತಪ್ಪು ಮಾಡದ ಸೀತೆಯೇ ಆ ದುರಂತಕ್ಕೆ ಒಳಗಾದಳೆಂದು ತೋರುವುದರ ಹಿಂದೆ ಇರುವ ಬೆದರಿಕೆಯನ್ನು ಆಳವಾಗಿ ಹೆಂಗಸಿನ ಪ್ರಜ್ಞೆಯಲ್ಲಿ ಹೇಳುವ ಅಥವಾ ಹೇರುವ ಉದ್ದೇಶವಾಗಿದೆ. ಈ ಎಲ್ಲಾ ಮಾದರಿಗಳ ಮೂಲಕವಾಗಿ ಮಹಿಳೆಗೆ ಮೊದಲು ಕುಟುಂಬದಿಂದಲೇ ಶೋಷಣೆ ಪ್ರಾರಂಭವಾಗುತ್ತದೆ. ಹೀಗೆ ಕುಟುಂಬವೇ ಮೊದಲ ಶೋಷಕ ಕೇಂದ್ರವಾಗಿದೆ. ಇದರಿಂದ ಹೆಣ್ಣು ಪಡೆಯುವ ವ್ಯಕ್ತಿತ್ವವು ಮಹಿಳೆಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಹಿಂದಿನಿಂದಲೂ ಹಲವಾರು ಮಾದರಿಗಳ ಮೂಲಕ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುತ್ತಾ ಬಂದಿದೆ. ಹೀಗೆ ಸಾಮಾಜಿಕ ಕೌಟುಂಬಿಕ ಕಟ್ಟಳೆಗಳನ್ನು ವಿಧಿಸುವ ಮೂಲಕ ನೀನು ಹೆಣ್ಣು ಎಂದು ಹೇಳಿ ಕೇವಲ ಅಡುಗೆ ಮನೆಗೆ ಸೀಮಿತಗೊಳಿಸುವ, ಈ ಮೂಲಕ ಆಕೆಯ ವ್ಯಕ್ತಿತ್ವವನ್ನು ಸಂಕುಚಿತಗೊಳಿಸುವ ಹುನ್ನಾರ ಪಿತೃಪ್ರಧಾನ ವ್ಯವಸ್ಥೆಯದಾಗಿದೆ. ಈ ರೀತಿಯಾಗಿ ಲಿಂಗ ತಾರತಮ್ಯ ವ್ಯವಸ್ಥೆಯು ಕುಟುಂಬದಿಂದಲೇ ಪ್ರಾರಂಭವಾಗಿರುವುದನ್ನು ನೋಡಬಹುದು. ಹುಟ್ಟಿನಿಂದಲೇ ಹೆಣ್ಣಿನ ತಲೆಯಲ್ಲಿ ನೀನು ಹೆಣ್ಣು ಎಂದು ಹಲವಾರು ರೀತಿ ನೀತಿಗಳನ್ನು ತುಂಬಿ ಸಂಕುಚಿತವಾದ ನೆಲೆಯಲ್ಲಿ ಬೆಳೆಸಲಾಗುತ್ತದೆ. ಸ್ಥಿರಮಾದರಿ ಪಾತ್ರಗಳ ಮೂಲಕ ಸಾಮಾಜೀಕರಣದ ತರಬೇತಿಯನ್ನು ಕೊಡಲಾಗುತ್ತದೆ. ಪುರಾಣ ಪಾತ್ರದ ಸೀತೆ, ದ್ರೌಪದಿ, ರಾಧೆ, ಸಾವಿತ್ರಿ ಹೀಗೆ ಐತಿಹ್ಯ ಕಲೆಗಳ ಮೂಲಕ ಆದರ್ಶನಾರಿಯ ಚಿತ್ರಣವನ್ನು ಎದುರಿಗಿರಿಸಲಾಗಿದೆ. ಹೀಗೆ ಹೆಣ್ಣನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳುತ್ತದೆ. ಕುಟುಂಬದಲ್ಲಿ ಎಲ್ಲಾ ಅಧಿಕಾರಗಳು, ಹೆಣ್ಣಿನ ಮೇಲಿನ ಹಿಡಿತಗಳು ಪುರುಷನ ಮುಷ್ಟಿಯಲ್ಲಿರುತ್ತವೆ. ಗಂಡು ಮತ್ತು ಹೆಣ್ಣಿನ ಕುಟುಂಬದಲ್ಲಿ ಲಿಂಗ ತಾರತಮ್ಯವನ್ನು ಈ ಮುಂದಿನಂತೆ ಗುರುತಿಸಬಹುದು.

ಗಂಡಿಗೆ ಕುಟುಂಬದಲ್ಲಿರುವ ಅಧಿಕಾರವನ್ನು, ಹೆಣ್ಣಿನ ಅಧೀನತೆಯನ್ನು ಸ್ಪಷ್ಟವಾಗಿ ಸ್ಥಾಪಿಸುವ ವ್ಯವಸ್ಥೆಯ ನೀತಿಗೆ ಆಧಾರವಾಗಿ ಕುಮಾರವ್ಯಾಸ ಭಾರತದ ಈ ಕೆಳಗಿನ ಹೇಳಿಕೆಗಳ ಮೂಲಕ ತಿಳಿಯಬಹುದು.

**ಇರುಳು ಹಗಲವರತ ಪತಿ ಪರಿ**

**ಚಯವನ್ನು ಮಾಡುತ್ತ ಪರಮರು**

**ಷರನ್ನು ನೆನೆಯದೆ ಹಲವು ಸಂತತಿಗಳಿಗೆ ತಾಯಾಗಿ ('ಕುಮಾರವ್ಯಾಸ ಭಾರತ')**

ಈ ಮೇಲ್ಕಂಡ ಪದ್ಯ ಭಾಗದಲ್ಲಿ ಹೆಣ್ಣು ಕುಟುಂಬದಲ್ಲಿ ಇರುವ, ಇರಬೇಕಾದ ಸ್ಥಿತಿಯನ್ನು ಪುರುಷ ಸಂಸ್ಕೃತಿಯು ನಿರ್ಧರಿಸಿಬಿಟ್ಟಿದೆ. ಹೀಗೆ ಹೆಣ್ಣು ಇರಬೇಕೆಂಬುದು ವ್ಯವಸ್ಥೆಯ ಅಪೇಕ್ಷೆ ಕೂಡ ಆಗಿದೆ. ಗಂಡನ ಸೇವೆ ಮಾಡುತ್ತಾ ಪರಪುರುಷರನ್ನು ನೆನೆಯದೆ ಇರಬೇಕು ಎನ್ನುವ ಕರಾರು ಪಿತೃಪ್ರಧಾನ ಸಮಾಜದ್ದು. ಬಸವಣ್ಣನು ಕೂಡ ಮಹಿಳೆಯ ಸಮಾನತೆಗೆ ಹೋರಾಟ ಮಾಡಿದರೂ ಆತನಲ್ಲಿ ವ್ಯವಸ್ಥೆಯ ಪ್ರತಿನಿಧಿಯಾಗಿ ಮಹಿಳೆಯನ್ನು ಆಕೆ ಇರಬೇಕಾದ ಸ್ಥಿತಿಯನ್ನು ತನ್ನ ವಚನದ ಮೂಲಕ ತಿಳಿಸಿದ್ದಾನೆ. ಕುಟುಂಬದಲ್ಲಿ "ಅನುಕೂಲ ಸತಿಯಾಗಿರಬೇಕು"ಎಂದು ಹೇಳುತ್ತಾನೆ. ಕುಟುಂಬದಲ್ಲಿ ಗಂಡಿಗೆ ಯಾವುದೇ ಸ್ಥಾಪಿತ ಕರಾರುಗಳಿಲ್ಲ, ಅದೇನಿದ್ದರೂ ಮಹಿಳೆಗೆ ಎಂಬ ಅಂಶ ಈ ಎರಡು ಮೇಲ್ಕಂಡ ಹೇಳಿಕೆಗಳ ಮೂಲಕ ಸ್ಪಷ್ಟವಾಗುತ್ತದೆ. ಮಹಿಳೆಯನ್ನು ನಿಯಂತ್ರಿಸುವ ಭಾಗವಾಗಿ 'ಮಾಯೆ'ಯೆಂಬ ಒಂದು ಹಣೆ ಪಟ್ಟಿಯನ್ನು ಕೂಡ ಸಮಾಜದಲ್ಲಿ ಕೊಡಲಾಗಿದೆ. 'ಮಾಯೆ' ಎನ್ನುವುದು 'ಅನುಕೂಲ ಸತಿ' ಎನ್ನುವುದು ವ್ಯವಸ್ಥೆಯ ತಂತ್ರ ಮಾದರಿಗಳಲ್ಲಿ ಒಂದಾಗಿದೆ. ಹೀಗೆ ಕುಟುಂಬದಲ್ಲಿ ಮಹಿಳೆಯು ಹೀಗೆ ಇರಬೇಕು ಎಂಬ ಸಿದ್ಧಾಂತವನ್ನು ಅನಾದಿಕಾಲದಿಂದಲೂ ರೂಪಿಸುತ್ತಾ ಬಂದಿದೆ. ಆಕೆಗೆ ಯಾವುದೇ ಸ್ವಾತಂತ್ರ್ಯವನ್ನು ಕೊಡಲಾಗಿಲ್ಲ. ಕುಟುಂಬದಾಚೆಗೆ ಆಕೆಗೆ ಬದುಕನ್ನೇ ನಿರಾಕರಿಸಿದೆ. ಸಂಕುಚಿತ ವ್ಯಾಪ್ತಿಯಲ್ಲಿಟ್ಟು ತನ್ನ ಸೇವೆಗೆ ಅಣಿಗೊಳಿಸಿಕೊಂಡಿದೆ.

ಹೀಗೆ ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯನ್ನು ಶೋಷಣೆಗೆ ಒಳಪಡಿಸುತ್ತಿರುವ ವಿಧಾನಗಳನ್ನು ತಿಳಿಸುವುದು ಮತ್ತು ಗುರುತಿಸುವುದು ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಪ್ರಧಾನ ಉದ್ದೇಶವಾಗಿದೆ. ಈ ಮೂಲಕ ಸಮಕಾಲೀನ ಸಮಾಜದಲ್ಲಿರುವ ಮಹಿಳೆಯ ಸ್ಥಿತಿಗತಿಗಳನ್ನು ಶೋಧಿಸಿ ಸಮಕಾಲೀನ ಸ್ತ್ರೀವಾದವನ್ನು, ಸ್ತ್ರೀ ಚಳುವಳಿಯನ್ನು ಅವರು ಕಟ್ಟುತ್ತಾರೆ. ಕುಟುಂಬದ ಒಳಗೆ ಮಹಿಳೆಯನ್ನು ನಿಯಂತ್ರಿಸುವ ಮಾರ್ಗವು ಕಣ್ಣಿಗೆ ಕಾಣಿಸುವ ಪರೋಕ್ಷ ಮಾರ್ಗವಾದರೆ, ಕುಟುಂಬದ ಹೊರಗಡೆ ಪ್ರತ್ಯಕ್ಷವಾಗಿ, ನೇರವಾಗಿ ದಬ್ಬಾಳಿಕೆಗೆ ಬಲಿಯಾಗುತ್ತಿದ್ದಾಳೆ. ಇದರಿಂದ ಮಹಿಳೆಯು ದಿನೇ ದಿನೇ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದ್ದಾಳೆ. ಅವಳ ನಿಜ ಸ್ವರೂಪವನ್ನು ಪುರುಷ ಸಮಾಜ ತನ್ನ ಹಿತಾಸಕ್ತಿಗೆ ತಕ್ಕಂತೆ ತಿರುಚುತ್ತಿದೆ. ಕುಟುಂಬದಲ್ಲಿ ಗಂಡ, ಮಗ, ತಂದೆ ಇನ್ನು ಮುಂತಾದ ಪಾತ್ರಗಳು ಮಹಿಳೆಯನ್ನು ನಿಯಂತ್ರಿಸಿದರೆ, ಕುಟುಂಬದ ಹೊರಗೆ ಇಡೀ ಪುರುಷ ಪ್ರತಿನಿಧಿಗಳು ಮಹಿಳೆಯನ್ನು ಬಂಧನಕ್ಕೊಳಪಡಿಸಿರುವರು.

ಈ ಎಲ್ಲಾ ನಿಯಂತ್ರಣದ ಸ್ವರೂಪವು ಹಲವಾರು ರೂಪಗಳಲ್ಲಿ ಇದೆ. ಶೋಷಣೆ, ದಬ್ಬಾಳಿಕೆ, ಹಿಂಸೆ, ಹತ್ತಿಕ್ಕುವುದು, ಅವಮಾನಿಸುವುದು ಮುಂತಾದ ಮಾದರಿಗಳಲ್ಲಿ ಕಂಡುಬರುತ್ತದೆ. ಈ ನಿಯಂತ್ರಣದ ಕಾರ್ಯ ಮಾದರಿಗಳು ಕುಟುಂಬದ ಒಳಗೆ ಮತ್ತು ಹೊರಗೆ ಯಾವ ರೀತಿಯಲ್ಲಿ ಇದೆ ಎಂಬುದನ್ನು ಹಲವಾರು ಘಟನೆಗಳ ಮೂಲಕ, ಸಂದರ್ಭಗಳ ಮೂಲಕ, ಪಾತ್ರಗಳ ಮೂಲಕ, ಆಶಾದೇವಿಯವರು ಸ್ತ್ರೀವಾದವನ್ನು ಬೆಳೆಸುತ್ತಾ ಹೋಗುತ್ತಾರೆ.

### ೪.೩. ಕುಟುಂಬದ ಒಳಗಿನ ನಿಯಂತ್ರಣದ ನೆಲೆಗಳು

ಕುಟುಂಬದ ಒಳಗಿನ ನಿಯಂತ್ರಣದ ನೆಲೆಗಳು ಬಹಳ ಮುಖ್ಯವಾಗಿ ಮಹಿಳೆಯನ್ನು ಸಿದ್ಧ ಚೌಕಟ್ಟಿನಲ್ಲಿ ಕೂರಿಸುವ ತರಬೇತಿ ಕೇಂದ್ರದಂತೆ ಕೆಲಸ ಮಾಡುತ್ತವೆ. ಹಾಗಾಗಿ ಕುಟುಂಬದ ನೆಲೆಯಲ್ಲಿ

ನಿಯಂತ್ರಣದ ವಿವಿಧ ಸ್ವರೂಪವನ್ನು ಗುರುತಿಸುವ ನೆಲೆಯಲ್ಲಿ ಆಶಾದೇವಿ ಅವರು ತಮ್ಮ ವಿಮರ್ಶೆಯಲ್ಲಿ ಗುರುತಿಸುವ ಪ್ರಯತ್ನ ಮಾಡುತ್ತಾರೆ. ಇಲ್ಲಿ ಮಹಿಳೆಯ ಬಂಧನವನ್ನು ಕುಟುಂಬದ ಜತೆಗೆ ಸಮೀಕರಿಸುವ ಪ್ರಯತ್ನಗಳೂ ಇವೆ. ಅಂತೆಯೇ ಕುಟುಂಬದ ಚೌಕಟ್ಟನ್ನು ಮೀರುವುದು ಸ್ತ್ರೀಯ ಬಿಡುಗಡೆಯ ಸಂಕೇತವಾಗಿಯೂ ನೋಡಲಾಗುತ್ತದೆ. ಹೀಗೆ ಈ ಕೆಳಗಿನಂತೆ ಕುಟುಂಬದ ಒಳಗಿನ ನಿಯಂತ್ರಣದ ನೆಲೆಗಳನ್ನು ಗುರುತಿಸುವ ನೆಲೆಗಳು ಈ ಕೆಳಗಿನಂತಿವೆ.

ಆಶಾದೇವಿಯವರು ಕುಟುಂಬದ ಒಳಗಿನ ಮಹಿಳೆಯ ಸ್ಥಾನಮಾನಗಳನ್ನು, ಸ್ವಾತಂತ್ರ್ಯವನ್ನು ಕುರಿತು ಚರ್ಚಿಸುತ್ತಾ ಅದಕ್ಕೆ ಪೂರಕವಾಗಿ ಬೇಂದ್ರೆಯವರ 'ಮನದನ್ನೆ' ಪದ್ಯವನ್ನು ಪೂರಕವಾಗಿ ಚರ್ಚೆಗೆ ಒಳಪಡಿಸುತ್ತಾರೆ. ಈ ಮೂಲಕ ಮಹಿಳೆ ಎದುರಿಸುವ ಸವಾಲುಗಳನ್ನು ಗುರುತಿಸುತ್ತಾರೆ.

ಆಡದಿರು ಎನಗೆ ಇದಿರಾಡದಿರು ಮಲಗಿರುವ ಹಾವನ್ನು ಕೆಣಕಬೇಡ

ಮಾಡದಿರು ಬಾಳನ್ನು ಬೇಳೆಯಂತೆ ಕೂಡಿರಲು ಬಾಳು ಇಡಿಗಾಳಿನಂತೆ ('ಸಖೀಗೀತ')

ಈ ಮೇಲ್ಕಂಡ ಪದ್ಯಕ್ಕೆ ಆಶಾ ಅವರು "ಬೇಂದ್ರೆ ಮನದನ್ನೆ ಎನ್ನುತ್ತಲೆ ಹೆಣ್ಣನ್ನು ಆಳುವುದರಲ್ಲಿ ಗಂಡಿಗಿರುವ ನೆಚ್ಚಿಕೆ, ಮೆಚ್ಚಿಕೆ ಯಾವ ಕಾಲದಲ್ಲೂ ಇದ್ದದ್ದೆ ಎಂದು ಪ್ರತಿಕ್ರಿಯಿಸುತ್ತಾರೆ."೧ ಅಂದರೆ ಹೆಣ್ಣನ್ನು ಕುಟುಂಬದ ವ್ಯಾಪ್ತಿಯಲ್ಲಿ ಬಂಧಿಸಲ್ಪಟ್ಟು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳುವ, ತೆಗೆದುಕೊಳ್ಳುತ್ತಿರುವ ಮಜಲುಗಳನ್ನು ಈ ಒಂದು ಪದ್ಯದ ಮೂಲಕ ಗುರುತಿಸಬಹುದು. ಆದ್ದರಿಂದ ಅವರು ಗಂಡು ಅನಾದಿ ಕಾಲದಿಂದಲೂ ಮಹಿಳೆಯನ್ನು ಎದುರಿಸುತ್ತಲೇ ಆಕೆಗೆ ಹಲವು ಕರಾರುಗಳನ್ನು, ನಿರ್ಬಂಧಗಳನ್ನು ಹಾಕುತ್ತಲೇ ತನ್ನ ಪರಿಧಿಗೆ ವಿಸ್ತರಿಸಿಕೊಳ್ಳುತ್ತಿರುವ ತಂತ್ರಗಳನ್ನು ವಿರೋಧಿಸುತ್ತಾರೆ. ಹೆಣ್ಣನ್ನು ಆಳುವುದರಲ್ಲಿ ಗಂಡಿಗೆ ಸಂತೋಷ ಸಿಗುತ್ತದೆ ಇದರಿಂದ ಎಲ್ಲಾ ಕಾಲದಲ್ಲಿಯೂ ಆಕೆಯನ್ನು ಆಳುತ್ತಾ ಬಂದಿದ್ದಾನೆ ಎಂದು ವಿಶ್ಲೇಷಿಸುತ್ತಾರೆ. ಈ ಮೂಲಕ ಗಂಡಿಗಿರುವ ಸ್ವಾತಂತ್ರ್ಯವನ್ನು, ದರ್ಪವನ್ನು ಗುರುತಿಸುತ್ತಾರೆ. ತನ್ನ ಅಣತಿಯಂತೆ ಹೆಣ್ಣು ಕುಟುಂಬದಲ್ಲಿ ಇರಬೇಕು, ತನಗೆ ಎದುರಾಡಬಾರದು, ಎದುರಾಡಿದರೆ ಮಲಗಿರುವ ಹಾವನ್ನು ಕೆಣಕಿದಂತೆ ಎಂದು ಎಚ್ಚರಿಕೆಯ ಮಾತನ್ನು ಪಿತೃ ಸಂಸ್ಕೃತಿಯು ಸದಾ ಉಪದೇಶಿಸುತ್ತದೆ. ಇಲ್ಲಿ ಗಂಡನಿಗೆ ಹೆಣ್ಣು ಇದಿರಾಡಿದರೆ ಆಕೆಗೆ ದಾಂಪತ್ಯದಲ್ಲಿ ಸ್ಥಾನವಿಲ್ಲ. ಹಾಗೇ ಇದಿರಾಡುವುದು ತಪ್ಪು ಎಂಬುದನ್ನು ಒತ್ತಾಯ ಪೂರ್ವಕವಾಗಿ ಹೇಳಲಾಗಿದೆ. ಈ ಮೂಲಕ ಪುರುಷನ ನಿಲುವನ್ನು ಆಶಾದೇವಿ ಖಂಡಿಸುತ್ತಾ ಕುಟುಂಬದಲ್ಲಿ ಗಂಡಿಗೆ ಅಕಾರಣವಾದ ಅಹಂಕಾರ ಮತ್ತು ಅಧಿಕಾರ ಇರುವುದನ್ನು ಈ ಮೂಲಕ ಬಯಲಿಗೆಳೆಯುತ್ತಾರೆ.

ಗಂಡು ಪರಂಪರೆಯಿಂದಲೂ ತನ್ನ ದರ್ಪ, ಅಧಿಕಾರಗಳನ್ನು ಕೌಟುಂಬಿಕ ವ್ಯಾಪ್ತಿಯೊಳಗೆ ಹೆಣ್ಣಿನ ಮೇಲೆ ಹೇರಿದ್ದಾನೆ. ಆಕೆಯನ್ನು ದೈವತ್ವದ ಆತ್ಯಂತಿಕ ಸ್ಥಾನಗಳಲ್ಲಿ ಇಡುತ್ತಾ ತನ್ನ ಕಾರ್ಯವನ್ನು ಸಾಧಿಸಿಕೊಂಡಿದ್ದಾನೆ. ಈ ಎಲ್ಲಾ ಸ್ಥಾಪಿತ, ಪೂರ್ವ ನಿಯೋಜಿತ ಕರಾರುಗಳನ್ನು ಹಾಕಿದ್ದಾನೆ. ಕೌಟುಂಬಿಕ ಪರಿಧಿಯಿಂದ ಆಕೆಗೆ ಬದುಕೆ ಇಲ್ಲ ಎಂಬುದನ್ನು ನಿರ್ಧರಿಸಿದ್ದಾನೆ. ಈ ಎಲ್ಲಾ ತಂತ್ರ–ಕುತಂತ್ರಗಳನ್ನು ಆಶಾದೇವಿ ಟೀಕಿಸುತ್ತಾರೆ. 'ಮನದನ್ನೆ' ಎಂಬ ಪದ್ಯವು ಮಹಿಳೆಯನ್ನು ಕುರಿತು ನಿಜವಾದ ನಿಲುವಲ್ಲ. ಮನದನ್ನೆ ಎನ್ನುತ್ತಲೇ ಆಕೆಯನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳುವುದು ಗಂಡಿನ

ಉಪಾಯಗಾರಿಕೆ. ಮಹಿಳೆಯನ್ನು ಹೊಗಳುವ ಮೂಲಕ ಪರೋಕ್ಷವಾಗಿ ಯಾಮಾರಿಸುವ ತಂತ್ರ ಇಲ್ಲಿ ಅಡಗಿರುವುದನ್ನು ಆಶಾ ಅವರು ಶೋಧನೆಗೆ ಒಳಪಡಿಸುತ್ತಾರೆ.

ಆಶಾ ಕೌಟುಂಬಿಕ ನಿಯಂತ್ರಣವನ್ನು ಇನ್ನೊಂದು ಮಾದರಿಯಲ್ಲಿ ಗುರುತಿಸುತ್ತಾ, ಮಧ್ಯಮ ವರ್ಗದ ಕುಟುಂಬದ ಸ್ವರೂಪವನ್ನು ಹೇಳುತ್ತಾ ಚರ್ಚೆ ಪ್ರಾರಂಬಿಸುತ್ತಾರೆ. "ಮಧ್ಯಮ ವರ್ಗದ ಎರಡು ತಲೆಮಾರಿನ ಆಚೆಗಿನ ಕುಟುಂಬ ಮನೆಗೆ ಅತಿಥಿಗಳು ಬಂದಿದ್ದಾರೆ. ಆಕೆಯು ಕೆಲಸಕ್ಕೆ ಹೋಗಬೇಕು ಚೂರು ಪಾರು ಕೆಲಸಕ್ಕೆ ಸಹಾಯ ಮಾಡುತ್ತಿದ್ದ ಗಂಡ ಅತಿಥಿಗಳ ಜೊತೆಗೆ ಪಟ್ಟಾಂಗದಲ್ಲಿ ಗರ್ಕ ಹೋಗುವುದರೊಳಗೆ, ಯಾವುದು ಮಾಡಲಿ ಯಾವುದು ಬಿಡಲಿ ಮೈ ಪರಚಿಕೊಳ್ಳುವ ಕೋಪ, ದ್ವಂದ್ವ, ಗೊತ್ತಾದರೂ ಗಂಡನದು ಹೇಗೋ ನಿಭಾಯಿಸತ್ತಾಳೆ. ನಿಭಾಯಿಸಲಿ ಎನ್ನುವ ಸ್ಪಷ್ಟತೆ. ಅವಳು ತುಸು ದನಿ ಎತ್ತಿರಿಸಿದರೆ ಕೆಕ್ಕರಿಸುವ ನೋಟ"[೨] ಈ ಒಂದು ಪ್ರಸಂಗವನ್ನು ವಿವರಿಸುತ್ತಾ, ಈ ಮೇಲ್ಕಂಡ ಸಂದರ್ಭಕ್ಕೆ ತನ್ನ ಪ್ರತಿಕ್ರಿಯೆಯನ್ನು ನೀಡುತ್ತಾರೆ. "ಈ ಸಂದರ್ಭದ ಗಂಡು ಎದುರಿಗೆ ಬಂದರೆ ಬೀಸಿ ಹೊಡೆಯಬೇಕೆನ್ನುವಷ್ಟು ವ್ಯಗ್ರತೆ ಬರುತ್ತದೆ ಎಂದು ಹೇಳುತ್ತಾರೆ."[೩] ಅಂದರೆ ಆಶಾ ಅವರು ಗಂಡನಿಗೆ ಕುಟುಂಬದಲ್ಲಿ ಇರುವ ಯಜಮಾನಿಕೆಯನ್ನು ಈ ಪ್ರಕಾರವಾಗಿ ಗುರುತಿಸುತ್ತಾರೆ. ಮನೆಕೆಲಸ ನಿಭಾಯಿಸಿದರೂ ಆಕೆಯನ್ನು ದೂಷಣೆ ಮಾಡಲಾಗುತ್ತದೆ. ಗಂಡನಿಗೆ ಕುಟುಂಬದಲ್ಲಿ ಸ್ವತಂತ್ರ್ಯ, ಬಿಡುಗಡೆ ಬಾಗಿಲು ಇದೆ. ಆದರೆ ಮಹಿಳೆಗೆ ಕೆಲಸ ಮಾಡಿದರು ಗಂಡನ ದರ್ಪ ಅಧಿಕಾರ ನಿಯಂತ್ರಣ ಕೆಲಸ ಮಾಡುತ್ತದೆ. ಗಂಡಸಿನ ಈ ಕ್ರೌರ್ಯವನ್ನು ತನ್ನ ವ್ಯಗ್ರತೆಯ ಮೂಲಕ ಹೊರಹಾಕುತ್ತಾರೆ.

ಮಹಿಳೆಯು ಕೆಲಸಕ್ಕೆ ಹೋದರು ಸರಿಯೇ, ಕುಟುಂಬದಲ್ಲಿ ಆಕೆಯ ಸ್ಥಾನ ಬದಲಾಗಿಲ್ಲ. ಆಕೆಯ ಕೌಟುಂಬಿಕ ಕೆಲಸಗಳು, ನಿರ್ಬಂಧಗಳು ಕಟ್ಟಿಟ್ಟ ಬುತ್ತಿ, ಮಧ್ಯಮ ವರ್ಗದ ಮಹಿಳೆಗೆ ತನ್ನ ಗಂಡ ಹೇಳಿದಂತೆ ನಡೆಯದಿದ್ದರೆ ಈ ಸಮಾಜದಲ್ಲಿ ಅಸ್ತಿತ್ವವೇ ಇಲ್ಲ. ಮಹಿಳೆಗೆ ಈ ಎಲ್ಲಾ ಬಂಧನಗಳನ್ನು ಮೀರಿ ಬರಲಾಗಿಲ್ಲ. ಏಕೆಂದರೆ ಹಲವಾರು ಸ್ಥಾಪಿತ ನಿರ್ಬಂಧಗಳನ್ನು ಮೊದಲಿನಿಂದಲೂ ಹೇರಲಾಗಿದೆ. ಆಕೆಯು ಕುಟುಂಬವನ್ನು ಬಿಟ್ಟು ಹೊರ ಬಂದರೆ ಹಲವಾರು ಅಪವಾದಗಳಿಗೆ ಎಡೆಯಾಗುತ್ತಾಳೆ. ಕುಟುಂಬವನ್ನು ನಿರ್ಬಂಧಿಸಿ ಹೊರ ಬಂದ ಮಹಿಳೆಗೆ ಅಸ್ತಿತ್ವವೇ ಇಲ್ಲ ಎನ್ನುವಷ್ಟು ಜಾಗವನ್ನು ಪುರುಷ ಸಮಾಜ ನಿರ್ಮಿಸಿಬಿಟ್ಟಿದೆ. ಈ ಮೂಲಕ ಸಂಸಾರದ ಬಗೆಗಿನ ಬದ್ಧತೆಯ ಪ್ರಶ್ನೆಯನ್ನು ಇಂದು ವ್ಯಾಪಕವಾದ ನೆಲೆಯಲ್ಲಿ ಚರ್ಚಿಸುತ್ತಾ ಇದ್ದಾರೆ. ಅಂದರೆ ಪುರುಷ ಪ್ರಧಾನ ಸಮಾಜವು ಮಹಿಳೆಯು ಕುಟುಂಬದಲ್ಲಿ ಇರಬೇಕಾದ ಮೌಲ್ಯಗಳ ಬದ್ಧತೆಯನ್ನು ಚಾಲ್ತಿಗೆ ತಂದಿದೆ. ಹೀಗೆಯೇ ಇರಬೇಕು ಎಂದು ನಿರ್ದೇಶಿಸುತ್ತದೆ. ಆದರೆ ಕುಟುಂಬದಲ್ಲಿ ಗಂಡು ಹೀಗೆ ಇರಬೇಕು ಎಂಬ ಯಾವ ಕರಾರುಗಳು ಹಕ್ಕೊತ್ತಾಯಗಳು ಇದುವರೆಗೂ ಇಲ್ಲ. ಕೇವಲ ಹೆಣ್ಣಿಗೆ ಮಾತ್ರ ಎಲ್ಲಾ ಕಾಯ್ದೆ ಕರಾರುಗಳನ್ನು, ನೈತಿಕ ಮೌಲ್ಯಗಳ ನೆಲೆಯಲ್ಲಿ ಹೊರಿಸಲಾಗಿದೆ. ಆದ್ದರಿಂದ ಆಶಾ ಅವರು ಕುಟುಂಬದಲ್ಲಿ ಕೇವಲ ಹೆಣ್ಣಿಗಿರುವ ಈ ಬದ್ಧತೆಗಳನ್ನು ವಿರೋಧಿಸುತ್ತಾ ಇದ್ದಾರೆ. ಈ ಬದ್ಧತೆಯ ಮೌಲ್ಯ ಎನ್ನುವುದು ಮನುಷ್ಯನಿಗೆ ಅಂದರೆ ಗಂಡು ಹೆಣ್ಣಿಗೂ ಇಬ್ಬರಿಗೂ ಸಮಾನವಾಗಿ ಇರಬೇಕು, ಯಾವುದು ಮನುಷ್ಯನಿಗೆ ಸಮಾನವಾದ ನೆಲೆಯಲ್ಲಿ ಇಲ್ಲವೋ ನಾವು ಅದನ್ನು ಮೌಲ್ಯ ಎಂದು ಒಪ್ಪಬೇಕಾಗಿಲ್ಲ ಎಂಬ ಸಮಾನ ನೆಲೆಯ ಚಿಂತನೆಯನ್ನು ಆಶಾದೇವಿಯವರು ಮಾಡುತ್ತಾರೆ. ಅಂದರೆ ಕುಟುಂಬದಲ್ಲಿ ಗಂಡು ಹೆಣ್ಣಿಗೆ, ಹೆಣ್ಣು ಗಂಡಿಗೆ ಇಬ್ಬರು ಬದ್ಧತೆಯಿಂದ ಇರಬೇಕು ಎಂಬುದನ್ನು ಈ ಮೂಲಕ ಹೇಳುತ್ತಾರೆ. ಹೀಗಾಗಿ

ಮಹಿಳೆಯ ಅಧೀನ ಪರಿಸ್ಥಿತಿಯನ್ನು ಬೇಂದ್ರೆಯವರ ಪದ್ಯದ ಚರ್ಚೆಯ ಮೂಲಕ ವಿರೋಧಿಸುತ್ತಾರೆ. ಮಹಿಳೆಯ ಬಗೆಗೆ ಬೇಂದ್ರೆಯವರು ಹೀಗೆ ಹೇಳುತ್ತಿದ್ದಾರೆ ಎಂದರೆ ಅದರರ್ಥ ಬೇಂದ್ರೆಯವರಿಗೆ ಮಹಿಳೆಯರ ಬಗೆಗೆ ಗೌರವ ಇಲ್ಲ ಎಂದು ಅಭಿಪ್ರಾಯವಲ್ಲ. ಬದಲಿಗೆ ಹೆಣ್ಣು ಮಕ್ಕಳನ್ನು ನಾವು ನೋಡಬೇಕಾಗಿರುವುದೇ ಹೀಗೆ ಎಂಬುದು ಪಿತೃ ಸಮಾಜ ಮೊದಲಿನಿಂದಲೂ ಈ ಚಿಂತನೆಯನ್ನು ಗಂಡಸರ ತಲೆಯಲ್ಲಿ ವ್ಯವಸ್ಥಿತವಾಗಿ ರೂಪಿಸುತ್ತ ಬಂದಿದೆ ಎನ್ನುವುದನ್ನು ಆಶಾ ಅವರು ಗುರುತಿಸುತ್ತಾರೆ.

'ಪಿತೃಸಂಸ್ಕೃತಿಯ ಸ್ವಯಂ ದತ್ತ ಧಿಮಾಕು ಧಿಕ್ಕರಿಸುತ್ತಾ' ಎಂಬ ಲೇಖನದ ಮೂಲಕ ಖ್ಯಾತ ಲೇಖಕಿ ಚಿತ್ರಾ ಮುದ್ಗಲ್ ಬರೆದ 'ಪ್ರೇತ ಯೋನಿ' ಕಥೆಯ ಮೂಲಕ ಕುಟುಂಬದಲ್ಲಿ ಮಹಿಳೆಯನ್ನು ಕುರಿತ ಸ್ಥಾನ ಮಾನಗಳನ್ನು ಗುರುತಿಸುತ್ತಾರೆ. ಅತ್ಯಾಚಾರಕ್ಕೊಳಗಾದ ಒಬ್ಬ ಯುವತಿಯನ್ನು ಕುಟುಂಬವು ಯಾವ ರೀತಿ ನೋಡುತ್ತದೆ. ಆ ಮೂಲಕ ಯಾವ ರೀತಿ ಶೋಷಣೆಗೆ ಒಳಪಡಿಸುತ್ತದೆ ಎಂಬುದನ್ನು ಹೇಳುತ್ತಾ, ಸಮಾಜದಲ್ಲಿ ಹೆಣ್ಣಿನ ಮೇಲಾದ ದೌರ್ಜನ್ಯವನ್ನು ಕುಟುಂಬವು ಮುಂದುವರೆಸುತ್ತದೆ ಎಂಬುದನ್ನು ಆಶಾದೇವಿ ಚರ್ಚೆಗೆ ಒಳಪಡಿಸುತ್ತಾರೆ. ಪ್ರಸ್ತುತ ಸಂದರ್ಭಗಳಲ್ಲಿ ನೋಡಿದರೆ ಅತ್ಯಾಚಾರಕ್ಕೊಳಗಾದ ಮಹಿಳೆಯನ್ನು ತಂದೆ ತಾಯಿಗಳೇ ಕೀಳಾಗಿ ನೋಡುತ್ತಾರೆ. ಮನೆಯಲ್ಲಿ ಕೂಡಿ ಹಾಕಿ ಹಿಂಸೆಗೆ ಗುರಿಪಡಿಸುತ್ತಾರೆ. ಅದೇ ರೀತಿ 'ಅನಿತಾ' ಎಂಬ ಮಹಿಳೆಯ ಮೇಲೆ ಪುರುಷ ಮಾಡಿದ ಅತ್ಯಾಚಾರಕ್ಕಿಂತ ಕುಟುಂಬದ ಸದಸ್ಯರು ಅವಳನ್ನು ಹಿಂಸಿಸುತ್ತಾ, ಈ ಅತ್ಯಾಚಾರಕ್ಕೆ ಅವಳೇ ಹೊಣೆ ಎನ್ನುವ ಮಾದರಿಯಲ್ಲಿ ಅಪರಾಧಿಯಾಗಿಸುತ್ತಾ, ಇನ್ನೊಂದು ರೀತಿಯಲ್ಲಿ ಮಾನಸಿಕವಾಗಿ ಅತ್ಯಾಚಾರ ಮಾಡುತ್ತಾರೆ. ಈ ಕತೆಯನ್ನು ಚರ್ಚಿಸುತ್ತಾ ಎಸ್.ಎಲ್.ಭೈರಪ್ಪನವರು 'ಯಾನ' ಕಾದಂಬರಿಯಲ್ಲಿ "ಹೆಣ್ಣು ಅತ್ಯಾಚಾರವನ್ನು ಸುಖಿಸುತ್ತಾಳೆ"[೪] ಎಂಬ ಹೇಳಿಕೆಯನ್ನು ವಿರೋಧಿಸುತ್ತಾರೆ. ಈ ಮೂಲಕ ಅತ್ಯಾಚಾರವನ್ನು ಕುರಿತ ಪುರುಷ ಗ್ರಹಿಕೆಯು ಹಿಂದಿಗೂ ಬದಲಾಗಿಲ್ಲ ಎಂಬುದನ್ನು ಗುರುತಿಸುತ್ತಾ ವ್ಯಾಗ್ರವಾಗಿ ಖಂಡಿಸುತ್ತಾರೆ. ಪಿತೃ ಪ್ರಧಾನ ಸಮಾಜದ ವಕ್ತಾರ ವಹಿಸಿರುವ ಈ ಲೇಖಕರ ಈ ಮಾತು ಮಹಿಳೆಯನ್ನು ಬರವಣಿಗೆಯು ಸೃಜನಶೀಲತೆಯ ನೆಲೆಯಲ್ಲಿ ಪರೋಕ್ಷವಾಗಿ ಮುಜುಗರಕ್ಕೀಡು ಮಾಡಿದೆ. ಅಂದರೆ ಹೆಣ್ಣು ಅತ್ಯಾಚಾರವನ್ನು ಸುಖಿಸುತ್ತಾಳೆ ಎನ್ನುವ ಮೂಲಕ ಮಹಿಳೆಯ ವ್ಯಕ್ತಿತ್ವಕ್ಕೆ ಧಕ್ಕೆ ತರುವ ಉದ್ದೇಶ ಇದಾಗಿದೆ. ಇದು ಪಿತೃ ಸಂಸ್ಕೃತಿಯ ನೇರ ದೌರ್ಜನ್ಯವನ್ನು ತೋರಿಸುತ್ತದೆ. ಹೀಗೆ ಪುರುಷ ಲೇಖಕರು ಇಂದು ಮಹಿಳೆಯ ವ್ಯಕ್ತಿತ್ವವನ್ನು ಯಾವ ರೀತಿ ತಮ್ಮ ಬರವಣಿಗೆಯ ಮೂಲಕ ಪ್ರಸ್ತುತದಲ್ಲಿಯೂ ಹೇಗೆ ಅವಮಾನ, ಮುಜುಗರಕ್ಕೆ ಈಡಾಗುವಂತೆ ಮಾಡಿದ್ದಾರೆ ಎಂಬುದನ್ನು ನೋಡಬಹುದು. ಈ ಎಲ್ಲವನ್ನು ಆಶಾ ತಾಳ್ಮೆಯಿಂದ ಗುರುತಿಸುತ್ತಿದ್ದಾರೆ ಮತ್ತು ಆ ಮೂಲಕ ಖಂಡಿಸುತ್ತಾರೆ.

ಭೈರಪ್ಪನವರ ಮಹಿಳೆಯನ್ನು ಕುರಿತ ಈ ಗ್ರಹಿಕೆಯನ್ನು "ಹೆಣ್ಣನ್ನು ಕುರಿತ ಅವರ ಗ್ರಹಿಕೆ ಅವರ ಬರವಣಿಗೆಯ ಆರಂಭದಿಂದ ಇಂದಿನ ತನಕವೂ ನಿರಂತರವಾಗಿ ಒಂದೇ ಆಗಿದೆ. ಅದು ಅವಳನ್ನು ಅವಳ ನಿಜದಲ್ಲಿ ಘನತೆಯಲ್ಲಿ ಗುರುತಿಸುವುದರಲ್ಲೂ ಅಷ್ಟೇ ನಿರಂತರವಾಗಿ ಸೋತಿದೆ ಎಂದು ಆಶಾ ಅವರು ಹೇಳುತ್ತಾರೆ."[೫] ಅಂದರೆ ಪುರುಷರ ಬರವಣಿಗೆಯು ಹೀಗೆ ಮಹಿಳೆಯ ವ್ಯಕ್ತಿತ್ವವನ್ನು, ಅಸ್ತಿತ್ವವನ್ನು, ಘನತೆಯನ್ನು, ಮರ್ಯಾದೆಯನ್ನು ಹಾಳುಮಾಡುವುದರಲ್ಲಿ ಕಾರ್ಯನಿರತವಾಗಿದೆ

ಎಂಬುದನ್ನು ಆಶಾ ಅವರು ಗುರುತಿಸುತ್ತಾರೆ. ಪುರುಷರ ಬರವಣಿಗೆಯು ಮಹಿಳೆಯನ್ನು ನಿಜದಲ್ಲಿ ಚಿತ್ರಿಸುವುದರಲ್ಲಿ ಆಸಕ್ತಿ ವಹಿಸಿಲ್ಲ. ಆಕೆಯನ್ನು ಮುಜುಗರಕ್ಕೆ ಈಡು ಮಾಡಿ ಆಕೆಯ ಅಸ್ತಿತ್ವವನ್ನು ಕಿತ್ತುಕೊಳ್ಳುವ ಹುನ್ನಾರ ಈ ಬರವಣಿಗೆಯ ಹಿಂದೆ ಕೆಲಸ ಮಾಡಿದೆ. ಹೀಗೆ ಪುರುಷರ ಬರವಣಿಗೆಗಳು ಮಹಿಳೆಯನ್ನು ಸಾಮಾಜಿಕವಾಗಿ ಮುಜುಗರಕ್ಕೆ ಈಡು ಮಾಡಿವೆ. ಇದರಿಂದ ಆಶಾ ಅವರು ಮಹಿಳೆಯನ್ನು ಕೆಳಮಟ್ಟದಲ್ಲಿ ಚಿತ್ರಿಸುವ ಅವರ ವ್ಯಕ್ತಿತ್ವಕ್ಕೆ ಕುಂದು ತರುವ ಪುರುಷರ ಬರವಣಿಗೆಯನ್ನು ವಿರೋಧಿಸುತ್ತಾರೆ. ಎಲ್ಲೆಲ್ಲಿ ಮಹಿಳೆಯ ಘನತೆಯನ್ನು ಹಾಳು ಮಾಡುವ ಬರವಣಿಗೆಗಳು ಇವೆಯೋ ಅವೆಲ್ಲದರ ಅದರ ಹಿಂದೆ ಅಡಗಿರುವ ಪುರುಷ ಕೇಂದ್ರಿತ ನಿಲುವುಗಳನ್ನು ಗುರುತಿಸುತ್ತಾರೆ. ಆದರೆ ಆಶಾ ಅವರು ಪುರುಷ ಬರಹಗಾರರನ್ನು ವಿರೋಧಿಸುತ್ತಿಲ್ಲ. ಮಹಿಳೆಯನ್ನು ಕುರಿತ ಪುರುಷನ ಅಸಮಾನತೆಯ ಬರವಣಿಗೆಯನ್ನು ಖಂಡಿಸುತ್ತಾರೆ.

ಇಂದಿನ ಎಷ್ಟೋ ಕುಟುಂಬಗಳಲ್ಲಿ 'ಅನಿತಾ'ಳಂತೆ ಮಹಿಳೆಯನ್ನು ನೋಡುವ ದೃಷ್ಟಿಕೋನ ಇಂದಿಗೂ ಹಾಗೆಯೇ ಇದೆ. ಇಂದು ಪ್ರಸ್ತುತದಲ್ಲಿ ಅತ್ಯಾಚಾರಕ್ಕೊಳಗಾದ ಮಹಿಳೆಯ ಸ್ಥಿತಿಯನ್ನು ಹೇಳಲು ಆಶಾ ಅವರು ಈ ಕತೆಯನ್ನು ರೂಪಕದಂತೆ ಬಳಸಿಕೊಂಡಿದ್ದಾರೆ. ಇದರಿಂದ ಮಹಿಳೆಯನ್ನು ಕುರಿತ ಕೌಟುಂಬಿಕ ನಿಲುವನ್ನು, ಸಾಮಾಜಿಕ ನಿಲುವನ್ನು ವಿರೋಧಿಸುತ್ತಾರೆ. ಅತ್ಯಾಚಾರವಾದ ಮಹಿಳೆಯನ್ನು ಕುರಿತು "ಅತ್ಯಾಚಾರದಲ್ಲಿನ ಅವಳ ಅನುಭವವನ್ನು, ಅದನ್ನು ಎದುರಿಸುವ ಬಗೆಯನ್ನು ಹೆಣ್ಣಿಗೆ ಯಾರು ಕಲಿಸಿಕೊಡಬೇಕಿಲ್ಲ. ಆದರೆ ಪಿತೃ ಸಂಸ್ಕೃತಿ ತನ್ನ ಸ್ವಯಂದತ್ತ ಧಿಮಾಕಿನಲ್ಲಿ ತನ್ನ ವಿಕೃತ ಅಪೇಕ್ಷೆಗೆ ತಕ್ಕಂತೆ ವ್ಯಾಖ್ಯಾನಿಸಿ ಸಂಭ್ರಮ ಪಡುತ್ತದೆ ಎಂದು ಅವರು ಹೇಳುತ್ತಾರೆ."[೬] ಇವರ ಪ್ರಕಾರ ಅತ್ಯಾಚಾರವಾದ ಮಹಿಳೆಗೆ ಅದರಾಚೆಗೂ ಬದುಕು ಇದೆ. ಮಹಿಳೆಗೆ ಅತ್ಯಾಚಾರವಾದ ಆಘಾತವನ್ನು ತಡೆದುಕೊಳ್ಳುವ ಶಕ್ತಿ ಇರುವಂತೆಯೇ, ಅನಂತರವು ತನ್ನ ಬದುಕನ್ನು ಕಟ್ಟಿಕೊಳ್ಳುವ, ರೂಪಿಸಿಕೊಳ್ಳುವ ಶಕ್ತಿ ಇದೆ. ಈ ಮೂಲಕ ಮಹಿಳೆಗೆ ಇರುವ ಮಾನಸಿಕ ಸ್ಥೈರ್ಯವನ್ನು ಗುರುತಿಸುತ್ತಾರೆ. ಪಿತೃ ಸಂಸ್ಕೃತಿಯ ಮಹಿಳೆಯನ್ನು ಕುರಿತ ಘೋಷಿತ ಆಶಯವನ್ನು ಅವರು ಪ್ರತಿರೋಧಿಸುತ್ತಾರೆ.ಪಿತೃ ಸಂಸ್ಕೃತಿಯು ತನಗೆ ಲಭಿಸಿರುವ ಸ್ವಯಂದತ್ತ ಅಧಿಕಾರದಿಂದ ಮಹಿಳೆಯನ್ನು, ಆಕೆಯ ಚಹರೆಯನ್ನು ತನಗನಿಸಿದ ನೆಲೆಯಲ್ಲಿ ಕಟ್ಟಿಕೊಡುತ್ತಿದೆ. ಪುರುಷ ಸಂಸ್ಕೃತಿಯ ಈ ನಿಲುವನ್ನು ಆಶಾ ಈ ಮೇಲಿನ ಹೇಳಿಕೆಯ ಮೂಲಕ ವಿರೋಧಿಸುತ್ತಾರೆ. ಇವರು ಮಹಿಳೆಯ ಮರೆಮಾಚಿದ ವ್ಯಕ್ತಿತ್ವದ ಶೋಧ ಮಾಡುತ್ತಾರೆ. ಈ ಮೂಲಕ ಪುರುಷ ಸಮಾಜಕ್ಕೆ ಇರುವ ಸ್ವಯಂದತ್ತ ಅಧಿಕಾರವನ್ನು, ಧಿಮಾಕನ್ನು, ಧಿಕ್ಕರಿಸುವುದು ಆಶಾದೇವಿಯವರ ಉದ್ದೇಶವಾಗಿದೆ.

ಅತ್ಯಾಚಾರ ನಡೆಸಿದ ಗಂಡಸಿನ ವರ್ತನೆಯನ್ನು ತಿಳಿಸಲು ಕಮಲಾದಾಸ್ ಹೇಳಿಕೆಯನ್ನು ಬಳಸುತ್ತಾರೆ. "ಹುಚ್ಚು ನಾಯಿ ಕಚ್ಚಿದರೆ ಮನೆಗೆ ಹೋಗಿ ಡೆಟಾಲ್ ಹಚ್ಚಿ ತೊಳೆದು ಥೂ ಎಂದು ಉಗಿದು ಬಿಡುತ್ತೇವಲ್ಲ?"[೭] ಈ ಹೇಳಿಕೆಗೆ ಆಶಾ ಅವರು ಪ್ರತಿಕ್ರಿಯಿಸುತ್ತಾ ಗಂಡಸಿನ ಕ್ರೌರ್ಯವನ್ನು ಗುರುತಿಸುತ್ತಾರೆ. ಅತ್ಯಾಚಾರ ಎಸಗಿದ ಮನುಷ್ಯನನ್ನು ಸಾಮಾಜಿಕವಾಗಿ ಕೆಳಸ್ಥಾನದಲ್ಲಿ ಇಡಬೇಕು. ಆತನಿಗೆ ಯಾವ ಮರ್ಯಾದೆ ಸ್ಥಾನ ಮಾನಗಳು ಲಭಿಸಬಾರದು ಎಂಬುದು ಆಶಾ ಅವರು ಕಮಲಾದಾಸ್ ಅವರ ಹೇಳಿಕೆಯನ್ನು ಒಪ್ಪುತ್ತಾರೆ. ಹೀಗೆ ಮಾಡುವುದು ಆಶಾ ಅವರ ಉದ್ದೇಶ ಕೂಡ ಆಗಿದೆ. ಅನಂತರ ಆಶಾ ಅವರು ಮುಂದುವರೆದು "ಅತ್ಯಾಚಾರ ಸೇರಿದಂತೆ ಎಲ್ಲ ಬಗೆಯ ದೌರ್ಜನ್ಯ

ಮಾಡುವವರ ದೌರ್ಬಲ್ಯವನ್ನು ತೋರಿಸುತ್ತದೆ ಎಂದು ಹೇಳುತ್ತಾರೆ."[೮] ಈ ಹೇಳಿಕೆಯನ್ನು ಗಮನಿಸಿದರೆ ಅತ್ಯಾಚಾರ ಎಂಬ ಅಸ್ತ್ರವನ್ನು ಪುರುಷ ಮಹಿಳೆಯನ್ನು ನೇರವಾಗಿ ಎದುರಿಸಲಾದೆ ಪರ್ಯಾಯ ತಂತ್ರದ ಮಾರ್ಗದ ಭಾಗವಾಗಿ ರೂಪಿಸಿಕೊಂಡಿದ್ದಾನೆ. ಮಹಿಳೆಯನ್ನು ನಿಯಂತ್ರಿಸಲು ಲೈಂಗಿಕತೆಯೆ ಮುಖ್ಯ ಸಾಧನ ಎಂಬುದು ಆತನ ಅಪೇಕ್ಷೆ. ಈ ಮೂಲಕ ಲೈಂಗಿಕವಾಗಿ ಆಕೆಯನ್ನು ನಿಯಂತ್ರಿಸುವ ಸಾಮಾಜಿಕವಾಗಿ ಅವಮಾನಿಸುವ ಉದ್ದೇಶ ಹೊಂದಿದೆ. ಪುರುಷ ಸಮಾಜಕ್ಕೆ ಮಹಿಳೆಯನ್ನು ನೇರವಾಗಿ ಎದುರಿಸಲು ಸಾಧ್ಯವಿಲ್ಲ. ಆದ್ದರಿಂದ ಪರ್ಯಾಯಗಳನ್ನು ಆತ ಸೃಷ್ಟಿಸಿಕೊಂಡಿದ್ದಾನೆ. ಪುರುಷನು ಮಹಿಳೆಯನ್ನು ನಿಯಂತ್ರಿಸಲು ಕುತಂತ್ರದಿಂದ ತನ್ನ ಅಣತಿಗೆ ತೆಗೆದುಕೊಳ್ಳಲು ಪರ್ಯಾಯಗಳನ್ನು ಸೃಷ್ಟಿಸಿಕೊಳ್ಳುತ್ತಿದ್ದಾನೆ. ಇದು ಆತನ ದೌರ್ಬಲ್ಯವಾಗಿದೆ ಎಂಬ ವಾದವನ್ನು ಆಶಾ ಹುಟ್ಟಿಹಾಕುತ್ತಾರೆ. ಹೀಗೆ ಪುರುಷನ ದೌರ್ಬಲ್ಯವನ್ನು ಗುರುತಿಸುವ ಮೂಲಕ ಮಹಿಳೆಗಿರುವ ನೇರವಾದ ಹೋರಾಟದ ನೆಲೆಯನ್ನು ಶೋಧಿಸುತ್ತಾರೆ.

ಈ ಎಲ್ಲವುಗಳ ಮೂಲಕ ಆಶಾದೇವಿ ಅವರು ಮಹಿಳೆಗಿರುವ ಸಾಮಾಜಿಕ ಸ್ಥಾನಮಾನದ ಬಗೆಗಿನ ಪ್ರಶ್ನೆಗಳನ್ನು ಅವಲೋಕನ ಮಾಡುತ್ತಿದ್ದಾರೆ. ಇವರು ಸಮಾಜದಲ್ಲಿರುವ ಮಹಿಳೆಯ ಸವಾಲುಗಳನ್ನು, ಆಕೆಯ ಮೇಲೆ ನಡೆಯುತ್ತಿರುವ ಹಿಂಸೆಗಳ ಸ್ವರೂಪವನ್ನು ಸಾಹಿತ್ಯ ಪಠ್ಯಗಳ ಮೂಲಕ ಪ್ರಚುರ ಪಡಿಸುತ್ತಿದ್ದರೂ, ವಾಸ್ತವದಲ್ಲಿ ಮಹಿಳೆಯ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ ಎಂಬುದನ್ನು ತಿಳಿಸುತ್ತಾರೆ. ಇವೆಲ್ಲವನ್ನು ಚಿಂತಕಿಯು ಹಲವಾರು ಸಾಕ್ಷಿ ಪುರಾವೆಗಳ ಮೂಲಕ ಸಾಬೀತುಪಡಿಸುತ್ತಾರೆ. ಈ ಅತ್ಯಾಚಾರವನ್ನು ಕುರಿತಂತೆ ಆಶಾ ಅವರು ಸ್ತ್ರೀವಾದಿ ನೆಲೆಯಲ್ಲಿ ಮನುಷ್ಯ ಘನತೆಯ ನೆಲೆಯಲ್ಲಿ ಆಳವಾದ ಚರ್ಚೆಗೆ ಒಳಪಡಿಸುತ್ತಾರೆ. ಅವರ ಚಿಂತನೆಯ ಹಿಂದಿರುವ ಉದ್ದೇಶದ ಪ್ರಕಾರ, ಈ ಅತ್ಯಾಚಾರದ ಪ್ರಶ್ನೆ ಉದ್ಭವಿಸುತ್ತಿರುವುದೇ ಹೆಣ್ಣನ್ನು ಕೇವಲ ದೇಹ ಎಂದು ನೋಡುತ್ತಿರುವುದರಿಂದ. ಮಗು ಆಗಿರಬಹುದು, ಎಂಬತ್ತು ವರ್ಷದ ಮುದುಕಿ ಆಗಿರಬಹುದು, ಒಟ್ಟಾರೆ ಹೆಣ್ಣು ಅನ್ನುವುದನ್ನು ಒಂದು ವ್ಯಕ್ತಿತ್ವವಾಗಿ ನೋಡಲು ಸಾಧ್ಯ ಆಗದೆ ಇರುವ ಕಾರಣಕ್ಕಾಗಿ. ಹೆಣ್ಣು ಅಂದರೆ ಕೇವಲ ದೇಹ ಅಷ್ಟೇ. ನಡುರಾತ್ರಿ ಹೆಣ್ಣು ಓಡಾಡುವುದರ ಬಗೆಗೆ ಗಾಂಧೀಜಿ ಮಾತನಾಡುತ್ತಾರೆ. ಆದರೆ ಇಂದು ನಡು ಹಗಲಿನಲ್ಲಿ ಓಡಾಡಲು ಸಾಧ್ಯ ಆಗುತ್ತಿಲ್ಲ ಎನ್ನುವುದು ಇಂದು ಮಹಿಳೆಯ ಸವಾಲುಗಳು ಎಷ್ಟು ತೀವ್ರ ಪ್ರಮಾಣದಲ್ಲಿ ಇವೆ ಎಂಬುದನ್ನು ಸೂಚಿಸುತ್ತದೆ. ಈ ಎಲ್ಲದಕ್ಕೂ ಕಾರಣಗಳು ಹೆಣ್ಣು ಮಕ್ಕಳಲ್ಲಿ ಇದೆ ಎಂಬುವುದು ಅಲ್ಲ. ಹೆಣ್ಣು ಮಕ್ಕಳನ್ನು ದೇಹಮಾತ್ರವಾಗಿ ನೋಡುವ ದೃಷ್ಟಿಕೋನದಲ್ಲಿ ಈ ಸಮಸ್ಯೆ ಅಡಗಿದೆ. ಅದು ದಿನೇದಿನೇ ಈ ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ ಹಲವಾರು ಮಜಲುಗಳಲ್ಲಿ ಕಾಣಿಸಿಕೊಳ್ಳುತ್ತಲೇ ಇರುತ್ತದೆ. ನಾವು ಹೆಣ್ಣು ಮಕ್ಕಳನ್ನು ನೋಡಬೇಕಾಗಿರುವುದೇ ಹೀಗೆ. ಅವರು ಇರಬೇಕಾಗಿರುವುದೇ ಹೀಗೆ ಎಂಬುದಾಗಿ ನಿರ್ಧರಿಸಿಬಿಡಲಾಗಿದೆ. ಈ ಎಲ್ಲಾ ಪುರುಷ ಪ್ರಧಾನ ಸಮಾಜದ ಒಳ ವಿನ್ಯಾಸಗಳ ಹುನ್ನಾರಗಳನ್ನು ಆಶಾ ಅವರು ಗುರುತಿಸುತ್ತಾರೆ.

ಪುರುಷನಿಗೆ ನೇರವಾಗಿ ಹೋರಾಟ ಮಾಡುವ ಶಕ್ತಿ, ಮಹಿಳೆಯನ್ನು ಎದುರಿಸುವ ಶಕ್ತಿ, ಇಲ್ಲದಿರುವುದರಿಂದಲೇ ತನ್ನ ದೌರ್ಬಲ್ಯದಿಂದ ಹಲವಾರು ತಂತ್ರಗಳನ್ನು ರೂಪಿಸಿಕೊಂಡಿದ್ದಾನೆ. ಕುಟುಂಬದಲ್ಲಿ ಮಹಿಳೆಯ ಮೇಲಿನ ನಿಯಂತ್ರಣ ಹಲವಾರು ಸ್ವರೂಪಗಳಲ್ಲಿ ಇದೆ. ಈ ನಿಯಂತ್ರಣವನ್ನು ಶೋಧಿಸುವುದು ಮತ್ತು ಪ್ರತಿಭಟನೆ ವ್ಯಕ್ತಪಡಿಸುವುದು ಆಶಾ ಅವರ ಚಿಂತನೆಯ

ಮುಖ್ಯ ಗುರಿಯಾಗಿದೆ. 'ಬಿಡುಗಡೆಯೆಂಬುದುಂಟೇ ಹೇಳಾ ಕೆಳದಿ' ಎಂಬ ಲೇಖನದಲ್ಲಿ ವೀಣಾಶಾಂತೇಶ್ವರ ಅವರ 'ಬಿಡುಗಡೆ' ಕಥೆಯನ್ನು ಚರ್ಚೆಗೆ ಒಳಪಡಿಸುತ್ತಾರೆ. ಕತೆಯ ಹೆಸರೆ ಸೂಚಿಸುವಂತೆ ಕತೆಯ ನಾಯಕಿ ಸರೋಜ ದಾಂಪತ್ಯ ಜೀವನದಿಂದ ಮುಕ್ತಿ ಪಡೆಯಲು ಪರೋಕ್ಷವಾಗಿ ಹವಣಿಸುತ್ತಿದ್ದಾಳೆ. ಇದಕ್ಕೆ ಮುಖ್ಯ ಕಾರಣ ಗಂಡ ಮಾಡುವ ದಬ್ಬಾಳಿಕೆ 'ಬಿಡುಗಡೆಯೆಂಬುದುಂಟೇ ಹೇಳಾ ಕೆಳದಿ' ಈ ಶೀರ್ಷಿಕೆಯನ್ನು ನೋಡಿದಾಗ ಅನಾದಿಕಾಲದಿಂದಲೂ ಹೆಣ್ಣನ್ನು ಶೋಷಣೆಗೆ ಒಳಪಡಿಸಿರುವ ಪುರುಷ ಸಮಾಜದಿಂದ ಮಹಿಳೆಗೆ ಬಿಡುಗಡೆ ಇದೆಯೇ ಎಂಬ ಅನುಮಾನವನ್ನು ಆಶಾ ವ್ಯಕ್ತಪಡಿಸುತ್ತಾರೆ.

ಬಿಡುಗಡೆ ಕತೆಯ ನಾಯಕಿ ಆಧುನಿಕ ಶಿಕ್ಷಣ ಪಡೆದು, ಉದ್ಯೋಗ ಪಡೆದುಕೊಂಡು ತನ್ನ ಗಂಡನಿಗೆ ಸರಿಸಮಾನವಾಗಿ ದುಡಿಯುತ್ತಿರುತ್ತಾಳೆ. ಆದರೂ ಕುಟುಂಬದಲ್ಲಿ ಗಂಡ ಆಕೆಯ ಸ್ವಾತಂತ್ರ್ಯವನ್ನು ಕಿತ್ತುಕೊಂಡಿದ್ದಾನೆ. ಎಷ್ಟೋ ಮಹಿಳೆಯರಿಗೆ, ದಾಂಪತ್ಯಕ್ಕೆ ಕಾಲಿಟ್ಟ ಮೇಲೆ ಸ್ವಾತಂತ್ರ್ಯ ಇಲ್ಲದಂತಾಗುತ್ತದೆ. ಎಲ್ಲಾ ಅಧಿಕಾರಗಳು ಗಂಡನ ಹಿಡಿತದಲ್ಲಿರುತ್ತದೆ. ಆತ ಹೇಳಿದಂತೆ ಕೇಳಿದಾಗ ಮಾತ್ರ ಆಕೆಗೆ ಅಸ್ತಿತ್ವ ಇರುತ್ತದೆ. ಗಂಡ ಹೇಳಿದಂತೆ ಹೆಂಡತಿ ನಡೆದುಕೊಳ್ಳಬೇಕು. ಸರಿಸಮಾನವಾಗಿ ದುಡಿದರು ಸಹ ಸಮಾನತೆ ಎಂಬುದನ್ನು ಪರಂಪರೆಯಿಂದಲೂ ಕೊಡಲಾಗಿಲ್ಲ. ಇನ್ನೂ ಮನೆಯ ಕೆಲಸವಲ್ಲದೆ ಹೊರಗಿನ ಕೆಲಸವನ್ನು ಮಾಡುತ್ತಿರುವ ಹಲವಾರು ಮಹಿಳೆಯರು ಪ್ರಸ್ತುತ ಸಮಾಜದಲ್ಲಿ ದೊರೆಯುತ್ತಾರೆ. ದುಡಿದ ಹಣವನ್ನು ತನಗಾಗಿ ಉಪಯೋಗಿಸುವ ಅಧಿಕಾರ ಇರುವುದಿಲ್ಲ. ಆಶಾದೇವಿಯವರು ಹೊರಗಡೆ ದುಡಿಯುತ್ತಿರುವ ಮತ್ತು ಕುಟುಂಬವನ್ನು ಜೊತೆ ಜೊತೆಗೆ ನಿಭಾಯಿಸುತ್ತಿರುವ ಆಧುನಿಕ ಮಹಿಳೆಗೆ ಕುಟುಂಬದಲ್ಲಿ ದೊರೆಯುತ್ತಿರುವ ಸ್ಥಾನ ಮಾನಗಳನ್ನು ಕುರಿತು ಈ ಕತೆಯ ಮೂಲಕ ಚರ್ಚಿಸುತ್ತಾರೆ. ಅಂದರೆ ಮಹಿಳೆಯು ಪಡೆದುಕೊಂಡ ವಿಧ್ಯೆ, ಉದ್ಯೋಗ, ಕೆಲವೊಮ್ಮೆ ಅವರಿಗೆ ಮಾರಕವಾಗಿದೆ ಎಂಬುದು ಆಶಾ ಅವರ ಅಭಿಪ್ರಾಯ. ಬಿಡುವಿಲ್ಲದ ದುಡಿತದಲ್ಲಿ ಅವರಿಗೆ ವಿಶ್ರಾಂತಿ ಎಂಬುದೇ ಇರುವುದಿಲ್ಲ. ಹೀಗೆ ಪುರುಷರು ಯಾವ ಮಾದರಿಯಲ್ಲಿ ಮಹಿಳೆಯನ್ನು ನಿಯಂತ್ರಿಸಬೇಕೋ ಆ ಎಲ್ಲಾ ನಿಯಂತ್ರಣಕ್ಕೆ ಒಳಪಡಿಸಿರುವ ತಂತ್ರಗಳನ್ನು ಈ ಮೂಲಕ ಗುರುತಿಸಬಹುದು.

ಬಿಡುಗಡೆ ಕುರಿತಂತೆ ಆಶಾ ಅವರು "ಆಧುನಿಕತೆಯು ಹೆಣ್ಣಿನ ಬಿಡುಗಡೆಯ ದಾರಿಗಳೆಂದು ಪ್ರತಿಪಾದಿಸಿದೆ ಅದು ನಿಜವೆಂದು ನಂಬಿದ ನೆಚ್ಚಿದ ಹೆಣ್ಣಿಗೆ ಒಲೆ ಬದಲಾದರೂ ಉರಿ ಬದಲಾಗಿದೆಯೇ? ಎಂದು ಹೇಳುತ್ತಾರೆ."[೯] ಬಿಡುಗಡೆಯು ಮಹಿಳೆಗೆ ಯಾವುದೆಲ್ಲದರಿಂದ ಬೇಕು ಎಂಬುದು ಆಶಾ ಅವರ ಪ್ರಶ್ನೆ. ಇಲ್ಲಿ ಆಧುನಿಕತೆಯು ಸಮಾಜಕ್ಕೆ ಕಾಲಿಟ್ಟಾಗ ಉದ್ಯೋಗ, ಶಿಕ್ಷಣ, ಎಲ್ಲಾ ಅವಕಾಶಗಳು ಹೆಣ್ಣಿಗೆ ಮುಕ್ತವಾಗಿ ದೊರೆಯಲ್ಪಟ್ಟವು. ಆದರೆ ಆಧುನಿಕತೆಯಿಂದ ಮಹಿಳೆಯು ತನಗೆ ಬಿಡುಗಡೆ ದೊರೆತಿದೆ ಎಂದು ತಪ್ಪಾಗಿ ತಿಳಿದಿದ್ದಾಳೆ. ಯಾವುದು ಬಿಡುಗಡೆಯ ಮಾರ್ಗ ಎಂದು ಆಧುನಿಕತೆಯನ್ನು ಭಾಪಿಸಲಾಗಿದೆಯೋ ಅದೇ ಮಹಿಳೆಯ ಬಂಧನವೂ ಆಗಿದೆ ಎಂಬುದನ್ನು ಆಶಾ ಈ ಸಂದರ್ಭದ ಮೂಲಕ ಗುರುತಿಸುತ್ತಾರೆ. ಮಹಿಳೆಗೆ ಇಂದಿಗೂ ನಿಜವಾಗಿ ಬಿಡುಗಡೆ ಸಿಕ್ಕಿಲ್ಲ. ಸಿಕ್ಕಿದೆ ಎಂದು ನಂಬಿಸುತ್ತಿರುವ, ನಂಬಿಸಲಾಗುತ್ತಿರುವುದರ ಹಿಂದೆ ಪಿತೃ ಸಂಸ್ಕೃತಿಯ ಕೈವಾಡವಿದೆ. ಮಹಿಳೆಯನ್ನು ಕೆಲಸಕ್ಕೆ ಹೊರಗಡೆ ಕಳಿಸಿ ಮನೆಯ ಒಳಗೆ ಮತ್ತು ಹೊರಗೆ ಎರಡು ಮಾರ್ಗಗಳಲ್ಲಿ ಶೋಷಣೆಗೆ

ಗುರಿಪಡಿಸುವ ಹಿಂದೆ ಆಧುನಿಕತೆಯೇ ಮುಖ್ಯ ಕಾರಣವಾಗಿದೆ. "ಒಲೆ ಬದಲಾದರೂ ಉರಿ ಬದಲಾಗಿದೆಯೇ" ಎಂದು ಹೇಳುವುದು ಇದೇ ಕಾರಣಕ್ಕೆ. ಬಂಧನ ಎನ್ನುವುದು ಆಧುನಿಕತೆ ಬಂದ ನಂತರದಲ್ಲಿ ಸ್ವರೂಪದಲ್ಲಿ ಬದಲಾಗಿದೆಯೇ ಹೊರತು ಮಹಿಳೆಯ ಮೇಲಿನ ನಿಯಂತ್ರಣ, ಶೋಷಣೆ ಬದಲಾಗಿಲ್ಲ. ಈ ಎಲ್ಲದರಿಂದ ಮಹಿಳೆಗೆ ಎಂದಿಗಾದರೂ ಬಿಡುಗಡೆ ಸಾಧ್ಯವಿದೆಯೇ ಎಂದು ಆಶಾ ಸಂಶಯ ಪಡುತ್ತಾರೆ.

ಹೀಗೆ ಪಿತೃ ಸಂಸ್ಕೃತಿ ಮಹಿಳೆಯ ಬಿಡುಗಡೆಯ ಹಾದಿಗಳು ಎಂದು ಯಾವುದೆಲ್ಲವನ್ನು ಕಾಲ ಕಾಲಕ್ಕೆ ತಕ್ಕಂತೆ ರೂಪಿಸುತ್ತಾ ಹೋಗುತ್ತದೆಯೋ ಅದು ಮಹಿಳೆಯನ್ನು ನಿಯಂತ್ರಣದ ಚೌಕಟ್ಟಿಗೆ ಹೆಚ್ಚು ಹೆಚ್ಚು ಭದ್ರವಾಗಿ ಒಳಗೊಳ್ಳುತ್ತಾ ಹೋಗುತ್ತಾಳೆ. ಮಹಿಳೆ ತಾನು ಯಾವುದೆಲ್ಲದರಿಂದ ಇಂದು ಬಿಡುಗಡೆ ಪಡೆಯಬೇಕು ಎಂಬ ದ್ವಂದ್ವದಲೇ ಇದ್ದಾಳೆ. ಆಕೆ ಬಿಡುಗಡೆ ಪಡೆಯಲಾರದಷ್ಟು ಬಂಧನಗಳ ಚೌಕಟ್ಟಿಗೆ ಒಳಪಟ್ಟಿದ್ದಾಳೆ. ಆಕೆ ಬಿಡುಗಡೆ ಪಡೆಯಲು ಅವಣಿಸಿದಂತೆಯೇ, ಅಷ್ಟೇ ಶಕ್ತವಾಗಿ ಪಿತೃಸಂಸ್ಕೃತಿ ಬಂಧಿಸುತ್ತದೆ ಎಂಬುದನ್ನು ಈ ಮೂಲಕ ಆಶಾ ಅವರು ಹೇಳುತ್ತಾರೆ. ಮಹಿಳೆಯ ಮೌನ, ತಾಳ್ಮೆ, ಅನುಸರಣೆಯಿಂದ ಅನೇಕ ಕುಟುಂಬಗಳು ಇಂದು ಅಸ್ತಿತ್ವದಲ್ಲಿರಲು ಕಾರಣವಾಗಿದೆ. ಈ ಕಥೆಯ ನಾಯಕಿ ಸರೋಜಾ ಕೂಡ ಈ ಹೇಳಿಕೆಗೆ ಮಾದರಿಯಾಗಿದ್ದಾಳೆ. ಸರೋಜಾಳಂತೆ ಹಲವಾರು ಹೆಣ್ಣು ಮಕ್ಕಳು ನಮ್ಮ ಸಮಾಜದಲ್ಲಿ ಇದ್ದಾರೆ.

ಒಟ್ಟಾರೆ ಆಶಾ ಅವರು ಮಹಿಳೆಯ ಬಂಧನವನ್ನು ಕುರಿತಂತೆ ಹಲವಾರು ಮೂಲಗಳಿಂದ ವಿಷಯಗಳನ್ನು, ಆಧಾರಗಳನ್ನು ಹೆಕ್ಕಿ ತೆಗೆಯುತ್ತಾರೆ. ಈ ಮೂಲಕ ಮಹಿಳೆಗಿರುವ ಇವತ್ತಿನ ವಾಸ್ತವದಲ್ಲಿನ ಸವಾಲುಗಳನ್ನು ಗುರುತಿಸುತ್ತಾರೆ. ಮಹಿಳೆಯ ಈ ಬಂಧನವನ್ನು ಕುರಿತಂತೆ ಬಂಧನದಿಂದ ಹೊರಬರಲು ಇರುವ ಕಠಿಣ ಪರಿಸ್ಥಿತಿಯನ್ನು, ಅದಕ್ಕಿರುವ ಸವಾಲು ಮತ್ತು ಸಾಧ್ಯತೆಗಳನ್ನು ಚರ್ಚಿಸುತ್ತಾರೆ. ಅಂದರೆ ಮಹಿಳೆಯು ತನಗಿರುವ ಬಂಧನದಿಂದ ಹೊರಬರಲು ಇರುವ ಒಂದು ಚಲನೆಯು ತುಂಬಾ ನಿಧಾನ ಗತಿಯಲ್ಲಿ ಇದೆ. ನಂತರ ಮಹಿಳೆಯು ಹೊರಗಡೆ ಕೆಲಸ ಮಾಡುತ್ತಿದ್ದಾಳೆ ಎನ್ನುವುದು ಹಾಗೂ ದುಡಿಯುವ ಮಹಿಳೆ ಎನ್ನುವುದರಲ್ಲಿಯೇ ತೊಂದರೆ ಇದೆ. ಅಂದರೆ 'ಹೋಮ್ ಮೇಕರ್' ಕೂಡ ದುಡಿಯುವ ಮಹಿಳೆ ಎನ್ನುವುದು ಆಶಾ ಅವರ ವಾದ. ಮನೆಯಲ್ಲಿ ಕೆಲಸ ಮಾಡುವ, ಹೊರಗಡೆ ಕೆಲಸ ಮಾಡುವ ಮಹಿಳೆಯ ಈ ಎರಡು ದುಡಿಮೆಗಳಿಗೆ ವ್ಯತ್ಯಾಸ ಇರಬೇಕಾಗಿಲ್ಲ ಎಂಬುದನ್ನು ತಿಳಿಸುತ್ತಾರೆ. ಆದ್ದರಿಂದ ಮಹಿಳೆಗೂ ದುಡಿಮೆಗೂ ಇರುವ ಒಂದು ಸಂಬಂಧ ಇಂದು ನೆನ್ನೆಯದಲ್ಲ, ಅದು ಯಾವತ್ತಿಗೂ ಇದೆ. ಆದರೆ ನಾವು ಅದನ್ನು ಹೇಗೆ ಪ್ರತಿಬಿಂಬಿಸುತ್ತೇವೆ ಎನ್ನುವುದು ಇಲ್ಲಿ ತುಂಬ ಮುಖ್ಯವಾಗುತ್ತದೆ. ಇದು ಮಹಿಳೆಗಿರುವ ಒಂದು ದೊಡ್ಡ ಸವಾಲೆಂದೇ ಹೇಳಬಹುದು. ಅಂದರೆ ಮಹಿಳೆಯು ತಮ್ಮ ಶ್ರಮವನ್ನು ಹೇಗೆ ವಿಭಜಿಸಿಕೊಳ್ಳುತ್ತಾಳೆ ಎನ್ನುವುದು ಇಲ್ಲಿ ತುಂಬಾ ಮುಖ್ಯವಾಗುತ್ತದೆ. ಅಂದರೆ ಮಹಿಳೆಯು ತನ್ನ ಪೂರ್ವಗ್ರಹ ಪೀಡಿತ ಯೋಚನೆಯನ್ನು ಬದಲಾಯಿಸಿಕೊಳ್ಳಬೇಕು ಎಂಬುದು ಮುಖ್ಯ ಸಂಗತಿಯಾಗಿದೆ. ಅಂದರೆ ಗಂಡು ಮನೆ ಕೆಲಸವನ್ನು ಮಾಡಬಾರದು, ಅದು ನನ್ನ ಒಬ್ಬಳಿಗೆ ಮೀಸಲಾಗಿರುವಂತಹದ್ದು. ಅದು ನನ್ನೊಬ್ಬಳ ಕರ್ತವ್ಯ ಎಂಬ ಒಂದು ಯೋಚನೆ ಹಲವಾರು ಮಹಿಳೆಯರ ತಲೆಯಲ್ಲಿ ಕೂತುಬಿಟ್ಟಿದೆ. ಈ ಹೀಗೆ ಯೋಚನೆ ಮಾಡುವ ಸ್ವಗ್ರಹಿಕೆಯ ಬಂಧನಗಳಿಂದ ಬದಲಾಗಬೇಕು ಎನ್ನುವುದನ್ನು ಆಶಾದೇವಿಯವರು

ಮತ್ತೆ ಮತ್ತೆ ತಮ್ಮ ಚಿಂತನೆಯ ಮೂಲಕ ಹೇಳುತ್ತಾ ಬಂದಿದ್ದಾರೆ. ಹೀಗಾಗಿ ಮನೆ ಕೆಲಸ ಆಗಿರಬಹುದು, ಯಾವುದೇ ಕೆಲಸ ಆಗಿರಬಹುದು ಅದು ಗಂಡು-ಹೆಣ್ಣು ಇಬ್ಬರಿಗೂ ಅನ್ವಯಿಸುವಂತಹದ್ದು ಎಂಬ ಒಂದು ಸತ್ಯವನ್ನು ಮಹಿಳೆ ತಿಳಿಯಬೇಕು ಎಂದು ಒತ್ತಾಯಿಸುತ್ತಾರೆ. ಇದರಿಂದ ಮಹಿಳೆಯರು ತಮ್ಮನ್ನು ತಾವು ನೋಡಿಕೊಳ್ಳವ ಒಂದು ಕ್ರಮ ಇದೆಯಲ್ಲ ಅದು ಬದಲಾಗಬೇಕು ಎಂದು ಹೇಳುತ್ತಾರೆ. ಹೆಣ್ಣು ಇದುವರೆಗೂ ತಮ್ಮನ್ನು ಇದೇ ಚೌಕಟ್ಟಿನಲ್ಲಿ ಇಟ್ಟುಕೊಳ್ಳುವುದೇ ಒಂದು ಕ್ರಮ ಎಂದು ತಿಳಿದುಕೊಂಡಿದ್ದಾರೆ. ಆ ಚೌಕಟ್ಟಿನ ಆಚೆಗೆ ಹೊಗಬೇಕಾಗಿರುವುದು ಈ ಹೊತ್ತಿನ ಅಗತ್ಯವನ್ನು, ಅನಿವಾರ್ಯತೆಯನ್ನು ತಿಳಿಸುತ್ತಾರೆ. ಇದನ್ನು ಸ್ವಗ್ರಹಿಕೆ ಮತ್ತು ಸ್ವಬಂಧನ ಎಂದು ಕರೆಯುತ್ತಾರೆ. ಆದರೆ ಮಹಿಳೆ ಈ ದುಡಿಮೆಯನ್ನು ತಮ್ಮ ಶಕ್ತಿಯೂ ಹೌದು, ನಮ್ಮ ಮಿತಿಯೂ ಹೌದು ಎಂದು ತಿಳಿಯುವ ಹಾಗೇ ಈ ವ್ಯವಸ್ಥೆ ಕುತಂತ್ರವನ್ನು ರೂಪಿಸುತ್ತಲೇ ಇರುತ್ತದೆ. ಅಂದರೆ ಮಹಿಳೆಯೇ ಮನೆಯ ಎಲ್ಲಾ ಕೆಲಸಗಳನ್ನು ಮಾಡಬೇಕು. ಗಂಡು ಮಾಡಿದರೆ ಆತನ ವ್ಯಕ್ತಿತ್ವಕ್ಕೆ ಕುಂದು ಬರುತ್ತದೆ ಎಂದು, ಮನೆಯ ಸ್ವಚ್ಚತೆ ಮಾಡುವುದು ಆಕೆಯ ಜವಾಬ್ದಾರಿ ಎಂದು ಹೇಳುತ್ತಾ ಬಂದಿದೆ. ಈ ಮೂಲಕ ಮಹಿಳೆಯು ಈ ಪಿತೃ ಸಮಾಜದ ಹುನ್ನಾರವನ್ನು ಅರಿಯದೆ ಅಗತ್ಯಕ್ಕಿಂತ ಹೆಚ್ಚು ಕೆಲಸವನ್ನು ತಮ್ಮ ತಲೆಯ ಮೇಲೆ ಎಳೆದುಕೊಂಡು ಬಿಡುತ್ತಾರೆ. ಆದರೂ ಮಹಿಳೆಯು ಹೊರಗೆ ಮತ್ತು ಒಳಗೆ ಎರಡು ಕೆಲಸಗಳನ್ನು ನಿಭಾಯಿಸುವುದು ಹೆಣ್ಣಿಗಿರುವ ಶಕ್ತಿ ಎಂದು ಆಶಾ ಅವರು ಹೇಳುತ್ತಾರೆ. ಹೆಣ್ಣು ಈ ಕೆಲಸಗಳನ್ನು ಸಮರ್ಥವಾಗಿ ನಿಭಾಯಿಸಬಲ್ಲಳು ಮತ್ತು ಲೀಲಾಜಾಲವಾಗಿ ನಿರ್ವಹಿಸಬಲ್ಲಳು. ಮುಖ್ಯವಾಗಿ ಇದರ ಅರ್ಥ ಮೊದಲನೆಯದಾಗಿ ಗಂಡು ಈ ಕೆಲಸವನ್ನು ಹಂಚಿಕೊಳ್ಳಬಾರದು ಎಂಬುವುದು ಇದರ ಉದ್ದೇಶ ಅಲ್ಲ. ಎರಡನೆಯದಾಗಿ ಈ ಎರಡು ಕೆಲಸಗಳನ್ನು ನಿಭಾಯಿಸಬೆಕಾಗಿರುವುದು ಅವಳ ಕರ್ಮ ಎಂದು ಅಲ್ಲ. ಆದರೆ ಮನೆಯ ಒಳಗೆ ಮತ್ತು ಹೊರಗೆ ದುಡಿಯುವ ಸಾಮರ್ಥ್ಯ ಇರುವುದು ಮಹಿಳೆಗೆ ಮಾತ್ರ ಸಾಧ್ಯವಿರುವ ಶಕ್ತಿ ವಿಶೇಷ ಎಂಬುದು ಚಿಂತಕಿಯ ಅಭಿಪ್ರಾಯವಾಗಿದೆ.

ಕೊನೆಯದಾಗಿ ಈ ಒಂದು ಬಿಡುಗಡೆ ಕತೆಯ ಮೂಲಕ ಆಶಾ ಅವರು ಮಹಿಳೆಯು ತನ್ನ ಬಂಧನಕ್ಕೆ ತಾನೇ ಕಾರಣವಾಗಿರುತ್ತಾಳೆ ಎಂಬುವುದನ್ನು ಗುರುತಿಸುತ್ತಾರೆ. ಅಂದರೆ ಗಂಡು ಹಾಕಿದ ಕರಾರುಗಳನ್ನು, ದಿಗ್ಭಂಧನಗಳನ್ನು ಮೀರಿ ಬರಬೇಕೆಂಬುದು ಅವರ ಆಶಯವಾಗಿದೆ. ಒಂದು ದಾಂಪತ್ಯದಲ್ಲಿ ಕೊಡುವುದು, ಕೊಳ್ಳುವುದು ಒಂದು ಕರಾರು ಆಗಬೇಕಾಗಿಲ್ಲ ನಿಜ, ಆದರೆ ಎಷ್ಟು ಕೊಡುತ್ತೇವೆಯೋ ಅಷ್ಟನ್ನು ಪಡೆದುಕೊಳ್ಳುವ ನಂಬಿಕೆ ಇದ್ದಾಗ ಮಾತ್ರ ನಾವು ಕೊಡಬೆಕು ಎಂದು ತಮ್ಮ ಚಿಂತನೆಯ ಮೂಲಕ ಹೇಳುತ್ತಾರೆ. ಅಂದರೆ ಮಹಿಳೆಗೆ ಅಡುಗೆ ಮಾಡುವುದು, ಬಟ್ಟೆ ತೊಳೆಯುವುದು, ಮನೆ ಸ್ವಚ್ಛಮಾಡುವುದು ಅತ್ಯಂತ ಸಣ್ಣ ಕ್ಷುಲ್ಲಕ, ಕ್ಷುದ್ರ ಕೆಲಸ ಎಂದು ತಿಳಿದುಕೊಂಡಿರುತ್ತಾರೆಯೋ ಅದು ಕೂಡ ಹೆಣ್ಣಿಗೆ ಅನೇಕ ಸಲ ಕರಾರು ಆಗಿರುತ್ತದೆ ಮತ್ತು ಬಂಧನ ಆಗಿರುತ್ತದೆ. ಹೀಗೆ "ಹುಟ್ಟಿನಿಂದಲೇ ಯಾರು ಹೆಣ್ಣಾಗಿ ಹುಟ್ಟುವುದಿಲ್ಲ, ಆನಂತರ ಹೆಣ್ಣಾಗಿ ರೂಪಿಸಲ್ಪಡುತ್ತಾಳೆ" ಎಂದು ಸಿಮೋನ್ ದಿ ಬೋವಾ ಅವರ ಹೇಳಿಕೆಯ ರೀತಿಯಲ್ಲಿ ಆಶಾದೇವಿ ತಮ್ಮ ಚಿಂತನೆಯನ್ನು ಬೆಳೆಸುತ್ತಾರೆ. ಮಹಿಳೆಯನ್ನು ಸಂಕುಚಿತ ರೂಪದಲ್ಲಿ ಪುರುಷ ಸಮಾಜ ಕಟ್ಟುತ್ತಿರುವುದನ್ನು ತೀವ್ರವಾದ ರೀತಿಯಲ್ಲಿ ವಿರೋಧಿಸುತ್ತಾರೆ.

## ೪.೪ ಲೋಕ ನಿಯಂತ್ರಣದ ವಿವಿಧ ಆಯಾಮಗಳು

ಕುಟುಂಬದ ಹೊರಗಿನ ನಿಯಂತ್ರಣವನ್ನು ಹಲವಾರು ರೀತಿಗಳಲ್ಲಿ ನೋಡಬಹುದು. ಸಮಾಜದಲ್ಲಿ ಮಹಿಳೆಯ ಮೇಲಿನ ನಿಯಂತ್ರಣವನ್ನು ಹಿಂಸೆ, ದಬ್ಬಾಳಿಕೆ. ಕ್ರೌರ್ಯದ ಮೂಲಕ ನಡೆಸಲಾಗುತ್ತದೆ. ಹೀಗೆ ನಿಯಂತ್ರಣಕ್ಕೆ ಹಲವಾರು ಮುಖಗಳಿವೆ ಎಂಬುದನ್ನು ಈ ಮೂಲಕ ನೋಡಬಹುದು. ಕುಟುಂಬದ ಹೊರಗಡೆ ಮಹಿಳೆಯು ನೇರವಾದ ರೀತಿಯಲ್ಲಿ ಶೋಷಣೆಗೆ ಒಳಪಡುತ್ತಿದ್ದಾಳೆ. ಮನೆಯಿಂದ ಹೊರಗೆ ಕಾಲಿಟ್ಟ ಮಹಿಳೆಯು ಪ್ರತಿಯೊಂದು ಮಾದರಿಯಲ್ಲಿ ಹಿಂಸೆಗೆ ಮುಜುಗರಕ್ಕೆ ಒಳಪಟ್ಟಿದ್ದಾಳೆ. ಉದ್ಯೋಗ ಕ್ಷೇತ್ರದಲ್ಲಿ ಪುರುಷ ಸಹೋದ್ಯೋಗಿಗಳು ಕೂಡ ಹಿಂಸೆ ನಡೆಸುತ್ತಾರೆ ಎಂಬುದು ಇಂದಿಗೂ ಕಟು ಸತ್ಯವಾಗಿದೆ.

ಸಮಾಜವು ಜಾಗತೀಕರಣಗೊಂಡ ಮೇಲೆ ಮಹಿಳೆಗೆ ಎಷ್ಟು ಸ್ವಾತಂತ್ರ್ಯ ದೊರೆತಿಯೋ, ಅಷ್ಟೇ ಆಕೆಯ ಮೇಲೆ ನಿಯಂತ್ರಣ ಹಿಂಸೆ ಹೆಚ್ಚಾಗುತ್ತಿದೆ. ಸಮೂಹ ಮಾಧ್ಯಮಗಳು ಮಹಿಳೆಯನ್ನು ತಮ್ಮ ಆದಾಯ ವೃದ್ಧಿಸಿಕೊಳ್ಳಲು ಬಳಸಿಕೊಳ್ಳುತ್ತಿವೆ. 'ಉತ್ತಮ ಸರಕಿದು ಅತಿ ಲಾಭ ಬರುವಂಥ' ಎಂಬ ಲೇಖನದಲ್ಲಿ ಮಹಿಳೆಯನ್ನು ಪುರುಷ ಸಮಾಜವು ಯಾವ ರೀತಿ ಒಂದು ಸರಕನ್ನಾಗಿ ರೂಪಿಸಿಕೊಂಡಿದೆ ಎಂಬುದನ್ನು ಆಶಾದೇವಿ ವಿಶ್ಲೇಷಣೆ ಮಾಡುತ್ತಾರೆ. ಆಧುನೀಕರಣದ ಭಾಗವಾದ ಜಾಗತೀಕರಣವನ್ನು ಕುರಿತು ಆಶಾ "ಹೆಣ್ಣಿನ ಮಟ್ಟಿಗೆ ವಿಮೋಚನೆಯ ದಾರಿಯಾಗಿ ಕಂಡಿದ್ದ ಜಾಗತೀಕರಣ ಇನ್ನೊಂದು ಬಂಧನವಾಗುತ್ತಿದೆಯೋ ಎಂದು ಆತಂಕ ಪಡುತ್ತಾರೆ."[೧೦]

ಅಂದರೆ ನಾವು ಯಾವುದನ್ನು ಮಹಿಳೆಯ ವಿಮೋಚನೆಯ ಹಾದಿ ಎಂದು ಆಧುನೀಕರಣವನ್ನು ನಂಬಿದ್ದೇವೆಯೋ ಅದೇ ಮಹಿಳೆಯನ್ನು ಬಂಧನಕ್ಕೊಳಪಡಿಸುತ್ತಿದೆ. ಜಾಗತೀಕರಣದಿಂದ ಮಹಿಳೆ ಹೊರಗೆ ಬರಲು ಪ್ರಾರಂಭಿಸಿದ್ದಾಳೆ. ಆಗ ಮಹಿಳೆಯ ಮೇಲಿನ ಲೈಂಗಿಕ ದೌರ್ಜನ್ಯಗಳು ಹೆಚ್ಚು ನಡೆಯಲು ಕಾರಣವಾಗಿದೆ. ಈ ಜಾಗತೀಕರಣದಿಂದ ಸಮಾಜದಲ್ಲಿ ಮಹಿಳೆಯರು ದುಡಿಯಲು ಹೊರಗೆ ಬರಲು ಪ್ರಾರಂಭಿಸಿದಾಗಿನಿಂದ ಆಕೆಯ ಮೇಲೆ ಅತ್ಯಾಚಾರಗಳು ನಡೆಯುತ್ತಿವೆ. ಇದರ ಭಾಗವೇ ಆದ ವೇಶ್ಯಾವಾಟಿಕೆಯು ಲೈಂಗಿಕ ಪ್ರವಾಸೋದ್ಯಮದ ಒಂದು ಭಾಗವಾಗಿ ಬೆಳೆಯುತ್ತಿದೆ ಎಂದು ಮಹಿಳೆಯ ಮೇಲೆ ಜಾಗತೀಕರಣದ ಪರಿಣಾಮವನ್ನು ಗುರುತಿಸುತ್ತಾರೆ. ಇನ್ನು ಹಲವಾರು ಮಹಿಳೆಯರು ಜಾಗತೀಕರಣದ ಹೊಡೆತ ತಾಳಲಾರದೆ ಕಾರ್ಖಾನೆಗಳು ಮುಚ್ಚಿದಾಗ ಕೆಲಸಗಳು ದೊರೆಯದಿದ್ದಾಗ, ಜೀವನ ಸಾಗಿಸಲು ಕಷ್ಟವಾದಾಗ ವೇಶ್ಯಾವಾಟಿಕೆಗಳಿಗೆ ಇಳಿಯುತ್ತಿದ್ದಾರೆ. ಲೈಂಗಿಕ ಪ್ರವಾಸೋದ್ಯಮವನ್ನು ಕುರಿತಂತೆ ಆಶಾ ಅವರು "ಮಹಿಳೆಯನ್ನು ಸರಕಾಗಿಸುವುದರಲ್ಲಿ ಅಗ್ರಸ್ಥಾನ ಲೈಂಗಿಕ ಪ್ರವಾಸೋದ್ಯಮಕ್ಕೆ ಹೋದರೆ, ಎರಡನೆಯ ಮತ್ತು ಮೂರನೆಯ ಸ್ಥಾನಗಳು ಮಾಡಲಿಂಗ್, ಜಾಹೀರಾತು ಮತ್ತು ಸೌಂದರ್ಯ ಸ್ಪರ್ಧೆಗಳಿಗೆ ಹೋಗುತ್ತವೆ ಎಂದು ಹೇಳುತ್ತಾರೆ."[೧೧] ಆಶಾದೇವಿಯವರ ಈ ಹೇಳಿಕೆಯನ್ನು ಗಮನಿಸಿದಾಗ ಇಂದು ಲೈಂಗಿಕ ಪ್ರವಾಸೋದ್ಯಮಕ್ಕೆ ಪ್ರಪಂಚದ ಹಲವಾರು ದೇಶಗಳು ಮುಕ್ತ ಅವಕಾಶ ನೀಡುತ್ತಿವೆ. ಸರ್ಕಾರಗಳೇ ಮಹಿಳೆಯನ್ನು ಶೋಷಿಸಲು ನೇರವಾದ ಮಾರ್ಗವನ್ನು ಈ ನೆಲೆಯಲ್ಲಿ ಸೃಷ್ಟಿಸುತ್ತಿವೆ. ಮಹಿಳೆಯು ಈ ನೆಲೆಯಲ್ಲಿ ಜಾಗತಿಕ ಮಾರುಕಟ್ಟೆಯಲ್ಲಿ ವ್ಯಾಪಾರವಾಗುತ್ತಿದ್ದಾಳೆ. ಮಹಿಳೆಯನ್ನು ಜಾಹೀರಾತುಗಳಲ್ಲಿ ಅರೆವಸ್ತ್ರಗಳನ್ನಾಗಿ

ಮಾಡಿ ತನ್ನ ಅನುಕೂಲಕ್ಕೆ ಹಣ ಮಾಡಲು ಪುರುಷ ಸಮಾಜ ಬಳಸಿಕೊಳ್ಳುತ್ತಿದೆ. ಹಣ ಸಂಪಾದನೆಯ ಮುಖ್ಯ ಕೇಂದ್ರ ಮಹಿಳೆಯೇ ಆಗಿದ್ದಾಳೆ. ಈ ಮೂಲಕ ಮಹಿಳೆಯನ್ನು ಪರೋಕ್ಷವಾಗಿ ಮಾರಾಟ ಮಾಡುತ್ತಿದೆ ಹಾಗೂ ಬಳಸಿಕೊಳ್ಳಲಾಗುತ್ತಿದೆ ಎಂಬುದು ಆಶಾ ಅವರ ವಾದವಾಗಿದೆ.

ಮಹಿಳೆಯರನ್ನು ಜಾಹೀರಾತುಗಳಲ್ಲಿ ಒಳ್ಳೆಯ ಹೆಂಡತಿ, ಆದರ್ಶ ನಾರಿ; ಎಂಬುದಾಗಿ ಚಿತ್ರಿಸಿ ಆಕೆಗೆ ಸ್ವತಃ ವ್ಯಕ್ತಿತ್ವವನ್ನು ಹಾಳು ಮಾಡುತ್ತಿವೆ. ಈ ರೀತಿಯಲ್ಲಿ ಸಮಾಜಕ್ಕೆ ಕಾಲಿಟ್ಟ ಜಾಗತೀಕರಣವು ಹೆಣ್ಣಿನ ಶೋಷಣೆಯ, ನಿಯಂತ್ರಣದ, ಬಂಡವಾಳದ, ಒಂದು ಮೂಲ ಮಾರ್ಗವೇ ಆಗಿದೆ. ಆದ್ದರಿಂದ ಸಮಾಜದಲ್ಲಿ ಮಹಿಳೆಯ ಶೋಷಣೆಗೆ ಇಂದು ಜಾಗತೀಕರಣವೇ ಮೂಲ ಕಾರಣ ಎಂದು ಆಶಾ ಅವರ ನಿಲುವಾಗಿದೆ. ಎಂದು ಈ ಹೇಳಿಕೆಯ ಮೂಲಕ ಉಲ್ಲೇಖಿಸುತ್ತಾರೆ.

ಸಾಮಾಜಿಕವಾಗಿ ಗಂಡಸರು ಮಹಿಳೆಗೆ ಹಲವಾರು ಬಂಧಗಳನ್ನು ಒಡ್ಡುತ್ತಾರೆ. ಆಕೆ ಧರಿಸಿರುವ ಉಡುಪಿನಿಂದ ಹಿಡಿದು ಬೇರೆಯವರ ಅಂದರೆ ಪುರುಷರ ಜೊತೆಯಲ್ಲಿ ಮುಕ್ತವಾಗಿ ವ್ಯವಹರಿಸುವ ಸ್ವಾತಂತ್ರ್ಯ ಕೂಡ ಆಕೆಗಿಲ್ಲ. ನೀನು ಹೆಣ್ಣು ಹೆಂಗಸು ಎಂದು ಹೇಳುತ್ತಾ. ಆಕೆಯ ವ್ಯಕ್ತಿತ್ವವನ್ನು ಸಂಕುಚಿತಗೊಳಿಸಲಾಗುತ್ತದೆ ಎಂಬುದು ಆಶಾ ಅವರ ನಿಲುವಾಗಿದೆ. ಮಲೆಯಾಳಂನ ಕವಿ 'ಗೀತಾ ಹಿರಣ್ಯನ್' ರಚಿಸಿರುವ 'ಒಳಲಾಂಕರಣ' ಕವಿತೆಯು ಮಹಿಳೆಯ ಮೇಲಿನ ನಿಯಂತ್ರಣವನ್ನು ನೇರವಾಗಿ ತೋರಿಸುತ್ತದೆ. ಈ ಕವಿತೆಯಲ್ಲಿ ಸಮಾಜದಲ್ಲಿರುವ ಮಹಿಳೆಯ ಸ್ಥಿತಿಯನ್ನು ಹೇಳಲು ಬೋನ್ಸಾಯ್ ಮರವನ್ನು ರೂಪಕವಾಗಿ ಬಳಸಿದ್ದಾರೆ.

ನನ್ನೊಲವೇ

ಸಹಜ ಬೆಳವಣಿಗೆಯಿಲ್ಲದ

ಬೋನ್ಸಾಯ್ ಅರಳಿ ಮರದ ಹಾಗೆ

ನನ್ನ ಬೆಳೆಯೂ ಕಳೆಯೂ ನಿಯಂತ್ರಣಗೊಂಡಿದೆ ('ಒಳಲಾಂಕರಣ')

"ಆಶಾ ದೇವಿಯವರು ಮರಕ್ಕೆ ಮತ್ತು ಮಹಿಳೆಗೆ ಯಾವ ರೀತಿ ಅಂತರ್ ಸಂಬಂಧ ಇದೆ ಎಂಬುದನ್ನು, ಎಷ್ಟೊ ಎತ್ತರಕ್ಕೆ ಬೆಳೆಯಬಲ್ಲ ಎಲ್ಲಾ ಶಕ್ತಿಯಿದ್ದಾಗಲೂ ಉದ್ದೇಶ ಪೂರ್ವಕವಾಗಿ ಬೆಳವಣಿಗೆಯನ್ನು ನಿಯಂತ್ರಿಸಿರುವ ಬೋನ್ಸಾಯ್‌ಗೂ ಹೆಣ್ಣಿಗೂ ಎಂಥ ಸಾಮ್ಯತೆಯಿದೆಯಲ್ಲವೆ ಎಂದು ಈ ಹೇಳಿಕೆಯ ಮೂಲಕ ಉಲ್ಲೇಖಿಸುತ್ತಾರೆ."[೧೨] ಬೋನ್ಸಾಯ್ ಮರವನ್ನು ಅಲಂಕಾರಕ್ಕಾಗಿ ಅದರ ಬೆಳವಣಿಗೆಯನ್ನು ನಿಯಂತ್ರಿಸಲಾಗುತ್ತದೆ. ಅದೇ ತರಹ ಪುರುಷ ತನ್ನ ಅಧಿಕಾರಕೇಂದ್ರದ ಅವಶ್ಯಕತೆ ಮತ್ತು ಅಭಿರುಚಿಗಾಗಿ ಮಹಿಳೆಯನ್ನು ಬೋನ್ಸಾಯ್ ಮರದ ರೀತಿ ನಿಯಂತ್ರಣಕ್ಕೆ ಒಳಪಡಿಸುತ್ತಿದ್ದಾನೆ ಎಂಬುದನ್ನು ಆಶಾ ಈ ಕವಿತೆಯ ಮೂಲಕ ಚರ್ಚೆಗೆ ಒಳಪಡಿಸುತ್ತಾರೆ. ಈ ರೀತಿ ಬೊನ್ಸಾಯ್ ಮರದ ಬೆಳವಣಿಗೆಯನ್ನು ನಿಯಂತ್ರಿಸುವುದು ಮನೆಯ ಅಲಂಕಾರಕ್ಕಾಗಿ ಅದೇ ರೀತಿ ಮಹಿಳೆಯನ್ನು ತನ್ನ ಅಪೇಕ್ಷೆಗಳಿಗೆ ಮಹಿಳೆಯ ವ್ಯಕ್ತಿತ್ವವನ್ನು ಪುರುಷ ಹಿಡಿತದಲ್ಲಿಟ್ಟುಕೊಂಡಿದ್ದಾನೆ. ಇದರಿಂದ ಹೆಣ್ಣಿನ ಸ್ವಾಯತ್ತತೆಯು, ಅನನ್ಯತೆಯು, ವ್ಯಕ್ತಿತ್ವವು, ಕುಂಠಿತವಾಗುತ್ತದೆ ಎಂಬ ವಿಷಯವನ್ನು ಆಶಾದೇವಿಯ

ಚಿಂತನೆಯ ಮೂಲಕ ತಿಳಿಸುತ್ತಾರೆ. ಈ ಮರದ ಬೆಳವಣಿಗೆಯ ನಿಯಂತ್ರಣದ ರೀತಿ ಮಹಿಳಾ ವ್ಯಕ್ತಿತ್ವವನ್ನು ನಿಯಂತ್ರಿಸಲಾಗಿರುವುದನ್ನು ಈ ರೀತಿ ಗುರುತಿಸುತ್ತಾರೆ.

ಮಹಿಳೆ ಪುರುಷನಿಗಿಂತ ಎಲ್ಲ ಬುದ್ಧಿ ಚಾಣಕ್ಷತನಗಳಲ್ಲಿ ಮುಂದೆ ಇದ್ದಾಳೆ. ಈ ಶಕ್ತಿಯನ್ನು ಕುಗ್ಗಿಸುವ ಸಲುವಾಗಿ ಮಹಿಳೆಯ ವ್ಯಕ್ತಿತ್ವ ವಿಕಸನಕ್ಕೆ ದಾರಿಮಾಡಿಕೊಡದೆ ಅವಳ ಅಸ್ತಿತ್ವವನ್ನು ನಾಶಮಾಡುವ ದೃಷ್ಟಿಯಿಂದ ಬೊನ್ಸಾಯ್ ಮರದಂತೆ ಆಕೆಯ ಬೆಳವಣಿಗೆಯನ್ನು ನಿಯಂತ್ರಿಸಲಾಗಿದೆ. ಈ ಮೂಲಕ ಮಹಿಳೆ ಪುರುಷನಿಗಿಂತ ಬುದ್ಧಿವಂತಳು, ಮಾನಸಿಕವಾಗಿ ಸ್ಥೈರ್ಯವುಳ್ಳಂತವಳು ಎಂತಹ ಕಷ್ಟದಲ್ಲಿಯೂ ಎದೆಗುಂದದೆ, ಧೈರ್ಯ ಕಳೆದುಕೊಳ್ಳದೆ ಕಠಿಣ ಪರಿಸ್ಥಿತಿಯನ್ನ ನಿಭಾಯಿಸುತ್ತಾಳೆ ಎಂದು ಹೆಣ್ಣಿಗಿರುವ ಆತ್ಯಂತಿಕ ಶಕ್ತಿಯನ್ನು ಆಶಾ ಗುರುತಿಸುತ್ತಾರೆ. ಈ ಮೂಲಕ ಪುರುಷನಿಗಿರುವ, ಇದೆ ಎಂದು ನಂಬಲಾಗುತ್ತಿರುವ, ನಂಬಿಸಲಾಗುತ್ತಿರುವ ಆತ್ಮಸ್ಥೈರ್ಯದ ನೆಲೆಗಳನ್ನು ಆಶಾದೇವಿ ಟೀಕಿಸುತ್ತಾರೆ. ಮಹಿಳೆಗಿರುವ ಶಕ್ತಿಯನ್ನು, ಪುರುಷನಿಗಿರುವ ದೌರ್ಬಲ್ಯವನ್ನು ಗುರುತಿಸುತ್ತಾರೆ. ಆದರೆ ಪುರುಷನು ಬೊನ್ಸಾಯ್ ಮರದ ಹಾಗೆ ಮಹಿಳೆಯ ವ್ಯಕ್ತಿತ್ವವನ್ನು ನಿಯಂತ್ರಿಸಲು ಪ್ರಯತ್ನಿಸಿದರು ಕೂಡ ಅದು ತನ್ನ ಬೆಳವಣಿಗೆಯನ್ನು ನಿಲ್ಲಿಸುವುದಿಲ್ಲ. ಅದೇ ರೀತಿ ಮಹಿಳೆಯ ವ್ಯಕ್ತಿತ್ವವು, ಚೈತನ್ಯವು ಸದಾ ಬೆಳೆಯುತ್ತಿರುತ್ತದೆ ಎಂದು ಆಶಾ ಅವರು ಈ ಪದ್ಯದ ಮೂಲಕ ತಮ್ಮ ಸ್ತ್ರೀವಾದಿ ಚಿಂತನೆಯನ್ನು ವಿಸ್ತರಿಸುತ್ತಾರೆ.

ಆಶಾದೇವಿಯವರು ಈ ಮೂಲಕ ಮಹಿಳೆಯು ಬೋನ್ಸಾಯ್ ಮರದ ಹಾಗೇ ತನ್ನ ಅಸ್ತಿತ್ವವನ್ನು ಬೇರೆ ರೀತಿಯಲ್ಲಿ ಕಟ್ಟಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಿರುತ್ತಾಳೆ ಎಂದು ಈ ಚರ್ಚೆಯ ಮೂಲಕ ತಿಳಿಸುತ್ತಾರೆ. ಆದರೆ ಇನ್ನು ಒಂದು ಅಂಶವನ್ನು ತಿಳಿಸುತ್ತಾರೆ ಏನೆಂದರೆ, ಈ ಒಂದು ಮಹಿಳೆಯು ನಡೆಸುವ ಪ್ರಯತ್ನಕ್ಕೆ ಒಂದು ಸ್ಥಾನ, ಅವಕಾಶ, ಸಮಾಜದಲ್ಲಿ ಇದುವರೆಗೂ ಸಿಕ್ಕಿಲ್ಲ ಎಂಬುದನ್ನು ಕೂಡ ಗುರುತಿಸುತ್ತಾರೆ. ಅಂದರೆ ಇವತ್ತು ದಲಿತರು ಹೋರಾಟ ಮಾಡಿದರೆ ಅದಕ್ಕೆ ಸಿಗುವಂತಹ ಅವಕಾಶ, ಹೆಣ್ಣು ಮಕ್ಕಳು ನಡೆಸುವ ಹೋರಾಟಕ್ಕೆ ಸಿಗುವುದಿಲ್ಲ. ಈ ಹೋರಾಟವನ್ನು ಬೇರೆ ನೆಲೆಯಲ್ಲಿಯೇ ಈ ಪಿತೃ ಸಮಾಜ ಗುರುತಿಸುತ್ತಲೇ ಹೋಗುತ್ತದೆ. ಆಕೆಯನ್ನು ಗಯ್ಯಾಳಿ, ಬಜಾರಿ ಎಂದು, ಅವಳು ತುಂಬಾ ಮಾತನಾಡುತ್ತಾಳೆ ಎಂದು, ಅಯ್ಯೋ ಅವಳ ಬಾಯಿ ಜೋರು ಎಂದು ಕರೆಯುತ್ತದೆ. ಅಂದರೆ ಮಹಿಳೆಯು ತನ್ನ ಅಸ್ತಿತ್ವವನ್ನು ಅಸ್ಮಿತೆಯನ್ನು ಕಟ್ಟಿಕೊಳ್ಳುವುದಕ್ಕೆ ನಡೆಸುವ ಎಲ್ಲಾ ಪ್ರಯತ್ನಗಳನ್ನು ಇದು ಕೆಳದರ್ಜೆಯಲ್ಲೇ ನೋಡುತ್ತದೆ.

ಈ ಹೋರಾಟವನ್ನು ಹೀಗಳೆಯುತ್ತಾ, ಅವಳು ನಡೆಸುವ ಪ್ರಯತ್ನಗಳ ಬಗೆಗೆ ಅವಳಿಗೆ ನಂಬಿಕೆ ಹೊರಟು ಹೋಗುವ ಹಾಗೇ ಮಾಡುತ್ತದೆ. ಆದ್ದರಿಂದ ಮಹಿಳೆಯು ಎಷ್ಟೇ ಹೋರಾಟ ಮಾಡಿದರೂ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾಳೆ ಎನ್ನುವುದಕ್ಕಿಂತ, ಹೆಚ್ಚಾಗಿ ಅವಳು ಮಾಡುವ ಹೋರಾಟವು ಹೆಚ್ಚಾಗುತ್ತಾ ಇದೆ. ಈ ಪುರುಷ ಪ್ರಧಾನ ಸಮಾಜ ಒಡ್ಡುತ್ತಿರುವ ಸವಾಲುಗಳು ಕೂಡ ಹೆಚ್ಚಾಗುತ್ತಾ ಇದೆ. ಈ ಪಿತೃ ಪ್ರಧಾನ ಸಮಾಜದ ಹುನ್ನಾರದ ಅರಿವು ಮಹಿಳೆಗೆ ಗೊತ್ತಾಗದೆ ಇದ್ದರೂ ಈ ಹೋರಾಟ ಹಲವು ಸವಾಲುಗಳನ್ನು ಪಡೆದುಕೊಳ್ಳುತ್ತಲೇ ಇರುತ್ತದೆ. ಅಂದರೆ ಪಿತೃಸಮಾಜಕ್ಕೆ ಮಹಿಳೆಯು ಎಷ್ಟು ತಾನು ದೇಹ ಮಾತ್ರ ಅಲ್ಲ ಎಂದು ಹೇಳುತ್ತಾ ಹೋಗುತ್ತಾಳೆಯೋ, ಅಷ್ಟೇ ಈ ಪಿತೃಪ್ರಧಾನ ಸಮಾಜವು

ನೀನು ದೇಹಮಾತ್ರ ಎಂದು ಹೇಳುತ್ತಾ ಹೋಗುತ್ತದೆ. ಈ ಮೂಲಕ ಹೆಣ್ಣಿಗಿರುವ ದೊಡ್ಡ ಸವಾಲುಗಳನ್ನು ಗುರುತಿಸಬಹುದು. ಇದರಿಂದ ಆಶಾ ಅವರು ಹೇಳಲು ಹೊರಟಿರುವುದು, ಪಿತೃ ಸಮಾಜವು ಮಹಿಳೆಯನ್ನು ಕೈ ಮುಗಿದು ಬಿಟ್ಟು ನೀನು ದೇವಿ ಎಂದು ಕರೆದು ಬಿಡುತ್ತದೆ. ಇಲ್ಲಾ ಅಂದರೆ ನಿನ್ನ ಬುದ್ಧಿ ಮೊಣಕಾಲ ಕೆಳಗೆ ಎಂದು ಪ್ರಾಣಿತ್ವದ ನೆಲೆಗೆ ತಂದು ಬಿಡುತ್ತದೆ ಎಂದು. ಆದರೆ ಆಶಾ ಅವರು ನಮ್ಮನ್ನು ದೇವಿ ಅಂತಲೂ ಕರೆಯಬೇಡಿ, ಪ್ರಾಣಿ ಅಂತನೂ ಕರೆಯಬೇಡಿ. ನಮ್ಮನ್ನು ಮನುಷ್ಯತ್ವದ ಘನತೆಯಲ್ಲಿ ನೋಡಿ ಎಂದು ಹೇಳುತ್ತಾರೆ. ಆ ಮೂಲಕ ಮಹಿಳೆಗೆ ಬೇಕಾಗಿರುವುದು ಆರಾಧನೆ ಮತ್ತು ತಿರಸ್ಕಾರಕ್ಕಿಂತ ಮಹಿಳೆಗೆ ಬೇಕಾಗಿರುವುದು, ಮಹಿಳೆಯರು ಬಯಸುತ್ತಿರುವುದು ಗೌರವ ಮತ್ತು ಅಧಿಕೃತತೆ ಎಂಬುದನ್ನು ತಿಳಿಸುತ್ತಾರೆ.

ಇಂದು ಮಹಿಳೆಯು ಸಮಾಜದಲ್ಲಿ ತನ್ನ ಸ್ಥಾನಮಾನದ ಬಗ್ಗೆ ಪ್ರಶ್ನಿಸಲು ಹೊರಟರೆ ಆಕೆಯನ್ನು 'ಬಜಾರಿ' ಎಂದು 'ಬೋಲ್ಡ್' ಎಂದು ಹಣೆಪಟ್ಟಿ ಕಟ್ಟಲಾಗುತ್ತದೆ. ಸಮಾಜದಲ್ಲಿ ಪ್ರತಿದಿನವೂ ಮಹಿಳೆಯ ಮೇಲೆ ಹಲವಾರು ರೀತಿಗಳಲ್ಲಿ ಹಿಂಸೆಯು ದಾಖಲಾಗುತ್ತವೆ. ಹೆಣ್ಣಿನ ಮೇಲೆ ನಡೆಯುವ ಹಿಂಸೆಯನ್ನು ಕುರಿತಂತೆ ಆಶಾ ಅವರು "ಹೆಣ್ಣಿನ ಮಟ್ಟಿಗೆ ಹಿಂಸೆ ಎನ್ನುವುದು ಎಂಥ ಜೀವ ಕೊರಳ ಸಂಗಾತಿ ಎಂದರೆ ನಾವು ಹೆಣ್ಣು ಮತ್ತು ಹಿಂಸೆಯ ಬಗ್ಗೆ ಚರ್ಚಿಸಬೇಕೆಂದರೆ ನಮ್ಮ ಈ ಘಳಿಗೆ ವರ್ತಮಾನವನ್ನು ಬಿಟ್ಟು ಬೇರೆ ಮಾತನಾಡಲಾರದಷ್ಟು ಹಿಂಸೆಯ ಅನುಭವ ಸಾಂದ್ರವಾಗಿರುತ್ತದೆ, ತೀವ್ರವಾಗಿರುತ್ತದೆ ಎಂದು ಹೇಳುತ್ತಾರೆ."[೧೩] ಈ ಹೇಳಿಕೆಯನ್ನು ಗಮನಿಸಿದರೆ ಹಿಂಸೆಗೆ ಮಹಿಳೆಯೇ ಸಾಧನವಾಗಿದ್ದಾಳೆ. ಪ್ರತಿ ಸಮಯದಲ್ಲಿ, ಪ್ರತಿ ಕಾಲದಲ್ಲಿ ಆಕೆಯ ಮೇಲೆ ಹಿಂಸೆ ನಿರಂತರವಾಗಿರುತ್ತದೆ. ಆಕೆಯ ಮೇಲೆ ಪ್ರತಿದಿನ ಅತ್ಯಾಚಾರ ಮಾಡುವ ಮೂಲಕ, ಕೌಟುಂಬಿಕವಾಗಿ ಕಿರುಕುಳ ನೀಡುವ ಮೂಲಕ, ಹೊರಗಡೆ ಕೆಲಸ ಮಾಡುವಾಗ ಪುರುಷ ಪ್ರಧಾನ ಪ್ರತಿನಿಧಿಗಳು ಲೈಂಗಿಕವಾಗಿ ಕೆಟ್ಟ ನಡವಳಿಕೆಯಿಂದ ನಡೆದುಕೊಳ್ಳುವ ಮೂಲಕ ಹಿಂಸೆ ಮಾಡುತ್ತಾರೆ. ಹೀಗೆ ಮಹಿಳೆಯ ಮೇಲಿನ ಹಿಂಸೆ ಕಾಲಾತೀತವಾಗಿ, ದೇಶಾತೀತವಾಗಿ ನಿರಂತರವಾಗಿ ನಡೆಯುತ್ತಾ ಬಂದಿದೆ. ಪ್ರತಿ ಕ್ಷಣದಲ್ಲಿ ಮಹಿಳೆ ಒಂದಲ್ಲ ಒಂದು ದೌರ್ಜನ್ಯಕ್ಕೆ ಒಳಗಾಗುತ್ತಲೇ ಇದ್ದಾಳೆ ಎಂಬುದನ್ನು ತಿಳಿಸುವುದು ಆಶಾ ಅವರ ಪ್ರಧಾನ ಉದ್ದೇಶವಾಗಿದೆ.

ಹಿಂಸೆಯನ್ನು ಕುರಿತಂತೆ ಆಶಾದೇವಿಯವರು "ಹೆಣ್ಣು ಹಿಂಸೆಯ ಗುರಿಯೂ ಹೌದು, ಮಾಧ್ಯಮವು ಹೌದು" ಎಂದು ಹೇಳುತ್ತಾ, "ಸಮಾಜದಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ಬಹುತೇಕ ಹಿಂಸೆಗಳಿಗೆ ಸಮಾಜಿಕವಾದ ಅಧಿಕೃತತೆ ಇಲ್ಲ ಎಂಬುದಾಗಿ ಆಶಾ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ."[೧೪] ಈ ಹೇಳಿಕೆಯಲ್ಲಿ ಪುರುಷ ಸಮಾಜದ ಕ್ರೌರ್ಯವನ್ನು ಗುರುತಿಸಬಹುದು. ಮಹಿಳೆಯನ್ನು ಹಿಂಸಿಸುತ್ತಾ ಆಕೆಯನ್ನು ತನ್ನ ನಿಯಂತ್ರಣದ ಪರಿಧಿಗೆ ಪಿತೃ ಸಮಾಜ ತಂದುಕೊಳ್ಳುತ್ತದೆ. ಸಮಾಜದಲ್ಲಿ ಹಿಂಸೆ ನಡೆಯುತ್ತದೆ ಎಂದರೆ ಅದು ಹೆಣ್ಣಿನ ಮೇಲೆ ಮಾತ್ರ. ಹಿಂಸೆಯ ಪ್ರಧಾನ ಗುರಿ ಮಹಿಳೆಯೆ ಆಗಿದ್ದಾಳೆ. ಮಹಿಳೆಯನ್ನು ಹಿಂಸೆಯ ಮಾಧ್ಯಮವಾಗಿಸಿಕೊಂಡು ಹೆಣ್ಣಿನಿಂದ ಹೆಣ್ಣನ್ನು ಹಿಂಸೆ ಮಾಡಲಾಗುತ್ತದೆ. ಹೀಗೆ ಮಹಿಳೆಯಿಂದ ಮಹಿಳೆಯೇ ಹಿಂಸೆಗೆ ಒಳಪಟ್ಟರೆ ಇನ್ನೊಂದು ರೀತಿಯಲ್ಲಿ ಪುರುಷನಿಂದ ಮಹಿಳೆ ಹಿಂಸೆಗೆ ಒಳಪಡುತ್ತಿದ್ದಾಳೆ. ಇದು ಪಿತೃ ಸಂಸ್ಕೃತಿಯ ಹುನ್ನಾರವಾಗಿದೆ. ಇನ್ನು ಮಹಿಳೆಯ ಮೇಲಿನ ಹಿಂಸೆಯನ್ನು ಆಶಾ ಅವರು "ಕಿಚ್ಚಿಲ್ಲದ ಬೇಗೆಯ ಏರಿಲ್ಲದ ಗಾಯದ ಸ್ವರೂಪದವು ಎಂಬುದಾಗಿ ಹೇಳುತ್ತಾರೆ."[೧೫] ಅಂದರೆ ಹಿಂಸೆ ನಡೆದರು ಅದರ

ಸುಳಿವು ಇಲ್ಲದಂತೆ ಮಾಡಲಾಗುತ್ತದೆ. ಮಹಿಳೆಯನ್ನು ಮಾನಸಿಕವಾಗಿ ಹೆಚ್ಚು ಹಿಂಸೆಗೆ ಒಳಪಡಿಸಲಾಗುತ್ತದೆ. ಹೀಗೆ ಹಿಂಸೆಗೆ ಹೆಣ್ಣಿಗೂ ಇರುವ ಸಂಬಂಧವನ್ನು ಆಶಾ ಅವರು ಶೋಧಿಸಿದ್ದಾರೆ.

ಇಂದು ಪುರುಷ ಪ್ರಧಾನ ಸಮಾಜವು ಮಹಿಳೆಯರನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಲೈಂಗಿಕತೆಯನ್ನು ಸಾಧನವನ್ನಾಗಿಸಿಕೊಂಡಿದೆ. ಅದೇ ರೀತಿ ಅತ್ಯಾಚಾರವನ್ನು ಒಂದು ಶಕ್ತವಾದ ಪರಿಣಾಮಕಾರಿಯಾದ ಆಯುಧವನ್ನಾಗಿ ಪರಿವರ್ತಿಸಿಕೊಳ್ಳಲಾಗಿದೆ. ಈಗಲೂ ಅಷ್ಟೇ ಪರಿಣಾಮಕಾರಿಯಾದ ಒಂದು ಆಯುಧವಾಗಿ ಉಳಿದಿದೆ ಎಂದು ಆಶಾ ಅವರು ಚಿಂತನೆಯ ನಿಲುವಾಗಿದೆ. ಇದಕ್ಕೆ ಗೋದ್ರಾದ ಹತ್ಯಾಕಾಂಡವನ್ನು ವಿವರಿಸುತ್ತಾರೆ. ಈ ಘಟನೆಯಲ್ಲಿ ಹೆಣ್ಣು ಮಕ್ಕಳನ್ನು ವಿವಸ್ತ್ರಗೊಳಿಸಿ ಚಿತ್ರೀಕರಣ ಮಾಡಲಾಯಿತು. ಈ ಎಲ್ಲಾ ಹಿಂಸೆಯ ಮಾದರಿಗಳು ಹೆಣ್ಣಿನ ಮಟ್ಟಿಗೆ ಇದೊಂದು ಬಲವಂತದ ಆಕ್ರಮಣ ಕ್ರಿಯೆಯಾಗಿದೆ. ಹೆಣ್ಣನ್ನು ಭಾವನಾತ್ಮವಾಗಿ, ಮಾನಸಿಕವಾಗಿ ಕುಗ್ಗಿಸಿ ಅಭದ್ರತೆಯ ಸ್ಥಿತಿಗೆ ತಳ್ಳುವ ಹುನ್ನಾರ ಈ ಹಿಂಸೆಯ ಹಿಂದಿರುವ ತಂತ್ರವಾಗಿದೆ.

ಮಹಿಳೆಯ ಲೈಂಗಿಕತೆಗೆ ದೊಡ್ಡ ಪಾವಿತ್ರ್ಯದ ಸ್ಥಾನವನ್ನು ಸೃಷ್ಟಿಸಿ, ಅದರಾಚೆಗಿನ ಸಾಮಾಜಿಕ ಬದುಕೆ ಇಲ್ಲವೆನ್ನುವಷ್ಟು ಪುರುಷ ಸಮಾಜ ಉಪಾಯವನ್ನು ಹುಟ್ಟುಹಾಕಿದೆ. ಇದರಿಂದ ಮಹಿಳಾ ಅಸ್ತಿತ್ವವನ್ನು ಸಾಮಾಜಿಕವಾಗಿ ನಾಶಮಾಡಲಾಗುತ್ತಿದೆ. ಇದರ ಭಾಗವಾಗಿಯೇ ಸಮಾಜದಲ್ಲಿ ಮಹಿಳೆ ಮೇಲೆ ನಡೆಯುವ ಹಿಂಸೆಗೂ, ಮಹಿಳೆಗೂ ಇರುವ ಸಂಬಂಧವನ್ನು ಗುರುತಿಸಿದ್ದಾರೆ. ಆ ಮೂಲಕ ಪುರುಷ ಸಮಾಜದ ತಂತ್ರಗಾರಿಕೆಯನ್ನು ಆಶಾದೇವಿ ಶೋಧಿಸುತ್ತಿದ್ದಾರೆ. ಇವೆಲ್ಲದರ ಮೂಲಕ ಕುಟುಂಬದ ಹೊರಗೆ ಮತ್ತು ಒಳಗೆ ಪುರುಷ ಸಮಾಜವು ಮಹಿಳೆಯ ಚಹರೆಯನ್ನು ಹತ್ತಿಕ್ಕುತ್ತಿದೆ. ಇದರ ಹಿಂದಿರುವ ಹುನ್ನಾರವನ್ನು, ತಂತ್ರವನ್ನು, ದಿಗ್ಬಂಧನಗಳ ಸ್ವರೂಪವನ್ನು ಶೋಧಿಸುವ ಚಿಂತನೆ ಆಶಾದೇವಿಯವರದಾಗಿದೆ. ಈ ಎಲ್ಲಾ ಕಾರ್ಯ ಮಾದರಿಗಳನ್ನು ಪರಂಪರೆಯ ಮೂಲಕ ಗುರುತಿಸಿ ತಮ್ಮ ಸ್ತ್ರೀವಾದಿ ದೃಷ್ಟಿಕೋನದ ಮೂಲಕ ವಿಶ್ಲೇಷಣೆಗೆ ಒಳಪಡಿಸುತ್ತಾರೆ. ಇದರ ಭಾಗವಾಗಿಯೇ ಸ್ತ್ರೀವಾದವನ್ನು ವಿಸ್ತರಿಸುತ್ತಾರೆ. ಇಂದಿನ ಮಹಿಳೆಯ ನಿಜವಾದ ವಸ್ತು ಸ್ಥಿತಿಯನ್ನು ಈ ಎಲ್ಲದರ ಮೂಲಕ ಆಶಾದೇವಿ ನಮ್ಮ ಮುಂದಿಡುತ್ತಿದ್ದಾರೆ. ಮಹಿಳೆಯ ಸ್ಥಾನಮಾನಗಳು ಬದಲಾಗಬೇಕೆಂಬುದೇ ಇದೆಲ್ಲದರ ಹಿಂದಿರುವ ಮುಖ್ಯ ಉದ್ದೇಶವಾಗಿದೆ. ಇದು ಆಶಾದೇವಿಯವರ ಪ್ರಬಲವಾದ ಹಕ್ಕೊತ್ತಾಯ ಕೂಡ ಆಗಿದೆ. ಈ ಉದ್ದೇಶದಿಂದಲೇ ಸ್ತ್ರೀವಾದವನ್ನು ಪ್ರಬಲವಾಗಿ ಕಟ್ಟಿ ಬೆಳೆಸುತ್ತಿದ್ದಾರೆ. ಹಲವಾರು ಚಳುವಳಿಗಳ ಮೂಲಕ, ಬರವಣಿಗೆಯ ಮೂಲಕ ಪ್ರಸ್ತುತ ಪ್ರಜ್ಞಾವಂತ ಮಹಿಳೆಯರಲ್ಲಿ ಜಾಗೃತಿ ಮೂಡಿಸಲು ಪ್ರಯತ್ನಿಸುತ್ತಿದ್ದಾರೆ. ಇದರ ಭಾಗವಾಗಿಯೇ ಆಶಾದೇವಿಯವರ ಸ್ತ್ರೀವಾದಿ ಬರವಣಿಗೆಗಳು ಇಂದು ಹೆಚ್ಚಿನ ಮಹತ್ವ ಪಡೆದುಕೊಳ್ಳುತ್ತಿವೆ.

**ಕೊನೆ ಟಿಪ್ಪಣಿಗಳು**

೧. ಆಶಾದೇವಿ ಎಂ.ಎಸ್., 'ಸ್ತ್ರೀವಾದಿ ವ್ಯಾಖ್ಯಾನ-ಅಖ್ಯಾನದ ಸಖೀಗೀತ', ಪು. ೨

೨. ಆಶಾದೇವಿ ಎಂ.ಎಸ್., 'ಸಾಲುಗಳ ನಡುವೆ ಓದಿದರೆ', ಪು. ೨

೩. ಅದೇ, ಪು. ೨

೪. ಆಶಾದೇವಿ ಎಂ.ಎಸ್., 'ಪಿತೃ ಸಂಸ್ಕೃತಿಯ ಸ್ವಯಂದತ್ತ ಧಿಮಾಕು ಧಿಕ್ಕರಿಸುತ್ತಾ', ಪು. ೨

೫. ಅದೇ, ಪು. ೨

೬. ಅದೇ, ಪು. ೨

೭. ಆಶಾದೇವಿ ಎಂ.ಎಸ್., 'ದ್ರೋಪ್ದಿ ಎಂಬ ಅಗ್ನಿಕನ್ಯೆ', ಪು. ೨

೮. ಅದೇ, ಪು. ೨

೯. ಆಶಾದೇವಿ ಎಂ.ಎಸ್., ' ಬಿಡುಗಡೆಯೆಂಬುದುಂಟೇ ಹೇಳಾ ಕೆಳದಿ', ಪು. ೨

೧೦. ಆಶಾದೇವಿ ಎಂ.ಎಸ್., ಸ್ತ್ರೀ ಮತವನುತ್ತರಿಸಲಾಗದೆ?, ಪು. ೮೪

೧೧. ಅದೇ, ಪು. ೯೧

೧೨. ಆಶಾದೇವಿ ಎಂ.ಎಸ್., 'ಸಾಲುಗಳ ನಡುವೆ ಓದಿದರೆ', ಪು. ೨

೧೩. ಆಶಾದೇವಿ ಎಂ.ಎಸ್., ಸ್ತ್ರೀ ಮತವನುತ್ತರಿಸಲಾಗದೆ?, ಪು. ೧೨೪

೧೪. ಅದೇ, ಪು. ೧೨೪

೧೫. ಅದೇ, ಪು. ೧೨೪

*****

## ಅಧ್ಯಾಯ–ಐದು

# ಆಶಾದೇವಿ ಚಿಂತನೆ: ಪ್ರತಿರೋಧ ನೆಲೆಯ ಆಯಾಮಗಳು

**ಶಿ.ಗ.ಪ್ರವೇಶ**

ಪ್ರಸ್ತುತ ಅಧ್ಯಾಯದಲ್ಲಿ ಪುರುಷ ಸಮಾಜದ ದೌರ್ಜನ್ಯದ ವಿರುದ್ಧ ಮಹಿಳೆಯು ಹೇಗೆ ಪ್ರತಿಕ್ರಿಯಿಸಿದ್ದಾಳೆ ಮತ್ತು ಹೇಗೆ ಪ್ರತಿಭಟನೆ ನಡೆಸಿದ್ದಾಳೆ ಎಂಬುದನ್ನು ಆಶಾದೇವಿಯವರ ಲೇಖನಗಳ ಮೂಲಕ ಚರ್ಚಿಸಲಾಗಿದೆ. ಇಲ್ಲಿ ಪ್ರತಿರೋಧ ಎಂದರೆ ಇನ್ನೊಂದು ನೆಲೆಯಲ್ಲಿ ಪ್ರತಿಭಟನೆಯೇ ಆಗಿದೆ. ಹೀಗೆ ಪಿತೃ ಸಮಾಜದ ದಬ್ಬಾಳಿಕೆಯ ವಿರುದ್ಧ ನೇರ ಮತ್ತು ಪರ್ಯಾಯ ದಾರಿಗಳನ್ನು ಸೃಷ್ಟಿಸಿಕೊಳ್ಳುವುದು ಅಥವಾ ಪ್ರತಿಭಟನೆ ಮಾಡುವುದು ಪ್ರತಿರೋಧವಾಗಿದೆ. ಅಂದರೆ ಸ್ತ್ರೀಯರು ಪ್ರತಿಕ್ರಿಯೆ ನೀಡುವ ಮೂಲಕ ಹೋರಾಡುವುದು.

ಸಮಾಜದಲ್ಲಿರುವ ಪ್ರತಿಯೊಂದು ಜೀವಿಯಲ್ಲಿಯೂ ಕ್ರಿಯೆ ಮತ್ತು ಪ್ರತಿಕ್ರಿಯೆಗಳು ಇರುತ್ತವೆ. ಅದೇ ರೀತಿ ಪುರುಷ ಸಮಾಜದ ದಬ್ಬಾಳಿಕೆ, ದೌರ್ಜನ್ಯಕ್ಕೆ ವಿರುದ್ಧವಾಗಿ ಮಹಿಳೆಯರು ಅನಾದಿಕಾಲದಿಂದಲೂ ಪ್ರತಿಭಟನೆ ನಡೆಸುತ್ತ ಬಂದಿದ್ದಾರೆ. ಮಹಿಳಾ ಪ್ರತಿಭಟನೆಯ ಚರಿತ್ರೆಯು ವಿಸ್ತಾರವಾದುದು ಮತ್ತು ಆಳವಾದುದು. ಆದರೆ ಪುರುಷ ಸಮಾಜವು ಮಹಿಳಾ ಪ್ರತಿರೋಧಕ್ಕೆ ಶಕ್ತಿ ಇಲ್ಲವೆನ್ನುವಷ್ಟು ತಂತ್ರಗಾರಿಕೆಯಿಂದ ಮುಚ್ಚಿಹಾಕುವ ಪ್ರಯತ್ನವನ್ನು ಮೊದಲಿನಿಂದಲೂ ವ್ಯವಸ್ಥಿತವಾಗಿ ಮಾಡುತ್ತಲೇ ಬಂದಿದೆ. ಪುರುಷರು ಮಹಿಳೆಯರಿಗೆ ವಿಧಿಸಿದ ಸಾಮಾಜಿಕ, ಕೌಟುಂಬಿಕ ನಿರ್ಬಂಧಗಳನ್ನು ವಿರೋಧಿಸಲು ಹಲವಾರು ಪರ್ಯಾಯವಾದ ಮತ್ತು ನೇರವಾದ ಮಾರ್ಗಗಳನ್ನು ಸ್ವತಃ ಹುಟ್ಟುಹಾಕಿಕೊಂಡಿದ್ದಾರೆ. ಹೀಗೆ ಪ್ರತಿರೋಧ ವ್ಯಕ್ತಪಡಿಸಲು ಸ್ವತಂತ್ರ ಅವಕಾಶ ಇಲ್ಲದಿರುವ ಕಾಲದಲ್ಲಿಯೂ ಭಕ್ತಿಯ ಮೂಲಕ ಪ್ರತಿಕ್ರಿಯೆ ನೀಡಿದ್ದಾರೆ.

ಈ ಪ್ರತಿರೋಧ ಎನ್ನುವುದು ಕೂಡ ಮಹಿಳೆಗೆ ಅಷ್ಟು ಸುಲಭವಾಗಿ ಸಾಧ್ಯವಾಗುವಂತಹದ್ದಲ್ಲ. ಆಕೆಯು ತನ್ನ ಅಧೀನತೆಯ ಬಗ್ಗೆ ಜಾಗೃತಗಳಾಗಿ ಪ್ರತಿರೋಧದ ಆಯಾಮಗಳನ್ನು ತೆಗೆದುಕೊಂಡರೂ ಆಕೆಯ ಎಲ್ಲಾ ಪ್ರತಿಭಟನಾತ್ಮಕ ನೆಲೆಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಹತ್ತಿಕ್ಕಲಾಗುತ್ತಿದೆ. ಅಂದರೆ ಮಹಿಳೆಯರು ನಡೆಸುವ ಪ್ರತಿಭಟನೆಗಳಿಗೆ ಯಾವುದೇ ಸೂಕ್ತವಾದ ಅವಕಾಶ, ಆವರಣಗಳು ಸಿಗುವುದಿಲ್ಲ. ಆಕೆಯು ಎಷ್ಟೇ ಹೋರಾಟ ಮಾಡಿದರೂ ಅವುಗಳಲ್ಲಿ ಯಶಸ್ಸುಗಳಿಸುವುದು ಸುಲಭ ಸಾಧ್ಯವಿಲ್ಲ. ಮುಖ್ಯವಾಗಿ ನೋಡುವುದಾದರೆ ಇಂದಿನ ಸಮಕಾಲೀನ ಸಮಾಜದಲ್ಲಿ ದಲಿತರು ಮತ್ತು ಮಹಿಳೆಯರು ಅಧೀನ ನೆಲೆಯಲ್ಲಿಯೇ ಇದ್ದಾರೆ. ಇದು ಕಣ್ಣಿಗೆ ಕಾಣುತ್ತಿರುವ ಕಟು ಸತ್ಯವಾಗಿದೆ. ಆದ್ದರಿಂದ ದಲಿತರು ಹಾಗೂ ಮಹಿಳೆಯರು ಒಂದೇ ದೋಣಿಯ ಪಯಣಿಗರು ಎಂದೇ ಹೇಳಬಹುದು. ಇವರಿಬ್ಬರ ಹೋರಾಟವು ಒಂದೇ ಆಗಿದ್ದರೂ ತಲುಪಬೇಕಾಗಿರುವ ಗುರಿ–ಧ್ಯೇಯೋದ್ದೇಶಗಳು ಮಾತ್ರ ಬೇರೆ. ಆದರೆ ದಲಿತರ ಸ್ಥಾನಮಾನ ಮಹಿಳೆಯರ ಸ್ಥಾನಮಾನ ಬೇರೆ ಬೇರೆ ಆದರು ಕೂಡ ಇವರಿಬ್ಬರು ತುಳಿತಕ್ಕೊಳಗಾಗಿರುವುದು ಸಮಾನ ನೆಲೆಯಲ್ಲಿಯೇ ಇದೆ. ಇವರನ್ನು ಸಮಾನ ದುಃಖಿಗಳು ಎಂದು ಕರೆಯಬಹುದು. ಆದರೆ ದಲಿತರು ತಮ್ಮ ಸ್ಥಾನಮಾನ, ಶೋಷಣೆಯ

ವಿರುದ್ಧ ಹೋರಾಟ ಮಾಡಿದರೆ ಅವರಿಗೆ ಸಿಗುವ ಯಶಸ್ಸು, ಆ ಹೋರಾಟಗಳಿಗೆ ಸಿಗುವ ಪ್ರಾಧಾನ್ಯತೆ ಇಂದು ಮಹಿಳೆಯರು ಮಾಡುವ ಹೋರಾಟಗಳಿಗೆ ಸಿಗುವುದಿಲ್ಲ. ಈ ಹೋರಾಟ ಎನ್ನವುದು ದಲಿತರು ಮತ್ತು ಮಹಿಳೆಯರ ಮಟ್ಟಿಗೆ ಒಂದೇ. ಆದರೆ ಆದ್ಯತೆಗಳು ಮಾತ್ರ ಬೇರೆ ಬೇರೆಯಾಗಿವೆ. ಆದರೂ ದಲಿತರು ಹಾಗೂ ಮಹಿಳೆಯರ ಹೋರಾಟಗಳಿಗೂ ಒಂದು ರೀತಿಯ ಅಂತರ್ ಸಂಬಂಧವಿದೆ. ಇಲ್ಲಿ ಮಹಿಳೆಯು ತನ್ನ ಅಸ್ತಿತ್ವ, ಸ್ವಾತಂತ್ರ್ಯ, ಹಕ್ಕು ಬಾಧ್ಯತೆಗಳಿಗೆ ಹೋರಾಟ ನಡೆಸುತ್ತಾಳೆ. ದಲಿತರು ಸಮಾನ ಸ್ಥಾನಮಾನ, ಸಾಮಾಜಿಕ ಅವಕಾಶಗಳಿಗೆ ಹೋರಾಟ ನಡೆಸುತ್ತಾರೆ. ಆದರೆ ಮಹಿಳೆಯ ಹೋರಾಟದ ಹಾದಿ ಬಹಳ ದುರ್ಗಮವಾದುದು. ಮಹಿಳೆಯ ಚಲನೆಗಳಿಗೆ ಮಾನ್ಯತೆ ಸಿಗುವುದು ಇಂದಿನ ಪುರುಷ ಪ್ರಧಾನ ಸಮಾಜದಲ್ಲಿ ಬಹಳ ಕಠಿಣವಾಗಿದೆ. ದಲಿತರಿಗೂ ಮತ್ತು ಮಹಿಳೆಯರಿಗೂ ಪ್ರತಿರೋಧ ಎನ್ನುವುದು ಸಮಾನ ನೆಲೆಯಲ್ಲಿಯೆ ಇದೆ. ಆದರೆ ಆಕೆ ಮಹಿಳೆ ಎನ್ನುವುದು ಅಷ್ಟೆ ಸಾಕು, ಆಕೆ ನಡೆಸುವ ಯಾವ ಹೋರಾಟಗಳು ಪಲ್ಲಟಗಳನ್ನು ಪಡೆಯುವುದಿಲ್ಲ. ಮಹಿಳೆ ಮಾಡುವ ಪ್ರತಿರೋಧವನ್ನು ವಿವಿಧ ಕುತಂತ್ರಗಳ ಮೂಲಕ ಹತ್ತಿಕ್ಕುತ್ತ ಬರಲಾಗಿದೆ. ಆಕೆಗೆ ಆ ಕ್ಷಣದಲ್ಲಿ ಎಲ್ಲಾ ಅವಕಾಶಗಳನ್ನು ಕೊಟ್ಟಂತೆ ಮಾಡಿ ಸಮಾಜ ನಾಟಕೀಯವಾಗಿ ನಟಿಸುತ್ತದೆ. ಇನ್ನು ಮುಖ್ಯವಾಗಿ ಮಹಿಳೆಯರು ದಲಿತರಲ್ಲಿಯೂ ಇದ್ದಾರೆ. ಅಲ್ಲಿಯೂ ಮಹಿಳೆ ಶೋಷಿತ ಕೇಂದ್ರದಲ್ಲಿಯೇ ಇದ್ದಾಳೆ. ಇದು ಮಹಿಳೆಯ ಸವಾಲು ಅಷ್ಟು ಸುಲಭವಾಗಿಲ್ಲ ಎಂಬ ವಾಸ್ತವವನ್ನು ತಿಳಿಸುತ್ತದೆ. ಮಹಿಳೆಯ ಸ್ಥಾನಮಾನ ಸಾರ್ವತ್ರಿಕವಾಗಿ ಸಮಾನ ನೆಲೆಯಲ್ಲಿ ಇದೆ ಎಂಬುದು ಇದರಿಂದ ಕಂಡುಬರುತ್ತದೆ. ದಲಿತರು ಕೇವಲ ಉನ್ನತ ವರ್ಗದವರಿಂದ ಶೋಷಣೆಗೆ ಒಳಗಾದರೆ, ಮಹಿಳೆಯು ಇಡೀ ಪುರುಷ ವ್ಯವಸ್ಥೆಯಿಂದ ಅನ್ಯಾಯಕ್ಕೊಳ್ಳಗಾಗಿದ್ದಾಳೆ. ಆದ್ದರಿಂದ ದಲಿತರ ಹೋರಾಟ ಕೇವಲ ಒಂದು ನೆಲೆಗೆ ಮೀಸಲಾದರೆ, ಮಹಿಳೆಯ ಹೋರಾಟವು ಪುರುಷ ಪ್ರಧಾನ ವ್ಯವಸ್ಥೆಯ ಎಲ್ಲಾ ಕಾರ್ಯ ಕ್ಷೇತ್ರಗಳಿಗೆ ಮೀಸಲಾಗಿದೆ ಎಂದು ಹೇಳಬಹುದು. ಹಾಗಾಗಿ ಮಹಿಳೆಯ ಹೋರಾಟ ದಲಿತರ ಹೋರಾಟಕ್ಕಿಂತ ಆಳವಾದುದ್ದು ಮತ್ತು ಕಠಿಣವಾದುದು.

ಆದರೂ ಪ್ರತಿಕಾಲದಲ್ಲಿ ಮಹಿಳೆಯರು ಬೇರೆ ಬೇರೆ ಅಸ್ತ್ರಗಳನ್ನು ಪ್ರತಿಭಟನೆ ಮಾಡಲು ಬಳಸಿದರು. ಪ್ರಾಚೀನ ಕಾಲದಲ್ಲಿ ವೈಚಾರಿಕತೆಯ ಸ್ಪಷ್ಟ ಪರಿಕಲ್ಪನೆ ಇಲ್ಲದ ಕಾಲದಲ್ಲಿ ಭಕ್ತಿಯನ್ನು ತಮ್ಮ ಮೂಲ ಸಾಧನವನ್ನಾಗಿ ಮಾಡಿಕೊಂಡರು. ಹೀಗೆ ವೈಚಾರಿಕ ಪ್ರಜ್ಞೆ, ಹೋರಾಟದ ಪ್ರಜ್ಞೆ, ಪ್ರಾಚೀನ ಕಾಲದ ಮಹಿಳೆಯರಿಗೆ ಪ್ರತಿಭಟನಾ ವಿಧಾನಗಳು ಇಲ್ಲದೆ ಇದ್ದ ಕಾಲದಲ್ಲಿ ಬೇರೆ ಬೇರೆ ವಿಧಾನಗಳನ್ನು ಆಶಾದೇವಿಯವರು ಪರಂಪರೆಯ ಮೂಲಕ ತಾಳ್ಮೆಯಿಂದ ಶೋಧಿಸುತ್ತಿದ್ದಾರೆ. ಈ ಮಹಿಳಾ ಪ್ರತಿಭಟನೆಯನ್ನು ಕುರಿತಂತೆ ಆಶಾ ಅವರು ಹೀಗೆ ಹೇಳುತ್ತಾರೆ. "ಪ್ರತಿಭಟನೆಯು ಜೀವಿಗಳ ಮೂಲ ಸ್ವಭಾವದಲ್ಲಿ ಒಂದು ಎನ್ನುವುದು ಸತ್ಯದ ಒಂದು ಮುಖವಾದರೆ ಇನ್ನೊಂದು ಮುಖವು ಪ್ರತಿಭಟನೆಯನ್ನು ದಮನಿಸುವಲ್ಲಿ ಸತತವಾಗಿ ಕಾರ್ಯಶೀಲವಾಗಿರುತ್ತದೆ."[೧]

ಈ ಹೇಳಿಕೆಯನ್ನು ಗಮನಿಸಿದರೆ ಪ್ರತಿಜೀವಿಯಲ್ಲಿಯೂ ಪ್ರತಿಭಟನೆ ಮಾಡುವ ಶಕ್ತಿ ಇರುವಂತೆಯೇ ಅದನ್ನು ದಮನಿಸುವ ಶಕ್ತಿ ಕೂಡ ಇರುತ್ತದೆ. ಆದ್ದರಿಂದ ಪುರುಷ ಸಮಾಜವು ಮಹಿಳಾ ಪ್ರತಿಭಟನೆಯು ವಿಸ್ತಾರಗೊಳ್ಳದಂತೆ, ಪ್ರಬಲಗೊಳ್ಳದಂತೆ ಚರಿತ್ರೆಯಿಂದಲೂ ಹತ್ತಿಕ್ಕುತ್ತಾ ಬಂದಿದೆ. ಈ ಮೂಲಕ ಆಶಾ ಅವರು ಮಾನವನಲ್ಲಿರುವ ಸಹಜವಾದ ಎರಡು ವಿರುದ್ಧ ಗುಣಗಳನ್ನು

ಗುರುತಿಸಿಸುತ್ತಾರೆ. ಮಹಿಳಾ ಪ್ರತಿರೋಧದ ನೆಲೆಯನ್ನು ನಾಶಮಾಡಲು ಪುರುಷ ವ್ಯವಸ್ಥೆಯು ಹೊಸ ಹೊಸ ತಂತ್ರಗಳನ್ನು ರೂಪಿಸುತ್ತಲೆ ಇರುತ್ತದೆ. ಅಂದರೆ ಪ್ರತಿಭಟನೆಯು ಹೆಣ್ಣಿನ ಮಟ್ಟಿಗೆ ಅಸಹಜ ಎನ್ನುವ ರೀತಿಯಲ್ಲಿ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುತ್ತಾ ಬಂದಿದೆ. ಈ ಮೂಲಕ ಮಹಿಳಾ ಹೋರಾಟಕ್ಕೆ ಸ್ಪಷ್ಟತೆ ಮತ್ತು ನಿರ್ದಿಷ್ಟ ಆಕಾರಗಳು ಬರದಂತೆ ತಡೆಯುತ್ತದೆ. ಪಾಲಿಗೆ ಬಂದ ಪಂಚಾಮೃತ, ಕ್ಷಮಯಾಧರಿತ್ರಿ, ಮಾದರಿ ಮಹಿಳೆ ಇಂತಹ ಹಲವು ಮನೋವಿನ್ಯಾಸಗಳನ್ನು ರೂಪಿಸಿ, ಸ್ಥಾಪಿಸುವುದರ ಮೂಲಕ ಪ್ರತಿರೋಧದ ಶಕ್ತಿ ಸಾಧ್ಯತೆಗಳೆರಡನ್ನು ಕುಗ್ಗಿಸುತ್ತಲೇ ಬಂದಿದೆ. ಆದ್ದರಿಂದ ಹೆಣ್ಣಿನ ಪ್ರತಿರೋಧದ ನೆಲೆಗಳು ಸ್ಪಷ್ಟತೆ ಇಲ್ಲದೆ ಅಮೂರ್ತವಾಗುವುದು ಈ ಕಾರಣದಿಂದಲೇ. ಇದರಿಂದ ಮಹಿಳಾ ಹೋರಾಟಕ್ಕೆ ಇತಿಹಾಸದಲ್ಲಿ ಸ್ಪಷ್ಟ ಪುರಾವೆಗಳಾಗಲಿ, ಅಧಿಕೃತತೆಯಾಗಲಿ ಸಿಕ್ಕಿರುವುದು ಕಡಿಮೆ. ಈ ಕಾರಣಕ್ಕೆ ಮಹಿಳಾ ಪ್ರತಿಭಟನೆಯನ್ನು ಕುರಿತಂತೆ ಆಶಾ ಅವರು "ಮಹಿಳಾ ಪ್ರತಿಭಟನೆಯನ್ನು ಬಹುಪಾಲು ಸಂದರ್ಭಗಳಲ್ಲಿ ನಾವು ಪ್ರಯತ್ನ ಪೂರ್ವಕವಾಗಿ ಕಟ್ಟಿಕೊಳ್ಳಬೇಕಾಗಿರುವುದು, ಬಿಡಿ-ಬಿಡಿಯಾದ ಕೊಂಡಿಗಳನ್ನು ಜೋಡಿಸಿಕೊಂಡು ನಾವು ಇದನ್ನು ಪುನರ್ ರಚಿಸಬೇಕಾಗಿದೆ ಎಂದು ಹೇಳುತ್ತಾರೆ."[೨]

ಇಂದಿನ ವಾಸ್ತವದಲ್ಲಿ ಮಹಿಳಾ ಹೋರಾಟವನ್ನು ಮುನ್ನೆಲೆಗೆ ತರುವ ಸಲುವಾಗಿಯೇ ಈ ಮೇಲೆ ಹೇಳಿದ ಎರಡು ಕಾರ್ಯಗಳನ್ನು ಸಾಧಿಸಬೇಕು ಎಂಬುದು ಲೇಖಕಿಯ ಅಭಿಪ್ರಾಯವಾಗಿದೆ. ಹಾಗೆಯೇ ಮಹಿಳಾ ಹೋರಾಟಕ್ಕೆ ಬೇಕಾದ ಒತ್ತಡಗಳನ್ನು ಹೇಳುತ್ತಾ, ಆ ಹೋರಾಟಕ್ಕೆ ಬೇಕಾದ ತಂತ್ರಗಳನ್ನು ಕೂಡ ರೂಪಿಸುತ್ತಾರೆ.

ಮಹಿಳಾ ಹೋರಾಟವು ಅನಾದಿಕಾಲದಿಂದಲೂ ವೈಫಲ್ಯ ಕಾಣುತ್ತಿರುವುದಕ್ಕೆ ಆಶಾ ಅವರು ಹೀಗೆ ಹೇಳುತ್ತಾರೆ: "ಮಹಿಳಾ ಪ್ರತಿಭಟನೆಯ ಇತಿಹಾಸವನ್ನು ಚರ್ಚಿಸುವಾಗೆಲ್ಲಾ ಸಿಮೋನ್ ದಿ ಬೋವಾ ಹೇಳುವ 'ಸಂಘಟನೆಯ ಕೊರತೆ'ಯ ಕಾರಣವು ಸಂದೇಹವಿಲ್ಲದಂತೆ ಈ ಕಾಲದ ಮಟ್ಟಿಗೆ ಸಾಬೀತಾಗುತ್ತದೆ"[೩] ಅಂದರೆ ಸಂಘಟನೆಯ ಶಕ್ತಿ, ಹೊಂದಾಣಿಕೆಯ ಶಕ್ತಿ, ಹೊಂದಾಣಿಕೆಯ ಪ್ರಜ್ಞೆ ಮಹಿಳೆಯರಿಗೆ ಇಲ್ಲ. ಯಾವುದೇ ಹೋರಾಟಕ್ಕೆ ಸಂಘಟನೆ, ಒಗ್ಗಟ್ಟು ಇರಬೇಕು. ಮಹಿಳೆಯರಲ್ಲಿ ಆ ಪ್ರಜ್ಞೆ ಇನ್ನು ಜಾಗೃತಗೊಂಡಿಲ್ಲ. ಆದ್ದರಿಂದಲೇ ಮಹಿಳಾ ಹೋರಾಟವು ವಿಫಲತೆಯನ್ನು ಕಾಣುತ್ತಿದೆ. ಮಹಿಳೆಯರಿಗೆ ಪ್ರತಿರೋಧದ ಶಕ್ತಿ, ಬುದ್ಧಿವಂತಿಕೆ ಇಲ್ಲದಿರುವುದರಿಂದಲೇ ಹೆಚ್ಚು ಶೋಷಣೆಗೆ ಒಳಗಾಗುತ್ತಿದ್ದಾರೆ ಎನ್ನುವುದು ಆಶಾ ಅವರ ವಾದವಾಗಿದೆ.

ಇಂದು ಮಹಿಳಾ ಪ್ರತಿಭಟನೆಯ ಶಕ್ತಿಯು ಹೆಚ್ಚು ಜಾಗೃತಗೊಳ್ಳುತ್ತಿದೆ. ಆದ್ದರಿಂದಲೇ ಉಪಾಯಗಾರಿಕೆಯ ಮೂಲಕ, ನೇರವಾಗಿ ಸೆಣಸುವ ಮೂಲಕ, ಜೀವಪರವಾದ ಮೌಲ್ಯಗಳಿಗೆ ಮಾನವೀಯತೆಗಾಗಿ ನಡೆಯುತ್ತದೆ. ಈ ಎಲ್ಲಾ ಪ್ರತಿಭಟನೆಯ ಮೂಲಕ ಮಹಿಳೆಯರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇದಕ್ಕೆ ಆಶಾ ಅವರು ತಮ್ಮ ಚಿಂತನೆಯ ಮೂಲಕ ಮಹಿಳಾ ಪ್ರತಿಭಟನೆಯ ಹಾದಿಗೆ ವಿಸ್ತಾರವಾದ ವ್ಯಾಪ್ತಿಯನ್ನು ದೊರಕಿಸಿಕೊಡುತ್ತಾರೆ.

### ೫.೨ ನೇರ ಪ್ರತಿಭಟನಾ ನೆಲೆಯ ಚಿಂತನೆಗಳು

ಮಹಿಳೆಯರು ತಮ್ಮ ಹಕ್ಕುಗಳಿಗೆ, ಅಸ್ತಿತ್ವಕ್ಕೆ ನಡೆಸಿದ ನೇರ ಪ್ರತಿಭಟನಾ ನೆಲೆಗಳು ಪ್ರಾಚೀನ ಕಾಲದಿಂದಲೂ ಜಾರಿಯಲ್ಲಿವೆ. ಇದಕ್ಕೆ ಪುಷ್ಟಿಯೆಂಬಂತೆ ವಚನ ಸಾಹಿತ್ಯದಲ್ಲಿಯೂ ಹಲವಾರು ಆಧಾರಗಳು ದೊರೆಯುತ್ತವೆ. ಆಧುನಿಕ ಮಹಿಳಾ ವಾದಿಗಳು ಕೂಡ ಇಂದಿನ ಪುರುಷ ಸಮಾಜದ ಅನ್ಯಾಯ, ಲಿಂಗ ಅಸಮಾನತೆ, ದೌರ್ಜನ್ಯದ ವಿರುದ್ಧ ಬೀದಿಗಿಳಿದು ಘೋಷಣೆ ಕೂಗುವ ಮೂಲಕ ನೇರ ಪ್ರತಿರೋಧದ ವಿಧಾನಗಳನ್ನು ಅನುಸರಿಸುತ್ತಿದ್ದಾರೆ. ಇದರ ಭಾಗವಾಗಿ ಇಂದು ಅನೇಕ ಮಹಿಳಾ ಚಳುವಳಿಗಳು, ಮಹಿಳಾಪರ ಸಂಘಗಳು ಹುಟ್ಟಿಕೊಂಡಿವೆ. ಇಂದಿನ ಪ್ರಸ್ತುತ ಸಮಾಜದಲ್ಲಿ ಆಧುನಿಕ ಸ್ತ್ರೀವಾದಿಗಳು ಕೂಡ ತಮ್ಮ ಹರಿತವಾದ ಬರವಣಿಗೆಯ ಮೂಲಕ ಪಿತೃವ್ಯವಸ್ಥೆಯ ವಿರುದ್ಧ ದನಿಯೆತ್ತಿದ್ದಾರೆ. ಈ ಹೋರಾಟಕ್ಕೆ ಬೆಂಬಲ ಕೊಡುವ ಉದ್ದೇಶದಿಂದಲೇ ಹಲವಾರು ಸ್ತ್ರೀವಾದಿ ನೆಲೆಗಳನ್ನು ಪರಂಪರೆಯಿಂದಲೂ ಗುರುತಿಸುವ, ಶೋಧಿಸುವ ಪ್ರಯತ್ನಕ್ಕೆ ತೊಡಗಿದ್ದಾರೆ. ಅವರಲ್ಲಿ ಆಶಾದೇವಿ ಕೂಡ ಒಬ್ಬರಾಗಿದ್ದಾರೆ. ಅವರ ಬರಹಗಳ ಮೂಲಕ ಮಹಿಳೆಯರ ನೇರ ಪ್ರತಿಭಟನಾ ಹೋರಾಟವನ್ನು ಈ ಕೆಳಕಂಡಂತೆ ಚರ್ಚಿಸಲಾಗಿದೆ.

#### ೫.೨.೧.ಪಿತೃಸಂಸ್ಕೃತಿಯ ಸ್ಥಾಪಿತ ಮೌಲ್ಯಗಳ ವಿರೋಧಿ ನೆಲೆ

ವಚನ ಸಾಹಿತ್ಯದ ಮೂಲಕ ಮಹಿಳೆಯರು ಒಂದು ದೊಡ್ಡ ಕ್ರಾಂತಿಯನ್ನೇ ಮಾಡಿದ್ದಾರೆ. ಈ ನೇರ ಮಾದರಿಗಳನ್ನು ನೀಲಮ್ಮ, ಅಕ್ಕಮಹಾದೇವಿ ವಚನಗಳ ಮೂಲಕ ಅವರು ಹುಟ್ಟುಹಾಕಿದ ಸ್ತ್ರೀವಾದಿ ಚಿಂತನೆಯನ್ನು, ಮಹಿಳಾ ಅಸ್ಮಿತೆಯನ್ನು, ಮಹಿಳಾ ಚಹರೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಇದರಿಂದ ಹಿಂದಿನಿಂದಲೂ ಮಹಿಳೆಯರು ನಡೆಸಿದ ಪ್ರತ್ಯಕ್ಷ ಹೋರಾಟದ ನೆಲೆಗಳನ್ನು ಗುರುತಿಸಬಹುದು. ಈ ಮುಖಾಂತರವಾಗಿ ಆಶಾ ಅವರು ಸಮಾಜದಲ್ಲಿ ಮಹಿಳೆಯನ್ನು ಕಂಡಿರುವ ಮತ್ತು ಕಾಣುತ್ತಿರುವ ಒಳ ವಿನ್ಯಾಸಗಳನ್ನು ಒಡೆಯುವ ಭಾಗವಾಗಿ ನೀಲಮ್ಮನ ವಚನಗಳನ್ನು ಆಶಾ ಚರ್ಚೆಗೆ ಒಳಪಡಿಸುತ್ತಾರೆ. ಇದರ ಮೂಲಕ ಪುರುಷ ವ್ಯವಸ್ಥೆಯು ಕಟ್ಟಲಾಗಿರುವ ಸ್ಥಾಪಿತ ರೂಪ ಮಹಿಳೆಯದ್ದಲ್ಲ, ಅವಳು ಬೇರೆಯದೆ ಸ್ವರೂಪದಲ್ಲಿ ಇದ್ದಾಳೆ. ಮಹಿಳೆಯ ಚಹರೆಯು ನಿಜದಲ್ಲಿ ಬೇರೆ ಎಂಬುದನ್ನು ಈ ಕೆಳಗಿನ ವಚನದ ಮೂಲಕ ನೀಲಮ್ಮ ತಿಳಿಸಿದ್ದಾಳೆ. ಹೀಗೆ ಇದುವರೆಗೆ ಮಹಿಳೆಯನ್ನು ಕಂಡಿರುವ ನಿಲುವುಗಳನ್ನು ಆಕೆ ವಿರೋಧಿಸುತ್ತಿದ್ದಾಳೆ. ಹೀಗೆ ವಿರೋಧಿಸುವುದು ಆಶಾ ಅವರ ಉದ್ದೇಶ ಕೂಡ ಆಗಿದೆ. ಆದ್ದರಿಂದಲೇ ನೀಲಮ್ಮನ ವಚನದ ಮೂಲಕ ಪುರುಷ ಸಮಾಜದ ದೃಷ್ಟಿಕೋನವನ್ನು ಲೇಖಕಿ ಖಂಡಿಸುತ್ತಾರೆ. ಈ ನೇರವಾದ ವಿರೋಧದ ನೆಲೆಯನ್ನು ಹಾಗೂ ಮಹಿಳಾ ಕಾವ್ಯದ ಒಳವಿನ್ಯಾಸವನ್ನು ಆಶಾ ಅವರು ನೀಲಮ್ಮನ ವಚನ ಮೂಲಕ ಒಟ್ಟೊಟ್ಟಿಗೆ ಮಾಡುತ್ತಿದ್ದಾರೆ. ಈ ಎರಡು ಕಾರ್ಯಗಳ ಮೂಲಕ ಮಹಿಳಾ ಕಾವ್ಯಕ್ಕೆ ಸಾಮಾಜಿಕ ಮತ್ತು ಚಾರಿತ್ರಿಕ ಆಯಾಮಗಳನ್ನು ಕೊಡುತ್ತಾರೆ. ಇದನ್ನು ಈ ಕೆಳಕಂಡ ವಚನದ ಮೂಲಕ ನೋಡಬಹುದು.

ನನ್ನನಾರೂವರಿಯರು

ನಾನು ಸ್ವರ್ಗಿಯಲ್ಲ, ನಾನು ಅಪವರ್ಗಿಯಲ್ಲ

ನನ್ನನಾರೂವರಿಯರು

ನಾನು ಮುಕ್ತಳಲ್ಲ, ಅಮುಕ್ತಳಲ್ಲ

ಈ ವಚನವನ್ನು ಕುರಿತಂತೆ ಆಶಾದೇವಿಯವರು "ನೀಲಮ್ಮನ ಈ ವಚನಗಳ ಮೂಲಕವೇ ಹೆಣ್ಣಿನ ಹುಡುಕಾಟ ಮತ್ತು ಹೋರಾಟಗಳೆರಡನ್ನು ಚರ್ಚಿಸಲು ಸಾಧ್ಯ ಎನ್ನುವಷ್ಟು ಈ ವಚನಗಳು ಅಪೂರ್ವವಾಗಿವೆ ಎಂದು ಹೇಳುತ್ತಾರೆ."[೪] ಅಂದರೆ ಈ ಮೇಲ್ಕಂಡ ಹೇಳಿಕೆಯ ಮೂಲಕ ಹೆಣ್ಣನ್ನು ಒಂದು ಚೌಕಟ್ಟಿನೊಳಗೆ ಇಡಲಾಗಿದೆ, ಅದರಾಚೆಗೆ ಬರಲು ನೀಲಮ್ಮ ಈ ವಚನದ ಮೂಲಕ ಹೇಳುತ್ತಿದ್ದಾಳೆ ಎಂಬುದನ್ನು ಆಶಾ ಗುರುತಿಸುತ್ತಾರೆ. ಇದರಿಂದಲೇ ನೀಲಮ್ಮನ ಈ ಹೇಳಿಕೆಯನ್ನು ಉಲ್ಲೇಖಿಸುತ್ತಾರೆ ಮತ್ತು ಗೌರವಿಸುತ್ತಾರೆ. ಏಕೆಂದರೆ ಹಾಗೆ ಆಚೆಗೆ ಬರಬೇಕೆಂಬುದು ವಿಮರ್ಶಕಿಯ ಆಶಯವಾಗಿದೆ. ಅಮುಕ್ತಗಳಲ್ಲ ನಾನು ಮುಕ್ತಳಲ್ಲ ಎಂದು ನೀಲಮ್ಮ ಹೇಳುತ್ತಾಳೆ. ಈಕೆಯ ಈ ನಿಲುವನ್ನು ಅವರು ಬೆಂಬಲಿಸುತ್ತಾರೆ. ಕಾರಣ ಹೆಣ್ಣಿಗೆ ಮುಕ್ತಿ ಅಮುಕ್ತಿ ಎಂಬ ಪರಿಕಲ್ಪನೆಗಳು ಬಂಧಿತಳು, ಬಿಡುಗಡೆ ಹೊಂದಿದವಳು ಎಂಬ ಎರಡು ವಿಭಿನ್ನ ಚೌಕಟ್ಟಿನೊಳಗೆ ಗುರುತಿಸುವ ಪದ್ಧತಿ ಇದೆ. ಆದರೆ ನಿಜವಾಗಿಯೂ ಅದು ನಿರ್ಮಿಸಿದ ಚೌಕಟ್ಟಿನಲ್ಲಿ ಮಹಿಳೆಯನ್ನು ನೋಡುವ, ಅಳವಡಿಸುವ ಪ್ರಯತ್ನ ಇದಾಗಿದೆ. ಇದರಾಚೆಗೆ ಹೆಣ್ಣು ಇರಲು ಸಾಧ್ಯ ಎಂದು ಆಶಾ ಅವರು ಹೇಳುತ್ತಾರೆ. ಹೀಗೆ ನೀಲಮ್ಮನ ಈ ಮಾತನ್ನು ಚರ್ಚಿಸುವ ಮೂಲಕ ಹೆಣ್ಣಿನ ಅಸ್ಮಿತೆಯನ್ನು, ಪ್ರತಿರೋಧವನ್ನು, ಬಿಡುಗಡೆಯ ಹಾದಿಯನ್ನು ಭಿನ್ನವಾದ ತಾತ್ವಿಕ ಚೌಕಟ್ಟಿನಲ್ಲಿ ಶೋಧಿಸುತ್ತಾರೆ. ಇಲ್ಲಿ ನನ್ನನಾರೂವರಿಯರು ಎನ್ನುವುದರಲ್ಲಿ ಒಂದು ಅಸ್ತಿತ್ವವನ್ನು ಕಟ್ಟಿಕೊಳ್ಳುವ ಕ್ರಮವನ್ನು ಗುರುತಿಸಬಹುದು. ಈ ಮೂಲಕ ಪ್ರಾಚೀನ ಮಹಿಳೆಯರು ಕಟ್ಟಿಕೊಂಡ ಅಸ್ತಿತ್ವದ ನೆಲೆಯ ಕ್ರಮಗಳನ್ನು ತಿಳಿಯಬಹುದು. ಈ ಒಂದು ಅಸ್ತಿತ್ವವನ್ನು ಯಾವ ಪ್ರಕ್ರಿಯೆಗಳಲ್ಲಿ, ಮಾದರಿಗಳಲ್ಲಿ ಎಷ್ಟು ಸೂಕ್ಷ್ಮದ ನೆಲೆಗಳಲ್ಲಿ ಕಟ್ಟಿಕೊಂಡಿದ್ದಾರೆ ಎಂಬುವುದನ್ನು ಸಹ ನೋಡಬಹುದಾಗಿದೆ.

ನಾನು ಮುಕ್ತಳಲ್ಲ, ಅಮುಕ್ತಳಲ್ಲ ಎಂದು ಈ ಎರಡು ವ್ಯವಸ್ಥೆಗಳ ಆಚೆಗೆ ಮಹಿಳೆ ಇದ್ದಾಳೆ. ಅಧ್ಯಾತ್ಮದಲ್ಲಿ ಇರದೆ ಸಂಸಾರದಲ್ಲಿ ಇರುವವರು ಅಮುಕ್ತರು, ಸಂಸಾರದ ಆಚೆಗೆ ಇರುವವರು, ಹೊರ ಬಂದಿರುವವರು ಮುಕ್ತರು ಎಂಬ ಸರಳೀಕೃತ ಆಶಯವನ್ನು ಪುರುಷ ಪ್ರಧಾನ ಸಮಾಜ ಹುಟ್ಟುಹಾಕಿದೆ. ಈ ಒಂದು ಪೂರ್ವನಿಯೋಜಿತ ಒಪ್ಪಿತ ಗ್ರಹಿಕೆಯನ್ನು ನೀಲಮ್ಮ ಈ ವಚನದ ಮೂಲಕ ಮುರಿಯುತ್ತಿದ್ದಾಳೆ. ಇದನ್ನು ಆಶಾದೇವಿ ಅವರು ತಮ್ಮ ಗ್ರಹಿಕೆಯ ಮೂಲಕ ಗುರುತಿಸುತ್ತಾರೆ. ಅಂದರೆ ನಾನು ಮುಕ್ತಳು ಅಲ್ಲ, ಅಮುಕ್ತಳೂ ಅಲ್ಲ. ಸಂಸಾರದ ಹೊರಗಿದ್ದು ಮಾತ್ರ ಮುಕ್ತಿಯನ್ನು ಪಡೆಯಬಹುದು ಎಂಬುದನ್ನು ನಿರಾಕರಿಸಿ, ಸಂಸಾರದ ಒಳಗಿದ್ದು ಸನ್ಯಾಸಿ ಭಾವವನ್ನು ಅನುಭವಿಸಬಹುದು ಎಂದು ನೀಲಮ್ಮ ಹೇಳುತ್ತಾಳೆ. ಇದರಿಂದ ಈ ವಚನದ ಮೂಲಕ ಬಿಡುಗಡೆ ಮತ್ತು ಬಂಧನ ಎಂಬ ನೆಲೆಗಳು ಎರಡು ಸ್ಥಿತಿಯಲ್ಲಿ ಇರುವುದಿಲ್ಲ. ಅವರೆಡು ಜೊತೆಯಲ್ಲಿ ಇರುತ್ತವೆ ಎಂಬುದನ್ನು ನೀಲಮ್ಮನ ವಚನದ ಮೂಲಕ ಚಿಂತಕಿಯು ಶೋಧಿಸುತ್ತಾರೆ. ಈ ಮೂಲಕ ಸಮಾಜವನ್ನು ಧೃವೀಕರಣಗೊಂಡ ವಿರೋಧಭಾಸದಲ್ಲಿ ಗ್ರಹಿಸುವುದು ತಪ್ಪು ಎಂದು ಹೇಳುವ ಉದ್ದೇಶ ಇಲ್ಲಿದೆ. ಹೆಣ್ಣಿನಲ್ಲಿ ಗಂಡಿನ ಪ್ರಾಧಾನ್ಯತೆ, ಗಂಡಿನಲ್ಲಿ ಹೆಣ್ಣಿನ ಪ್ರಾಧಾನ್ಯತೆ ಇರುತ್ತದೆ. ಅದೇ ರೀತಿ ಮುಕ್ತಿ–

ಅಮುಕ್ತಿ ಎಂಬುದು ಕೂಡ ಒಂದಕ್ಕೊಂದು ಅಂತರ್‌ಸಂಬಂಧ ಹೊಂದಿವೆ. ಇದರಿಂದ ಹೀಗೆ ಮುಕ್ತತೆ ಮತ್ತು ಅಮುಕ್ತತೆಗಳನ್ನು ವಿರೋಧಭಾಸದಲ್ಲಿ ನೋಡುವುನ್ನು ಆಶಾ ಖಂಡಿಸುತ್ತಾರೆ. ಹೀಗೆ ಭೈನರಿಗಳಲ್ಲದ ವಿಧಾನದಲ್ಲಿ ವಿಶ್ಲೇಷಣೆಗೆ ಒಳಪಡಿಸುತ್ತಾರೆ.

ನೀಲಮ್ಮನ ಕೆಳಕಂಡ ಇನ್ನೊಂದು ವಚನದಲ್ಲಿ ಪುರುಷ ಕಟ್ಟುತ್ತಿರುವ ಮಹಿಳೆಯ ವ್ಯಕ್ತಿತ್ವಕ್ಕೆ ನೇರವಾದ ಪ್ರತಿರೋಧದ ಆಯಾಮವನ್ನು ಆಶಾದೇವಿ ಗುರುತಿಸುತ್ತಾರೆ.

ನಾನು ಹಂದೆಯಲ್ಲ

ಹರುಷದ ಧೈರ್ಯವುಳ್ಳ ಹೆಣ್ಣು ನಾನು

ಈ ವಚನದ ಮೂಲಕ ನೀಲಮ್ಮ ವ್ಯವಸ್ಥೆಯು ಮಹಿಳೆಗೆ ಕೊಡಮಾಡಲಾಗಿರುವ ಸ್ಥಾಪಿತ ಮೌಲ್ಯಗಳನ್ನು ವಿರೋಧಿಸುತ್ತಾಳೆ. ಈ ಮೇಲ್ಕಂಡ ವಚನಕ್ಕೆ ಆಶಾ ಅವರು ಪ್ರತಿಕ್ರಿಯಿಸುತ್ತಾ "ಗಂಡಸರು ಪಿತೃ ಸಮಾಜ ಕಾಣುತ್ತಿರುವ, ಕಾಣಲು ಬಯಸುವ ಅದಕ್ಕಾಗಿ ಇದೇ ವ್ಯವಸ್ಥೆಯನ್ನು ತನ್ನ ಅನುಕೂಲಕ್ಕಾಗಿ ರೂಪಿಸಿಕೊಂಡಿರುವ, ವಾಸ್ತವವನ್ನು ನೀಲಮ್ಮ ಇಲ್ಲಿ ವಿರೋಧಿಸುತ್ತಿದ್ದಾಳೆ ಎಂದು ಹೇಳುತ್ತಾರೆ."[೫] ಅಂದರೆ ಗಂಡಸರು ಮಹಿಳೆಯ ಮೇಲೆ ಸ್ಥಾಪಿತ ಕರಾರುಗಳನ್ನು ಮೊದಲಿನಿಂದಲೂ ಹೇರಿದ್ದಾರೆ. ಇದು ಅವರ ಅನುಕೂಲಕ್ಕಾಗಿ ರೂಪಿಸಿಕೊಂಡಿರುವ ಒಂದು ಮಾರ್ಗ. ಇದನ್ನು ನೀಲಮ್ಮನ ವಚನಗಳ ಮೂಲಕ ಆಶಾದೇವಿ ಖಂಡಿಸುತ್ತಾರೆ. ಮಹಿಳೆಯನ್ನು ಅಳುಬುರುಕಿ, ಧೈರ್ಯವಿಲ್ಲದವಳು, ಹಿಂಜರಿಕೆ ಸ್ವಭಾವದವಳು, ಯಾವುದೇ ಕಠಿಣ ಪರಿಸ್ಥಿತಿಯನ್ನು ಎದುರಿಸಲು ಆಗದವಳು, ಮಾನಸಿಕವಾಗಿ ಗಟ್ಟಿತನ ಇಲ್ಲದವಳು ಎಂದು ಪಿತೃ ಪ್ರಧಾನ ಸಮಾಜ ಮಹಿಳೆಯನ್ನು ಗ್ರಹಿಸುತ್ತಾ, ಹಾಗೆಯೆ ರೂಪಿಸುತ್ತಾ ಬಂದಿದೆ. ಇದಕ್ಕೆ ನೀಲಮ್ಮ ಪ್ರತಿಯಾಗಿ ಮಹಿಳೆ ಹೇಡಿಯಲ್ಲ ಅವಳು ಹರುಷ ಮತ್ತು ಧೈರ್ಯವನ್ನು ಉಳ್ಳಂತಹ ಹೆಣ್ಣು ಎಂದು ಹೇಳುತ್ತಾಳೆ. ಈ ಮೂಲಕ ಆಶಾ ಅವರು ನೀಲಮ್ಮನ ವಚನದ ಮೂಲಕ ಮಹಿಳೆಯ ನಿಜ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತಿದ್ದಾರೆ. ಜೊತೆಗೆ ಪುರುಷ ಸಮಾಜದ ನಿಲುವನ್ನು ವಿರೋಧಿಸುತ್ತಾರೆ. ನೀಲಮ್ಮ ಈ ಎರಡು ಸ್ವರೂಪಗಳಲ್ಲಿ ಮಹಿಳೆಯ ಚಹರೆಗಳನ್ನು ಗುರುತಿಸುತ್ತಾ, ಹೆಣ್ಣಿನ ಸ್ವರೂಪವನ್ನು ಸಮಾಜಕ್ಕೆ ಪ್ರಕಟಪಡಿಸುತ್ತಾಳೆ. ಇದರಿಂದ ಹೆಣ್ಣನ್ನು ಸಂಕುಚಿತವಾಗಿ ನೋಡುತ್ತಿರುವ ಸಮಾಜಕ್ಕೆ ನೇರವಾಗಿ ಹಾಕಿದ ಪ್ರತಿರೋಧವನ್ನು ಆಶಾ ಅವರು ಆಳವಾದ ಚರ್ಚೆಗೆ ಒಳಪಡಿಸುತ್ತಾರೆ.

**೫.೨.೨.ಪಿತೃಪ್ರಧಾನ ವ್ಯವಸ್ಥೆಯ ದೌರ್ಜನ್ಯದ ವಿರೋಧಿ ನೆಲೆಗಳು**

ಸಮಾಜದಲ್ಲಿ ಎಷ್ಟೋ ಹೆಣ್ಣು ಮಕ್ಕಳ ಬದುಕು ಅತಂತ್ರ ಸ್ಥಿತಿಯಲ್ಲಿದೆ. ಹೆಣ್ಣನ್ನು ಪರಾಧೀನರಾಗಿಸಿ ಆಕ್ರಮಣಕ್ಕೆ ಒಳಗು ಮಾಡಲಾಗಿದೆ. ಹೀಗೆ ಹೆಣ್ಣನ್ನು ಶೋಚನಿಯ ಸ್ಥಿತಿಗೆ ತಂದು ನಿಲ್ಲಿಸಿದ ವ್ಯವಸ್ಥೆಯ ವಿರುದ್ಧ ಬಹುತೇಕ ಮಹಿಳೆಯರು ನೇರವಾಗಿ ಮಣ್ಣನ್ನು ತೂರಿ ಶಾಪ ಹಾಕುವುದರ ಮೂಲಕ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾ ಬಂದಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಕುಮಾರವ್ಯಾಸ ಭಾರತದಲ್ಲಿ ಹಲವು ಆಧಾರಗಳು ದೊರೆಯುತ್ತವೆ. ಇದೇ ರೀತಿ ವ್ಯವಸ್ಥೆಯ ವಿರುದ್ಧ ನೇರವಾಗಿ ದ್ರೌಪದಿಯು ಎತ್ತುವ ಪ್ರಶ್ನೆಗಳು. ಆಕೆಯ ದಿಟ್ಟತನ ಈ ನೆಲೆಯಲ್ಲಿ ವ್ಯಕ್ತವಾಗುತ್ತವೆ. ಈಕೆಯು ತನ್ನ

ಆತ್ಮಗೌರವಕ್ಕೆ ಧಕ್ಕೆ ಬರದಂತೆ ಕೊನೆಯವರೆಗೂ ಹೋರಾಡುತ್ತಾಳೆ. ಈ ಹೋರಾಟವನ್ನು ಆಶಾ ಅವರು ನೇರದಾರಿ ಮತ್ತು ಒಳದಾರಿ ಎಂಬುದಾಗಿ ಗುರುತಿಸುತ್ತಾರೆ. ಅಂದರೆ ದ್ರೌಪದಿಯು ವ್ಯವಸ್ಥೆಯ ವಿರುದ್ಧ ಹೋರಾಡಲು ತನ್ನ ಬೌದ್ಧಿಕತೆಯನ್ನು ಹೆಚ್ಚಾಗಿ ಬಳಸುತ್ತಾಳೆ. ಉಪಾಯಗಾರಿಕೆಯ ಮೂಲಕ ತನ್ನ ಕಾರ್ಯ ಸಾಧನೆಯನ್ನು ಸಾಧಿಸಿಕೊಳ್ಳುತ್ತಾಳೆ.

ಆಶಾ ಅವರು ಈ ನೇರದಾರಿಯನ್ನು ಕುರಿತಂತೆ "ನೇರದಾರಿ ಎನ್ನುವುದನ್ನು ನಾನು ಬೌದ್ಧಿಕ ಅಥವಾ ವ್ಯಕ್ತಿತ್ವದ ಸ್ವಪ್ರಜ್ಞೆಯ ಹಿನ್ನೆಲೆಯಲ್ಲಿ ಬಳಸುತ್ತಿದ್ದೇನೆ. ಒಳದಾರಿ ಎನ್ನುವುದನ್ನು ಬೌದ್ಧಿಕ ವ್ಯಕ್ತಿತ್ವದ ಸ್ವಪ್ರಜ್ಞೆಯ ಬಳಕೆಯಲ್ಲದ ದಾರಿ ಎಂದು ಹೇಳುತ್ತಾರೆ."[೬] ಅಂದರೆ ಬೌದ್ಧಿಕತೆಯನ್ನು ನೇರದಾರಿ ಎಂದು ಈ ಮೂಲಕ ಹೇಳುತ್ತಾರೆ. ಆದ್ದರಿಂದ ಮಹಿಳೆಯು ಹೆಚ್ಚು ಬುದ್ಧಿ ಶಕ್ತಿಯನ್ನು ಬಳಸಿಯೇ ಸಫಲರಾಗಿದ್ದಾರೆ. ಇಲ್ಲಿ ದ್ರೌಪದಿಯು ಕೂಡ ಇದೇ ನೇರದಾರಿಯನ್ನು ಬಳಸುತ್ತಾಳೆ. ತನ್ನ ಬುದ್ಧಿವಂತಿಕೆಯಿಂದ ನೇರದಾರಿಯನ್ನು ಬಳಸಿ ಚಾಣಾಕ್ಷತೆಯಿಂದ, ಉಪಾಯಗಾರಿಕೆಯಿಂದ ವ್ಯವಸ್ಥೆಯನ್ನು ಬಳಸಿಯೇ ತನ್ನ ಕಾರ್ಯ ಸಾಧಿಸಿಕೊಳ್ಳುತ್ತಾಳೆ. ಅದಕ್ಕೆ ಆಕೆ ನೇರದಾರಿ ಮತ್ತು ಒಳದಾರಿ ಎರಡನ್ನು ಬಳಸುತ್ತಾಳೆ. ಆದ್ದರಿಂದ ಈಕೆಯ ಚಾಣಾಕ್ಷತೆಯನ್ನು ಕುರಿತು ರಾಜಕಾರಿಣಿ ಎಂದು ಆಶಾ ಕರೆಯುತ್ತಾರೆ.

ಇನ್ನು ವಸ್ತ್ರಾಪಹರಣದ ಸಂದರ್ಭದಲ್ಲಿ ಈ ಬೌದ್ಧಿಕತೆಯ ಮೂಲಕ ನೇರವಾದ ದಾರಿಯನ್ನು ಬಳಸುತ್ತಾಳೆ. ಆಕೆ ಎತ್ತುವ ಪ್ರಶ್ನೆಗಳು ತನ್ನ ಅಸ್ತಿತ್ವವನ್ನು ಕೊನೆಯವರೆಗೂ ಉಳಿಸಿಕೊಳ್ಳುವ ಸಲುವಾಗಿಯೇ ಇವೆ. ಹೀಗಾಗಿಯೆ ಆಶಾ ಅವರು ದ್ರೌಪದಿ ಎತ್ತುವ ಪ್ರತಿರೋಧವನ್ನು ಕುರಿತು "ಅವಳ ಮಾತುಗಳಲ್ಲಿ ಇನ್ನಿಲ್ಲದ ಅಬ್ಬರ, ತೀವ್ರತೆ, ತೀಕ್ಷ್ಣತೆ ಎಲ್ಲಕ್ಕಿಂತ ಹೆಚ್ಚಾಗಿ ಸತ್ಯವಿದೆ. ಇಂಥ ಶೋಷಣೆಯ ಹಿಂದಿನ ಕಾರಣಗಳನ್ನು ಅವಳು ತುಂಬಿದ ರಾಜ ಸಭೆಯಲ್ಲಿ ಚೀರಿ-ಚೀರಿ ಪ್ರಶ್ನಿಸುತ್ತಾಳೆ. ಪ್ರಶ್ನೆಗೆ ಉತ್ತರ ದೊರೆಯದಿದ್ದಾಗ ಕಟುವಾಸ್ತವದ ಉತ್ತರವನ್ನು ತನಗೆ ತಾನೇ ಕೊಟ್ಟುಕೊಳ್ಳುತ್ತಾಳೆ. "ಸ್ತ್ರೀಮತವನ್ನುತ್ತರಿಸಲಾಗದೆ ಧರ್ಮಶಾಸ್ತ್ರದೊಳ್."[೭] ಧರ್ಮರಾಯ ಮೊದಲು ತನ್ನನ್ನು ತಾನು ಪಣಕ್ಕಿಟ್ಟುಕೊಂಡು ಸೋತವನು. ಆ ಮೇಲೆ ಹೇಗೆ ಹೆಂಡತಿಯನ್ನು ಪಣಕ್ಕಿಡಲು ಸಾಧ್ಯ ಎನ್ನುತ್ತಾ ತುಂಬಿದ ಸಭೆಯಲ್ಲಿ ಪ್ರಶ್ನೆ ಹಾಕುತ್ತಾಳೆ. ಈ ಮೇಲ್ಕಂಡ ಹೇಳಿಕೆಯಲ್ಲಿ ಆಶಾ ಅವರು ದ್ರೌಪದಿಯ ಅಸಹಾಯಕತೆಯನ್ನು ಗುರುತಿಸುತ್ತಾರೆ. ಮಹಿಳೆಗೆ ಎಂದಿಗೂ ಪುರುಷ ಪ್ರಧಾನ ಸಮಾಜದಲ್ಲಿ ನ್ಯಾಯ ದೊರಕುವುದಿಲ್ಲ ಎಂಬ ಕಟುಸತ್ಯವನ್ನು ದ್ರೌಪದಿಯ ಮೂಲಕ ಅನಾವರಣಗೊಳಿಸುತ್ತಾರೆ. ದ್ರೌಪದಿಗೂ ತನಗೆ ನ್ಯಾಯ ಸಿಗುವುದಿಲ್ಲ ಎಂಬುದು ಗೊತ್ತು. ಆದ್ದರಿಂದಲೇ ಆಕೆ ಬೌದ್ಧಿಕತೆಯನ್ನು ಬಳಸುತ್ತಾಳೆ, ಗೆಲ್ಲುತ್ತಾಳೆ ಎಂಬುದನ್ನು ವಿಮರ್ಶಕಿ ಗುರುತಿಸುತ್ತಾರೆ.

ಇಂದು ಸಮಕಾಲೀನದಲ್ಲಿಯೂ ಮಹಿಳೆಯು ದ್ರೌಪದಿ ಅನುಸರಿಸಿದ ಇದೇ ನೇರದಾರಿ ಮತ್ತು ಒಳದಾರಿಯಗಳನ್ನು ಬಳಸುತ್ತಾರೆ. ಅಂದರೆ ಕಾವ್ಯದ ಮೂಲಕ ಮಹಿಳೆ ವ್ಯವಸ್ಥೆಯನ್ನು ಪ್ರಶ್ನಿಸುತ್ತಾಳೆ. ಅನಾದಿಯಿಂದಲೂ ಮಹಿಳೆ ಈ ಕಾವ್ಯದ ಮೂಲಕ ಎತ್ತುತ್ತಿರುವ ಪ್ರಶ್ನೆಗಳನ್ನು ಗುರುತಿಸುತ್ತಾರೆ. ಈ ಮೂಲಕ ಚರಿತ್ರೆಯ ಹೋರಾಟದ ಹಾದಿಗಳನ್ನು ವರ್ತಮಾನೀಕರಿಸುತ್ತಾರೆ.

ದ್ರೌಪದಿಯ ಕಾವ್ಯದ ಕೊನೆಯಲ್ಲಿ "ಇನ್ನು ನಾರಿಯರು ಹುಟ್ಟದೆ ಇರಲಿ ಎನ್ನವೊಲು ಭಂಗಿತರು ಭುವನದೊಳಗೆ ಎಂದು ಚೀರಿ ಹೇಳುತ್ತಾಳೆ."[೮] ಈ ಮೂಲಕ ಮಹಿಳೆಗೆ ಈ ಭೂಮಿಯಲ್ಲಿ ಎಂದಿಗೂ ನ್ಯಾಯ ಸಮಾನತೆ ದೊರೆಯುವುದಿಲ್ಲ ಎಂಬ ವಾದ ದ್ರೌಪದಿಯದು. ಎಲ್ಲಾ ಕಾಲದಲ್ಲಿಯೂ ಈ ಅಸಮಾನತೆ ಇರುತ್ತದೆ ಎಂದು ಈ ಮೂಲಕ ಹೇಳುತ್ತಿದ್ದಾರೆ. ಇದರಿಂದ ಮಹಿಳೆಗಾದ ಅನ್ಯಾಯವನ್ನು, ಅಸಹಾಯಕತೆಯಿಂದ ವ್ಯಕ್ತಪಡಿಸುತ್ತಾಳೆ. ಈ ಮೂಲಕ ದ್ರೌಪದಿಯು ಇಡೀ ಮಹಿಳೆಯ ಪರವಾಗಿ ಮಾತನಾಡುತ್ತಾಳೆ. ಹೋರಾಡುತ್ತಾಳೆ. ಈಕೆಯ ಹೋರಾಟ ವೈಯಕ್ತಿಕತೆಯಿಂದ ಸಾರ್ವತ್ರಿಕತೆಯ ಕಡೆಗೆ ಚಲಿಸುತ್ತದೆ. ತನ್ನ ಹೋರಾಟದಿಂದ ಇಡೀ ಮಹಿಳಾ ಸಮುದಾಯದ ಪರವಾಗಿ ಹೋರಾಟ ಮಾಡುತ್ತಾಳೆ. ತನ್ನಂತೆ ಅನ್ಯಾಯಕ್ಕೊಳಾಗಾದ ಎಷ್ಟೋ ಹೆಣ್ಣು ಮಕ್ಕಳ ಹೋರಾಟಕ್ಕೆ ದ್ರೌಪದಿ ದನಿಯಾಗುತ್ತಾಳೆ. ಈ ಮೇಲ್ಕಂಡ ಹೇಳಿಕೆಯ ಮೂಲಕ ಆಶಾ ಅವರು ದ್ರೌಪದಿಯ ನಿಜ ವ್ಯಕ್ತಿತ್ವವನ್ನು, ಆಕೆ ಎತ್ತಿದ ನೇರ ಪ್ರಶ್ನೆಗಳನ್ನು ಅನಾವರಣಗೊಳಿಸುತ್ತಾರೆ. ಈ ಮೂಲಕ ಚರಿತ್ರೆಯಲ್ಲಿನ ಪ್ರತಿಭಟನೆಯ ನೆಲೆಗಳನ್ನು ಹುಡುಕಿ ತೆಗೆಯುವ ಮೂಲಕ ಸ್ತ್ರೀವಾದಿ ಚಿಂತನೆಗಳನ್ನು ಶೋಧಿಸುತ್ತಾರೆ.

ದ್ರೌಪದಿಯ ಹೋರಾಟವನ್ನು ಆಶಾ ಅವರು ಜಾನಪದ ಸಾಹಿತ್ಯದಲ್ಲಿ ಕೂಡ ಗುರುತಿಸುತ್ತಾರೆ. ಏಕೆಂದರೆ ದ್ರೌಪದಿಯ ನಿಜ ವ್ಯಕ್ತಿತ್ವ ಅನಾವರಣವಾಗಿರುವುದು ಇದೇ ಸಾಹಿತ್ಯದಲ್ಲಿ. ಇದನ್ನು ಈ ಕೆಳಕಂಡ ಪದ್ಯದ ಮೂಲಕ ಲೇಖಕಿ ವಿಶ್ಲೇಷಿಣೆಗೆ ಒಳಪಡಿಸುತ್ತಾರೆ.

ನಿನ್ನ ಹೊನ್ನು ಮುಂಚಾಕೆ ಹಾಸುಗೆ ಹಾಸುಕಾರೆ

ಕಪೂರಾದ ವೀಳವ ಮಡ್ಚು ಕೊಡುಕಾರೆ .... ಎಂದು ಹೇಳುತ್ತಾ

ನನ್ನ ಅರಮನೆಯ ಗೌಡಿ ಚಾಕುರಿಗೆ ಅನುವಾಗೆ

ಈ ಮೇಲ್ಕಂಡ ಕಾವ್ಯದಲ್ಲಿ ದ್ರೌಪದಿಯು ಚಾಣಾಕ್ಷತೆಯಿಂದ ದುರ್ಯೋಧನನಿಗೆ ಪ್ರಶ್ನೆಗಳನ್ನು ಹಾಕುವುದನ್ನು ನೋಡಬಹುದು. ದ್ರೌಪದಿಯು ಹೇಳುವ ಈ ಮೇಲ್ಕಂಡ ಮಾತಿಗೆ ಆಶಾ ಅವರು ಪ್ರತಿಕ್ರಿಯಿಸುತ್ತಾ "ಪಿತೃ ಸಂಸ್ಕೃತಿಯ ಕಾರ್ಯಮಾದರಿಯನ್ನು ಅದರ ವಿರುದ್ಧವೇ ಆಯುಧವಾಗಿ ಬಳಸುವ ಒಳದಾರಿಯನ್ನು ಹುಡುಕಿ ಪ್ರಯೋಗಿಸಿ ಗೆಲ್ಲುವುದರಲ್ಲಿ ಯಶಸ್ಸು ಪಡೆಯುತ್ತದೆ ಎಂದು ಹೇಳುತ್ತಾರೆ."[೯] ದ್ರೌಪದಿಯ ಈ ನಿಲುವನ್ನು ಬುದ್ಧಿವಂತಿಕೆಯನ್ನು ಆಶಾ ಅವರು ಬೆಂಬಲಿಸುತ್ತಾರೆ. ಏಕೆಂದರೆ ಮಹಿಳೆಯ ನೇರವಾಗಿ ನ್ಯಾಯವನ್ನು ಪಡೆಯಲು ಸಾಧ್ಯವಾಗದಿದ್ದಾಗ ದ್ರೌಪದಿಯ ಮಾರ್ಗವನ್ನು ಅನುಸರಿಸಬೇಕು ಎಂಬುದು ಅವರ ಈ ಹಿಂದಿನ ಉದ್ದೇಶವಾಗಿದೆ. ಹೀಗೆ ಎಷ್ಟೋ ಹೆಣ್ಣು ಮಕ್ಕಳು ಭಕ್ತಿಯ ಮೂಲಕ, ಕಾವ್ಯದ ಮೂಲಕ ಇದೇ ಮಾರ್ಗವನ್ನು ಅನುಸರಿಸುತ್ತಿದ್ದಾರೆ. ವ್ಯವಸ್ಥೆಯನ್ನು ಆಯುಧವಾಗಿ ಮಾಡಿಕೊಂಡು ಗೆಲ್ಲಬೇಕು ಎಂಬುದು ಅವರ ವಾದವಾಗಿದೆ. ಈ ಮೂಲಕ ಮಹಿಳಾ ಹೋರಾಟದ ದಾರಿಗಳನ್ನು ಆಶಾ ಅವರು ನೇರವಾಗಿ ನಿರ್ಮಿಸುತ್ತಾರೆ. ಈ ಎಲ್ಲಾ ಪರ್ಯಾಯಗಳನ್ನು ಕಾವ್ಯದ ಮೂಲಕ ಚರಿತ್ರೆಯ ಮೂಲಕ ಕಟ್ಟುತ್ತಾರೆ. ಇಲ್ಲಿ ದ್ರೌಪದಿಯು ದೇಹವನ್ನು ಸವಾಲಾಗಿ, ಪಣವಾಗಿ, ಆಯುಧವಾಗಿ ಬಳಸುತ್ತಾ ಹೋಗುತ್ತಾಳೆ. ಇದೊಂದೆ ಆಕೆಗೆ ಅಂತಿಮವಾಗಿ ಉಳಿದ ದಾರಿ. ಆದರೆ ಇದೇ ದ್ರೌಪದಿಯ ವ್ಯಕ್ತಿತ್ವವನ್ನು ಕುಮಾರವ್ಯಾಸ ಭಾರತದಲ್ಲಿ ನಿಜದಲ್ಲಿ, ಗಟ್ಟಿ

ವ್ಯಕ್ತಿತ್ವದ ಹೆಣ್ಣಾಗಿ ಚಿತ್ರಿಸಲು ಸಾಧ್ಯವಾಗಿಲ್ಲ, ಇದಕ್ಕೆ ಕಾರಣ ವ್ಯವಸ್ಥೆ ಎನ್ನಬಹುದು. ಕುಮಾರವ್ಯಾಸ ಕೂಡ ಪುರುಷ ಪ್ರಧಾನ ಸಮಾಜದ ಪ್ರತಿನಿಧಿಯೇ ಆಗಿದ್ದಾನೆ. ಇದಕ್ಕೆ ಪುರಾವೆಗಾಗಿ ಹಲವಾರು ಆಧಾರಗಳು ದೊರೆಯುತ್ತವೆ. ಆದರೆ ಆಕೆಯ ಹೋರಾಟದ ದಾರಿಗಳನ್ನು ಜಾನಪದ ದ್ರೌಪದಿ ನೆರವೇರಿಸುತ್ತಾಳೆ ಎಂಬ ನಿಲುವಿಗೆ ಈ ಮೂಲಕ ಆಶಾ ಬರುತ್ತಾರೆ.

ಇಂದಿನ ಎಷ್ಟೋ ವಿಮರ್ಶೆಗಳು ದ್ರೌಪದಿಯ ಪ್ರತಿರೋಧದ ಆಯಾಮಗಳನ್ನು ಮುಚ್ಚಿ ಹಾಕುತ್ತಿವೆ. ಸಂಕೀರ್ಣ ವ್ಯಕ್ತಿತ್ವವಾಗಿ ಚಿತ್ರಿಸುತ್ತಾ, ಆಕೆಯ ಅಸಹಾಯಕತೆಯನ್ನು ಮುನ್ನೆಲೆಗೆ ತರುವ ಹುನ್ನಾರವನ್ನು ವ್ಯವಸ್ಥೆ ಮಾಡುತ್ತಿದೆ. ಹೀಗೆ ಪ್ರಜ್ಞಾಪೂರ್ವಕವಾಗಿ ದ್ರೌಪದಿಯ ವ್ಯಕ್ತಿತ್ವವನ್ನು ದಮನಗೊಳಿಸಲಾಗಿದೆ. ಇದರಿಂದಾಗಿಯೇ ಆಶಾ ಅವರು ಕುಮಾರವ್ಯಾಸ ಭಾರತವನ್ನು ಮರು ಓದಿಗೆ ಒಳಪಡಿಸುತ್ತಾರೆ. ಆ ಮೂಲಕ ಕೃತಿಯಲ್ಲಿ ಅಡಕವಾಗಿರುವ ಸ್ತ್ರೀವಾದಿ ನಿಲುವುಗಳನ್ನು ಗುರುತಿಸುತ್ತಾರೆ.

ಅದೇ ರೀತಿ ಇನ್ನೊಂದು ಪೌರಾಣಿಕ ಪಾತ್ರವಾದ ಸೀತೆಯು ಕೂಡ ವ್ಯವಸ್ಥೆಯನ್ನು ನೇರ ಪ್ರತಿರೋಧದ ಮೂಲಕ ಧಿಕ್ಕರಿಸುತ್ತಾಳೆ. ಇದನ್ನು ಆಶಾ ಅವರು ಸ್ತ್ರೀವಾದಿ ವಿಶ್ಲೇಷಣೆಗೆ ಒಳಪಡಿಸುತ್ತಾರೆ. ಸೀತೆ ಎತ್ತುವ ಪ್ರಶ್ನೆಗಳು ಇಂದು ಹಲವಾರು ಮಹಿಳೆಯರ ಪರವಾದ ಹೋರಾಟವಾಗಿ ನೋಡಬಹುದು.

ಆದರೆ ಇದುವರೆಗಿನ ಅಧ್ಯಯನಗಳು ಸೀತೆಯನ್ನು ಕೇವಲ ಪುರುಷ ವ್ಯವಸ್ಥೆಯ ನೆಲೆಯಲ್ಲಿಯೇ ಗ್ರಹಿಸುತ್ತಾ, ಆಕೆಯನ್ನು ಸಂಕುಚಿತ ಚೌಕಟ್ಟಿನಲ್ಲಿ ಇಡಲಾಗಿದೆ. ಸಮಾಜದಲ್ಲಿ ಮಹಿಳೆಯರು ಹೀಗೆಯೇ ಇರಬೇಕು ಎಂಬ ಮಾದರಿಯಲ್ಲಿ ಸೀತೆಯ ವ್ಯಕ್ತಿತ್ವವನ್ನು ವೈಭವೀಕರಿಸಲಾಗಿದೆ. ಅಂದರೆ ಛಾಯಾ ವ್ಯಕ್ತಿತ್ವದ ನೆಲೆಯಲ್ಲಿ ತೋರಿಸಲಾಗಿದೆ. ಆಕೆ ರಾಮನ ವಿರುದ್ಧ ಎತ್ತುವ ಪ್ರಶ್ನೆಗಳನ್ನು ಪ್ರತಿರೋಧವನ್ನು ಗೌಣವಾಗಿಸಲಾಗಿದೆ. ಸೀತೆಯ ಮೂಲಕ 'ಅನುಕೂಲ ಸತಿ'ಯ ಚಿತ್ರಣವನ್ನು ಚಾಲ್ತಿಗೆ ತರಲಾಗಿದೆ. ಈ ಎಲ್ಲಾ ವ್ಯವಸ್ಥಿತ ಹುನ್ನಾರಗಳನ್ನು ಆಶಾ ಅವರು ಹೆಕ್ಕಿ ತೆಗೆಯುತ್ತಾರೆ. ಅಂದರೆ ಸೀತೆಯು ಮೌನ ಗೌರಿಯಲ್ಲ, ದಿಟ್ಟ ಗೌರಿಯ ಆತ್ಯಂತಿಕ ಮಾದರಿ ಎನ್ನುವುದನ್ನು ತಮ್ಮ ಚಿಂತನೆಯ ಮೂಲಕ ತಿಳಿಸುತ್ತಾರೆ. ಇದನ್ನು ಜಾನಪದ ಕಾವ್ಯದಲ್ಲಿ ಸೀತೆ ಎತ್ತುವ ಈ ಪ್ರಶ್ನೆಗಳನ್ನು ಈ ಕೆಳಗಿನ ಪದ್ಯದ ಮೂಲಕ ಚರ್ಚಿಸುತ್ತಾರೆ.

ಬಾಳೆ ಕಡಿದಾರೆ ತೋಟ ಹಾಳಾಗಬಲ್ಲುದೆ

ಬಾಳಿಸಲಾಗದೆ ಮಡದಿಯ ಬಿಟ್ಟರೆ

ಬಾಳೆ ಹಣ್ಣೇನೆ ಕೊಳಿಯಾಕೆ

ಈ ಪದ್ಯದಲ್ಲಿ ಸೀತೆಯು ಎತ್ತುವ ಪ್ರತಿರೋಧದ ಮಾದರಿಯು ಇದುವರೆಗೆ ನೋಡಿರುವ, ನೋಡಲಾಗುತ್ತಿರುವ ಸೀತೆಯ ಸಂಪೂರ್ಣ ಚಹರೆಗಳನ್ನು ಬದಲಿಸುತ್ತದೆ. ಇಲ್ಲಿ ರಾಮನಿಗೆ ನೇರವಾಗಿ ಪ್ರಶ್ನೆಹಾಕುತ್ತಾಳೆ. ಈ ಮೇಲಿನ ಪದ್ಯದಲ್ಲಿನ ಸೀತೆಯ ಮನಸ್ಥಿತಿಯನ್ನು ಕುರಿತು ಆಶಾ ಅವರು ಪ್ರತಿಕ್ರಿಯಿಸುತ್ತಾ "ಇಲ್ಲಿನ ಸೀತೆಗೆ ರಾಮ ದಾಂಪತ್ಯವನ್ನು ಪಾಲಿಸಿಲ್ಲ ಎನ್ನುವ ಕಾರಣಕ್ಕೆ ಅಸಮಾಧಾನವಿದೆ. ಎಂತಲೇ ಅವನಿಗೆ ಹೆಂಡತಿಯನ್ನು ಬಾಳಿಸಲಾಗಲಿಲ್ಲ ಎನ್ನುವ ಕಟಕಿಯಾಡುತ್ತಲೇ

ಈ ಕಾರಣಕ್ಕೆ ತನ್ನ ಬದುಕು ಮುಗಿದು ಹೋಗಬೇಕಿಲ್ಲ ಎನ್ನುವುದನ್ನು ಸ್ಪಷ್ಟವಾಗಿ ಹೇಳುತ್ತಾಳೆ. ತಾನು ಕೊಳೆತು ಹೋಗುವ ಬಾಳೆ ಹಣ್ಣಲ್ಲ ಎನ್ನುವ ಮೂಲಕ ಅವಳು ತನ್ನ ಉಳಿದ ಬದುಕನ್ನು ಧೈರ್ಯದಿಂದ, ಆತ್ಮಗೌರವದಿಂದ ಕಳೆಯುವ ಸೂಚನೆ ಕೊಡುತ್ತಾಳೆ ಎಂಬ ಮಾತನ್ನು ಹೇಳುತ್ತಾರೆ.”[೧೦]

ಈ ಮೇಲ್ಕಂಡ ಹೇಳಿಕೆಯಲ್ಲಿ ಮಹಿಳೆಗೆ ಇರುವ ಜೀವನ ಬದ್ಧತೆಯನ್ನು, ಜೀವನ ಪ್ರೀತಿಯನ್ನು ಗುರುತಿಸಬಹುದು. ತನ್ನಂತೆ ಇರುವ ಹಲವಾರು ಮಹಿಳೆಯರ ಆತ್ಮವಿಶ್ವಾಸವನ್ನು ಸೀತೆಯ ಮೂಲಕ ಗುರುತಿಸುತ್ತಾರೆ. ದಾಂಪತ್ಯದಾಚೆಗೂ ಮಹಿಳೆಗೆ ಜೀವನವಿದೆ. ಅಸ್ತಿತ್ವವಿದೆ ಎಂದು ಬಾಳಿಸಲಾಗದ ಗಂಡ ಸಂಸಾರವನ್ನು ಧಿಕ್ಕರಿಸಿ, ಅದರಾಚೆಗೆ ಬದುಕಬೇಕೆಂದು ಸೀತೆ ಹೇಳುತ್ತಾಳೆ. ಆದರೆ ಸೀತೆಗೆ ದಾಂಪತ್ಯವನ್ನು ಕುರಿತು ವಿರೋಧವಿಲ್ಲ. ಬಾಳಿಸಲಾಗದ ಗಂಡನನ್ನು ಕುರಿತು ಕೋಪವಿದೆ ಎಂಬುದನ್ನು ಆಶಾ ಗುರುತಿಸುತ್ತಾರೆ. ಈ ಮೂಲಕ ಗಂಡಸು ಇಲ್ಲದೆಯೂ ತಾನು ಬದುಕಬಲ್ಲೆ ಎಂಬುದಾಗಿ ಮಹಿಳೆಗಿರುವ ಜೀವನ ಪ್ರೀತಿಯನ್ನು ಈ ಮೂಲಕ ಚಿಂತಕಿ ತೋರಿಸುತ್ತಾರೆ.

ಇದರ ಮೂಲಕ ಸೀತೆ ತನ್ನ ಪ್ರತಿರೋಧದ ಮೂಲಕ ಹೆಣ್ಣಿಗೆ ಇರುವ ಅಸ್ತಿತ್ವವನ್ನು, ಸ್ವಾತಂತ್ರ್ಯವನ್ನು ತನಗಿರುವ ಬದುಕಿನ ಬದ್ಧತೆಯ ಶಕ್ತಿಯನ್ನು ತಿಳಿಸುತ್ತಾಳೆ. ಕೊನೆಗೆ ರಾಮನ ಜೊತೆಗೆ ಹೋಗದೆ ಇರುವ ತೀರ್ಮಾನವನ್ನು ತೆಗೆದುಕೊಂಡು ಅವಳು ತನ್ನ ಬದುಕು ಮತ್ತು ವ್ಯಕ್ತಿತ್ವದ ಗೌರವವನ್ನು ಕಾಪಾಡಿಕೊಳ್ಳಲು ಕೊನೆಯವರೆಗೂ ನೇರವಾದ ಮಾರ್ಗದಲ್ಲಿಯೇ ಹೋರಾಡುತ್ತಾಳೆ. ಇದರಿಂದ ಸೀತೆಯ ವ್ಯಕ್ತಿತ್ವದ, ವೈಶಿಷ್ಟತೆ ಮತ್ತು ಗಟ್ಟಿತನಗಳು ನಮ್ಮ ಅರಿವಿಗೆ ಬರುತ್ತವೆ. ಈ ಮೂಲಕ ಸೀತೆಯನ್ನು ಗ್ರಹಿಸುವ ಹೊಸ ಮಾದರಿಗಳು ಹುಟ್ಟಿಕೊಳ್ಳುತ್ತವೆ. ಹೀಗಾಗಿ ಬದುಕಿನಲ್ಲಿ ಆದ ಅಪಮಾನಕ್ಕೆ ಬೆನ್ನು ತಿರುಗಿಸದೆ, ಬದ್ಧತೆಯಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಕೊನೆಯ ತನಕವು ಹೋರಾಟ ಮಾಡುತ್ತಲೇ ಬರುತ್ತಾಳೆ. ಆ ಮೂಲಕ ಯಶಸ್ವಿಯಾಗುತ್ತಾಳೆ ಎಂಬುದನ್ನು ಆಶಾ ಅವರು ಚರಿತ್ರೆಯನ್ನು ಪುನರ್ ಓದಿಗೆ ಒಳಪಡಿಸುವ ಮೂಲಕ ಸ್ತ್ರೀವಾದಿ ಚಿಂತನೆಯನ್ನು ವಿಸ್ತರಿಸುತ್ತಿದ್ದಾರೆ.

ಸೀತೆಗಿರುವ ವ್ಯಕ್ತಿತ್ವವನ್ನು ಕುರಿತು ಆಶಾ ಅವರು “ಆತ್ಮಗೌರವ ಮತ್ತು ಜವಾಬ್ದಾರಿ ಎರಡನ್ನು ಸೀತೆಯ ಹಾಗೆ ನಿಭಾಯಿಸಿದವರು ಯಾವ ಕಾಲದಲ್ಲಿಯೂ ಅಪರೂಪವೇ ಎಂದು ಅಭಿಪ್ರಾಯ ಪಡುತ್ತಾರೆ.”[೧೧] ಹಾಗಾಗಿ ಸೀತೆಯು ಬದುಕನ್ನು ಒಬ್ಬಂಟಿಯಾಗಿ ಎದುರಿಸಿ ತನ್ನ ಜೀವನದ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಾಳೆ. ತಾಯಿಯಾಗಿ ಎಲ್ಲಾ ಜವಾಬ್ದಾರಿ ನಿರ್ವಹಿಸುತ್ತಾಳೆ. ತನ್ನ ಗಟ್ಟಿ ಧೈರ್ಯದಿಂದ, ಆತ್ಮವಿಶ್ವಾಸದಿಂದ ಎಂದೂ ರಾಮನಿಗೆ ತಲೆಬಾಗದೆ ಜೀವಿಸುತ್ತಾಳೆ. ಕೊನೆಗೂ ಸೀತೆ ಸೋಲುವುದಿಲ್ಲ ಎನ್ನುವುದನ್ನು ಲೇಖಕಿ ಸೀತೆಗಿರುವ ದಿಟ್ಟ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತಾರೆ. ಆದ್ದರಿಂದ ಆಶಾದೇವಿಯವರು ಸೀತೆಯನ್ನು ಒಂದು ದುರ್ಬಲ ವಿಧೇಯ ಆದರ್ಶ ಹೆಣ್ಣಿನ ಕಲ್ಪನೆ ಎಂದೂ ಯಾವತ್ತು ಒಪ್ಪುವುದಿಲ್ಲ. ಸೀತೆಯನ್ನು ಮುಖ್ಯವಾಗಿ ಆದಿಮ ಸ್ತ್ರೀವಾದಿ ಎಂದು ಹೇಳುತ್ತಾರೆ. ಏಕೆಂದರೆ ಸೀತೆಯು ನಿಜವಾದ ದಿಟ್ಟತನದ ಹೆಣ್ಣಾಗಿದ್ದಾಳೆ. ಅವಳು ಒಬ್ಬಳು ಆಧುನಿಕ ಹೆಣ್ಣಾಗಿದ್ದಾಳೆ. ಹಾಗಿರದೆ ಹೋಗಿದ್ದರೆ ಕೊನೆಯದಾಗಿ ರಾಮ ಕರೆದ ತಕ್ಷಣ ಹೋಗಿ ಬಿಡುವ ಹೆಣ್ಣಾಗಿರುತ್ತಿದ್ದಳು. ಆದರೆ ಅವಳು ಗಂಡನನ್ನು ಹಿಂಬಾಲಿಸಿ ಹೋಗಲಿಲ್ಲ ಅನ್ನುವುದೇ ಆಕೆಯ ವ್ಯಕ್ತಿತ್ವದ ಘನತೆಯನ್ನು ಹಾಗೂ ಶಕ್ತತನವನ್ನು ಉಳಿಸಿಕೊಂಡಿರುವುದನ್ನು ತಿಳಿಸುತ್ತದೆ. ಈ ಎಲ್ಲದರ ನಡುವೆ ಆಕೆ ತನ್ನ ಯಾವ

ಜವಾಬ್ದಾರಿಗಳನ್ನು ಬಿಡಲಿಲ್ಲ. ತಾಯಿಯಾಗಿ ಎಲ್ಲಾ ಕರ್ತವ್ಯಗಳನ್ನು ಚಾಚು ತಪ್ಪದೇ ನಿಭಾಯಿಸುತ್ತಾಳೆ. ಮಕ್ಕಳಿಗೆ ಇರುವ ಆಸೆಗಳನ್ನು, ಅಯೋಧ್ಯೆಯ ಮೇಲಿರುವ ಹಕ್ಕು ಬಾಧ್ಯತೆಗಳನ್ನು ತಿಳಿದುಕೊಂಡು, ತನ್ನ ಮಕ್ಕಳು ಅರಸರಾಗವುದಕ್ಕೆ ಏನು ಬೇಕೋ ಆ ಎಲ್ಲಾ ಸವಲತ್ತುಗಳಿಗೆ ಅವಕಾಶ ಮಾಡಿಕೊಡುತ್ತಾಳೆ. ಬಹಳ ಮುಖ್ಯವಾಗಿ ಅವಳು ರಾಮನ ಬಗೆಗೆ ತನ್ನ ಮಕ್ಕಳಿಗೆ ಎಂದೂ ಕಹಿ ಹುಟ್ಟುವ ಹಾಗೆ ಮಾಡುವುದಿಲ್ಲ. ಈ ಒಂದು ಸವಾಲನ್ನು ನಿಭಾಯಿಸುವುದು ಸೀತೆಗೆ ತುಂಬಾ ಕಷ್ಟದ್ದು. ತನ್ನ ಎಲ್ಲಾ ಕರ್ತವ್ಯಗಳನ್ನು ಎಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿಯೂ ಸಮರ್ಥವಾಗಿ ನಿಭಾಯಿಸುತ್ತಾಳೆ. ಆದರೆ ಅವಳಿಗೆ ಯಾವಾಗ ತನ್ನ ಆತ್ಮ ಗೌರವದ ಪ್ರಶ್ನೆ ಬರುತ್ತದೆಯೋ ಆಗ ಅವಳಿಗೆ ಅನಿಸುತ್ತದೆ, ತಾನು ಇನ್ನು ನನ್ನ ಆತ್ಮ ಗೌರವದ ಜೊತೆಗೆ ರಾಜಿ ಮಾಡಿಕೊಳ್ಳಬೇಕಾಗಿಲ್ಲ ಎಂದು. ಆದ್ದರಿಂದ ಸೀತೆ ಕೊನೆಯದಾಗಿ ರಾಮ ಕರೆದಾಗ ಅವನೊಡನೆ ಹೋಗಲು ನಿರಾಕರಿಸುತ್ತಾಳೆ. ಆದರೆ ಇವತ್ತು ಸೀತೆಯನ್ನು ಒಂದು ಸಂಕೇತವಾಗಿ, ಮಾದರಿಯಾಗಿ ಕೊಟ್ಟಿರುವುದರಲ್ಲಿ, ಕೊಡುತ್ತಿರುವುದರಲ್ಲಿ ಒಂದು ಹುನ್ನಾರ ಇದೆ. ಆ ಹುನ್ನಾರವೆಂದರೆ, ಯಾವ ಸೀತೆಯು ನಿಜದಲ್ಲಿ ಒಬ್ಬ ಬಂಡಾಯಗಾರ್ತಿ ಆಗಿದ್ದಾಳೆಯೋ ಆ ಬಂಡಾಯಗಾರ್ತಿಯನ್ನು ಒಬ್ಬ ವಿಧೇಯ ಹೆಣ್ಣು ಎಂದು ತಿರುಚಿ ತೋರಿಸಲಾಗಿದೆ. ಆದ್ದರಿಂದಲೇ ಈ ಸ್ತ್ರೀವಾದಿ ಚಿಂತನೆ ಎನ್ನುವುದು ಇತ್ತೀಚಿನ ತಾತ್ವಿಕತೆ ಆಗಿರಬಹುದು. ಆದರೆ ಅದು ಯಾವತ್ತಿನ ಚಿಂತನೆ. ಅದಕ್ಕೊಂದು ಸಿದ್ಧಾಂತದ ರೂಪವನ್ನು ಇವತ್ತು ಕೊಟ್ಟುಕೊಂಡಿರಬಹುದು ಅಷ್ಟೆ. ಯಾವುದೇ ಹೆಣ್ಣು ಮಕ್ಕಳಿಗೆ ಅವರನ್ನು ಶೋಷಣೆ ಮಾಡುತ್ತಿದ್ದಾಗ, ಹಿಂಸೆ ಕೊಡುತ್ತಿದ್ದಾಗ ಅವಳು ಕತ್ತೆಯ ಹಾಗೆ ಕೆಲಸ ಮಾಡುತ್ತಿರುವಾಗ, ದುಡಿಯುತ್ತಿರುವಾಗ, ಈ ಎಲ್ಲಾ ಕೆಲಸಗಳಿಗೆ ಮೂರು ಕಾಸಿನ ಬೆಲೆ ಇಲ್ಲ ಎಂದು ತಿಳಿದಾಗ ಯಾವ ಹೆಣ್ಣು ಮಗಳಿಗಾದರೂ ಸಣ್ಣ ಪ್ರಮಾಣದಲ್ಲಿ ಪ್ರಶ್ನೆ ಬರುತ್ತದೆ. ನಾನು ಯಾಕೆ ಹೀಗೆ ಇರಬೇಕು ಎಂದು. ಈ ಒಂದು ಪ್ರಶ್ನೆ ಎದ್ದಾಗ ಅದನ್ನು ಅಭಿವ್ಯಕ್ತಿ ಮಾಡಿರಬಹುದು. ಮಾಡಿಲ್ಲದೆ ಇರಬಹುದು. ಈ ಒಂದು ಪ್ರತಿರೋಧ ಕಡಿಮೆ ಪ್ರಮಾಣದಲ್ಲಿ ಇರಬಹುದು ಅಥವಾ ತೀವ್ರ ಪ್ರಮಾಣದಲ್ಲಾದರೂ ಇರಬಹುದು. ಇಲ್ಲವೇ ಅದನ್ನು ಬೇರೆ-ಬೇರೆ ಮಾದರಿಗಳಲ್ಲಿ ತೋರಿಸಿಕೊಂಡಿರಬಹುದು. ಅದು ಹೊರ ಜಗತ್ತಿಗೆ ಗೊತ್ತಾಗಿರದೇ ಇರಬಹುದು. ಆದ್ದರಿಂದ ಆಶಾದೇವಿಯವರು ಪ್ರತಿಭಟನೆಯ ನೂರು ದಾರಿಗಳಿದ್ದಾವೆ ಮಹಿಳೆಗೆ ಎಂಬುದನ್ನು ತೋರಿಸಿಕೊಡುತ್ತಿದ್ದಾರೆ. ಈ ಮೂಲಕ ಒಳದಾರಿ ಎನ್ನುವುದು ಹೆಣ್ಣು ಮಕ್ಕಳ ಮಟ್ಟಿಗೆ ನಿಜಹಾಗಿರುವ ಹಾಗೇ ಯಾರಿಗೂ ನಿಜ ಹಾಗಿರುವುದಕ್ಕೆ ಸಾಧ್ಯವಿಲ್ಲ ಎನ್ನವುದನ್ನು ಸೀತೆ, ದ್ರೌಪದಿಯರ ಮೂಲಕ ಗುರುತಿಸುತ್ತಾರೆ. ಈ ಮೂಲಕ ಆಶಾ ಮಹಿಳಾ ಹೋರಾಟಕ್ಕೆ ಬೆಂಬಲವನ್ನು ಕೊಡುವ ಭಾಗವಾಗಿ ತಮ್ಮ ಸ್ತ್ರೀವಾದದ ಮೂಲಕ ಸ್ತ್ರೀ ಚೈತನ್ಯದ ವಿವಿಧ ಮುಖಗಳ ಅನಾವರಣ ಮಾಡುತ್ತಾರೆ. ಬದುಕಿನ ಬಿಕ್ಕಟ್ಟುಗಳ ನಿರ್ಣಾಯಕ ಗಳಿಗೆಯಲ್ಲಿ ಹೆಣ್ಣು ಕುಗ್ಗದೇ, ಸೋಲದೆ, ಬದುಕಿಗೆ ಬೆನ್ನು ತಿರುಗಿಸದೆ ನಡೆಸುವ ನಿರಂತರ ಹೋರಾಟವನ್ನು ಶೋಧಿಸುವುದು ಅವರ ಉದ್ದೇಶವಾಗಿದೆ.

**೫.೩. ಪರ್ಯಾಯ ಪ್ರತಿಭಟನಾ ನೆಲೆಯ ಚಿಂತನೆಗಳು**

ಮಹಿಳೆಯರು ಚರಿತ್ರೆಯಲ್ಲಾಗಲಿ, ಸಮಕಾಲೀನದಲ್ಲಾಗಲಿ, ತಮ್ಮ ವಿರೋಧವನ್ನು ವ್ಯಕ್ತಪಡಿಸಲು ನೇರವಾದ ದಾರಿಗಳನ್ನು ಬಳಸಿದಂತೆಯೇ ಒಳದಾರಿಗಳನ್ನು ಬಳಸಿಕೊಂಡು ಯಶಸ್ವಿಯಾಗಿದ್ದಾರೆ. ಇಂದಿಗೂ ಕೂಡ ಮಹಿಳೆಯರು ತಮ್ಮ ಹೋರಾಟವನ್ನು, ಪ್ರತಿರೋಧವನ್ನು ನೇರವಾಗಿ ವ್ಯಕ್ತಪಡಿಸಲು

ಸಾಧ್ಯವಾಗದೇ ಇದ್ದಾಗ ಪರ್ಯಾಯ ದಾರಿ ಮತ್ತು ತಂತ್ರಗಳನ್ನು ಹುಟ್ಟಿಹಾಕಿಕೊಂಡಿದ್ದಾರೆ. ಇದರ ಒಂದು ಭಾಗವಾಗಿಯೇ ಮಹಿಳಾ ಪ್ರತಿಭಟನೆಯು ಯಾವ ಮಾದರಿಗಳಲ್ಲಿ ಇದೆ ಎಂಬುದನ್ನು ಶೋಧಿಸುವ ಉದ್ದೇಶ ಆಶಾ ಅವರದ್ದಾಗಿದೆ. ಹೀಗೆ ಮಹಿಳೆಯರು ಹುಟ್ಟುಹಾಕಿಕೊಂಡ ಪರ್ಯಾಯ ಮತ್ತು ಒಳದಾರಿಗಳನ್ನು ಈ ಕೆಳಕಂಡ ಅಂಶಗಳ ಮೂಲಕ ವಿಶ್ಲೇಷಿಸಬಹುದು.

**೫.೩.೧. ಭಕ್ತಿ ಕಾವ್ಯದ ಪ್ರತಿಭಟನಾ ನೆಲೆ**

ಮಹಿಳೆಯರು ಅನಾದಿ ಕಾಲದಿಂದಲೂ ಸಾಹಿತ್ಯದ ಮೂಲಕ ಪರ್ಯಾಯ ದಾರಿಗಳನ್ನು ಹುಡುಕಿಕೊಂಡಿದ್ದಾರೆ. ಇಂದು ಕೂಡ ಇದೇ ಕಾವ್ಯವು ಮಹಿಳೆಯರಿಗೆ ದನಿಯಾಗಿದೆ. ಮಹಿಳೆಯರು ಆಧುನಿಕತೆಗೆ ಒಳಗಾಗದೆ ಇರುವ ಕಾಲದಲ್ಲಿ ಮಾಡಿದ ವ್ಯಕ್ತಿಗತ ಹೋರಾಟವನ್ನು ಸಾರ್ವತ್ರಿಕ ಎಂದು, ಸ್ಥಳೀಯ ಹೋರಾಟವನ್ನು ವಿಶ್ವಾತ್ಮಕ ಹೋರಾಟ ಎಂದು ಗುರುತಿಸುತ್ತಾ ಮಹಿಳೆಯರು ಮಾಡಿದ ಹೋರಾಟಕ್ಕೆ ವಿಶ್ವದ ಆಯಾಮವನ್ನು ತಂದು ಕೊಡುತ್ತಾರೆ. ಇದನ್ನು ವಚನ ಸಾಹಿತ್ಯದ ಭಕ್ತಿ ಸಾಹಿತ್ಯದ ಅನುಭಾವಿ ಕವಿಗಳ ಮೂಲಕ ಗುರುತಿಸುತ್ತಾರೆ.

ಭಕ್ತಿ ಎನ್ನುವುದು ಶರಣಾಗತಿಯ ಒಂದು ಭಾವ. ಆದರೆ ಇದು ಬಂಡಾಯವೂ ಆಗಿದೆ. ಹಾಗಾಗಿ ಬಂಡಾಯ ಮತ್ತು ಪ್ರತಿಭಟನೆಯು ಬೇರೆ ಬೇರೆ ವಿಧಾನಗಳಲ್ಲಿ ಇದೆ ಎನ್ನುವುದನ್ನು ಅವರು ಚರಿತ್ರೆಯ ಪುರಾವೆಗಳ ಮೂಲಕ ಶೋಧಿಸುತ್ತಾರೆ. ಈ ಮೂಲಕ ಭಕ್ತಿ ಮತ್ತು ಬಂಡಾಯಕ್ಕು ಇರುವ ಅಂತರ್ ಸಂಬಂಧವನ್ನು ಕುರಿತು ಆಶಾ ಅವರು ಹೀಗೆ ಹೇಳುತ್ತಾರೆ: "ಭಕ್ತಿ ಎನ್ನುವ ಭಿತ್ತಿಯನ್ನು ಬಳಸಿಯೇ ಇವರೆಲ್ಲರು ತಮ್ಮ ಸಮಾಜಿಕ ಮತ್ತು ಲೌಕಿಕ ಹೋರಾಟದ ನೆಲೆಗಳನ್ನು ನಿರ್ಧರಿಸುವುದಂತೂ ಮಹಿಳೆಯರ ಹೋರಾಟದ ರೋಮಾಂಚನಕಾರಿ ಘಟ್ಟವಾಗಿದೆ. ಈ ಎಲ್ಲಾ ಹೋರಾಟಗಳನ್ನು ಪಿತೃಸಂಸ್ಕೃತಿ ನಿರಂತರವಾಗಿ ಒಂದಲ್ಲ ಒಂದು ಛದ್ಮವೇಷದಲ್ಲಿ ಹೆಣ್ಣನ್ನು ನಿಯಂತ್ರಿಸಲು ಪ್ರಯತ್ನಿಸುವುದಕ್ಕೆ ಪ್ರತಿಯಾಗಿ, ಈ ಮಹಿಳೆಯರು ಭಕ್ತಿ ಎನ್ನುವುದನ್ನು ಛದ್ಮವೇಷವಾಗಿ ಬಳಸಿಕೊಂಡು ತಾವು ಬದುಕುತ್ತಿರುವ ಕಾಲಘಟ್ಟದ ಮೌಲ್ಯ ವ್ಯವಸ್ಥೆಯ ಜೊತೆ ಮುಖಾಮುಖಿಯನ್ನು ನಡೆಸುತ್ತಿದ್ದಾರೆ ಎಂದು ಅನಿಸುತ್ತದೆ."[೨] ಇವರ ಪ್ರಕಾರ ಭಕ್ತಿ ಎಂದರೆ ನಮ್ಮನ್ನು ನಾವು ಚಿಕ್ಕವರನ್ನಾಗಿ ಮಾಡಿಕೊಳ್ಳುವುದು. ಆದರೆ ಹೆಣ್ಣನ್ನು ಈಗಾಗಲೇ ಚಿಕ್ಕವರನ್ನಾಗಿ ಮಾಡಲಾಗಿದೆ. ಭಕ್ತಿಯನ್ನು ಹೋರಾಟದ ಸಾಧನನ್ನಾಗಿ ಮಾಡಿಕೊಂಡರೆ ಇನ್ನು ಚಿಕ್ಕವರನ್ನಾಗಿಸುತ್ತದೆ ಎಂಬ ವಾದವನ್ನು ವಿರೋಧಿಸುತ್ತಾರೆ. ಇದರಿಂದಲೇ ಭಕ್ತಿ ಕವಿಗಳು ತಮ್ಮ ಬಂಡಾಯಕ್ಕೆ ಭಕ್ತಿಯನ್ನು ಪರೋಕ್ಷ ಮಾರ್ಗವಾಗಿಸಿಕೊಂಡರು ಎಂಬುದಾಗಿ ತಿಳಿಸುತ್ತಾರೆ.

ದೈವದ ನೆಪದಲ್ಲಿ ಮಹಿಳೆಯು ತನ್ನ ನಿಜವಾದ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತ, ನಿಜವಾದ ಭಾವನೆಯನ್ನು ವ್ಯಕ್ತಪಡಿಸುತ್ತಾಳೆ. ಈ ಮೂಲಕ ದೇವರನ್ನು ನೇರವಾಗಿ ಆರಾಧಿಸಲು ಸಾಧ್ಯವಾಗದೇ ಇದ್ದ ಸಂಧರ್ಭದಲ್ಲಿ, ಪುರುಷ ಸಮಾಜಕ್ಕೆ ನೇರವಾಗಿ ಪ್ರತಿರೋಧ ವ್ಯಕ್ತಪಡಿಸಲು ಸಾಧ್ಯವಾಗದ ಕಾಲದಲ್ಲಿ, ಭಕ್ತಿಯನ್ನು ಒಂದು ಸಾಧನವನ್ನಾಗಿ, ಛದ್ಮವೇಷವನ್ನಾಗಿ ಮಾಡಿಕೊಂಡಿದ್ದಾರೆ. ಇದರಿಂದ ಇದುವರೆಗೆ ಭಕ್ತಿ ಕವಿಗಳನ್ನು ವ್ಯಾಖ್ಯಾನ ಮಾಡಲಾದ ವಿಧಾನಕ್ಕಿಂತ ಭಿನ್ನವಾಗಿ ವ್ಯಾಖ್ಯಾನ ಮಾಡುತ್ತಾರೆ. ಭಿನ್ನವಾಗಿ ಗ್ರಹಿಸುತ್ತಾರೆ.

ಇನ್ನು ಭಕ್ತಿಕವಿಗಳು ಪುರುಷ ವ್ಯವಸ್ಥೆಯನ್ನು ಬಳಸಿಯೇ ಯಶಸ್ವಿಯಾದ ಬಗ್ಗೆ ಆಶಾ ಚರ್ಚಿಸುತ್ತ "ಪುರುಷ ಭಾಷೆ, ಅವರ ಚೌಕಟ್ಟನ್ನು ಬಳಸಿಯೇ ಅವರನ್ನು ಪ್ರಶ್ನಿಸುವ, ಧಿಕ್ಕರಿಸುವ ಮಾತ್ರವಲ್ಲ ತಮ್ಮದೇ ಆದ ತಾತ್ವಿಕತೆಯನ್ನು ಮಂಡಿಸಿದ ಈ ಅಪೂರ್ವ ಮಹಿಳೆಯರ ಬಗ್ಗೆ ಗೌರವ ಮಾತ್ರ ಅಲ್ಲ ಆರಾಧನೆ ಹುಟ್ಟುತ್ತದೆ ಎಂದು ಹೇಳುತ್ತಾರೆ."[೧೩] ಈ ಮೂಲಕ ಮಹಿಳೆಯರು ಸಾಧಿಸಿದ ಯಶಸ್ಸನ್ನು ಕುರಿತು ಪ್ರಶಂಸೆ ವ್ಯಕ್ತಪಡಿಸುತ್ತಾರೆ. ಹೀಗೆ ಪುರುಷ ವ್ಯವಸ್ಥೆಯನ್ನು ಬಳಸಿ ಅವರ ಗ್ರಹಿಕೆಗಳನ್ನು ಮುರಿಯುವುದನ್ನು ಭಕ್ತಿ ಕವಿಗಳು ತೋರಿಸಿಕೊಡುವುದನ್ನು ಆಶಾ ಗುರುತಿಸುತ್ತಾರೆ. ಏಕೆಂದರೆ ಹಾಗೇ ಹೊರಬರಬೇಕೆಂಬುದು ಆಶಾ ಅವರ ವಾದ. ಈ ಮೂಲಕ ಹೋರಾಟ ಮಾಡಿ ತಮ್ಮ ಅಸ್ತಿತ್ವವನ್ನು ಬದುಕನ್ನು ಕಟ್ಟಿಕೊಳ್ಳಬೇಕೆಂದು ವಿಮರ್ಶಕಿಯ ಒತ್ತಾಸೆ. ಇದರಿಂದ ಭಕ್ತಿ ಕವಿಗಳು ಹುಟ್ಟುಹಾಕಿದ ತಾತ್ವಿಕತೆಯನ್ನು ಮುನ್ನೆಲೆಗೆ ತರುತ್ತಾರೆ. ಇದಕ್ಕೆ ಪೂರಕವಾಗಿ ಆಶಾ ಅವರು ಅಕ್ಕ ಮತ್ತು ಆಂಡಾಳ್ ಕವಿತೆಗಳನ್ನು ಪ್ರಾಸಂಗಿಕವಾಗಿ ಚರ್ಚಿಸುತ್ತಾರೆ:

ಒಮ್ಮೆ ಕಾಮನ ಕಾಲ ಹಿಡಿವೆ

ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ

ಸುಡಲೀ ವಿರಹವ, ನಾನಾರಿಗೆ ಧೃತಿಗೆಡುವೆ?

ಚನ್ನಮಲ್ಲಿಕಾರ್ಜುನನ ಕಾರಣ

ಎಲ್ಲರಿಗೆ ಹಂಗುಗುತ್ತಿಯಾದೆನವ್ವಾ ('ಅಕ್ಕಮಹಾದೇವಿ')

ನಾನು ಕರೆಯುತ್ತಲೇ ಇದ್ದೇನೆ ಗೋವರ್ಧನಿಗಾಗಿ

ನಾನು ಬದುಕಿದ್ದೇನೋ ಸತ್ತಿದ್ದೇನೋ ಯಾರಿಗೆ ಬೇಕಾಗಿದೆ?

ಪ್ರಣಯೋನ್ಮಾದಿನಿಯಾಗಿ ನಾನು.......... ('ಆಂಡಾಳ್')

ಈ ಮೇಲ್ಕಂಡ ಕಾವ್ಯದಲ್ಲಿ ಮಹಿಳೆಯರಿಗೆ ತಮ್ಮ ಕುಟುಂಬದ, ವಿವಾಹದ ಚೌಕಟ್ಟಿನ ಆಚೆಯ ಪುರುಷರ ಬಗ್ಗೆ ಇದ್ದ ಭಾವನೆಗಳನ್ನು ಹೊರಹಾಕಲು ಅವಕಾಶ ಕೊಡದೆ ಇದ್ದ ಸಂದರ್ಭದಲ್ಲಿ ಈ ರೀತಿ ದೈವೀಕರಣದ ಭಾಷೆ ಬಳಕೆಯಾಗುತ್ತದೆ. ಹೀಗೆ ಗುಪ್ತ ಹಾದಿಗಳ ಮೂಲಕ ಮಹಿಳೆಯರು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಅಡ್ಡಿಯಾಗಿರುವ ಸಮಾಜವನ್ನು ವಿರೋಧಿಸಲು ರಹಸ್ಯ ಮಾರ್ಗಗಳನ್ನು ಅನುಸರಿಸಿದ್ದಾರೆ. ಈ ರಹಸ್ಯ ಮಾರ್ಗಗಳಲ್ಲಿ ಭಕ್ತಿ ಕಾವ್ಯವು ಪರ್ಯಾಯ ಪ್ರತಿಭಟನೆಯ ಒಂದು ಹಾದಿ ಎಂಬುದು ಆಶಾ ಅವರ ನಿಲುವು. ಈ ರೀತಿ ಭಕ್ತಿ ಕವಿಗಳು ಎಷ್ಟೋ ಹೆಣ್ಣು ಮಕ್ಕಳ ಪರವಾಗಿ ಮಾತನಾಡುತ್ತಾರೆ. ದೇವರ ಹೆಸರಲ್ಲಿ ತಮ್ಮ ಅಭಿವ್ಯಕ್ತಿಯನ್ನು ಒಳದಾರಿಗಳ ಮೂಲಕ ವ್ಯಕ್ತಪಡಿಸುತ್ತಾರೆ. ಈ ಮೂಲಕ ಆಶಾದೇವಿ ಪುರುಷ ಯಜಮಾನಿಕೆಯ ಮಾದರಿಗಳಿಗೆ ಪ್ರತಿರೋಧವಾಗಿ ಮಹಿಳೆಯರು ರೂಪಿಸಿಕೊಂಡ ಪರ್ಯಾಯ ಮಾದರಿಗಳ ಹುಡುಕಾಟ ಮಾಡುತ್ತಾರೆ. ಇದರ ಭಾಗವಾಗಿ ಒಬ್ಬ ಕವಿಯ

ಚರ್ಚೆಯ ಮೂಲಕ ಭಾರತದ ಬೇರೆ ಬೇರೆ ಕವಿಗಳನ್ನು ಜೋಡಿಸಿ ತೌಲನಿಕ ಅಧ್ಯಯನ ಮಾಡುತ್ತಾರೆ. ಇದು ಆಶಾದೇವಿಯವರ ಚಿಂತನೆಯ ಪ್ರಮುಖ ಗುಣ.

ಇದುವರೆಗೆ ಸಂಸಾರ ಬಿಟ್ಟು, ಗಂಡನನ್ನು ಬಿಟ್ಟು ಮದುವೆ ಆಗದ ಮಹಿಳೆಯರು ಮಾತ್ರ ಸ್ತ್ರೀವಾದಿಗಳಿಗೆ ಮಾದರಿ ಎನ್ನುತ್ತಿದ್ದರು. ಆದರೆ ಕುಟುಂಬದ ಒಳಗೆ ಇದ್ದು ದೇವರ ಮೂಲಕ ಪ್ರೀತಿ ಮಾಡುವ ವಿಧಾನಗಳನ್ನು ಶೋಧಿಸುತ್ತಾರೆ. ಈ ಮೂಲಕ ಸಂಪ್ರದಾಯದಲ್ಲಿರುವ ಸ್ತ್ರೀವಾದವನ್ನು ಗುರುತಿಸುತ್ತಾರೆ; ಮಹಿಳಾ ಕವಿಗಳಿಗೆ ದಾಂಪತ್ಯದ ಬಗ್ಗೆ ಇದ್ದ ಅಭಿಪ್ರಾಯವನ್ನು ಕುರಿತು ಈ ಕೆಳಕಂಡಂತೆ ಹೇಳುತ್ತಾರೆ. "ಈ ಮಹಿಳೆಯರು ಲೌಖಿಕವಲ್ಲದ ದಾಂಪತ್ಯವನ್ನು ನಿರಾಕರಿಸುತ್ತಿಲ್ಲ. ಹೆಣ್ಣಿನ ಆಯ್ಕೆಯಲ್ಲದ ಸರಿಪಾಲಿಲ್ಲದ ವ್ಯವಸ್ಥೆಯನ್ನು ನಿರಾಕರಿಸುತ್ತಿದ್ದಾರೆ"[೧೪] ಈ ಮೇಲ್ಕಂಡ ಹೇಳಿಕೆಯಲ್ಲಿ ಭಕ್ತಿ ಕವಿಗಳು ಪ್ರತಿನಿಧಿಸುತ್ತಿರುವ ಮಹಿಳೆಯರು ಗಂಡ ಎಂಬ ಪರಿಕಲ್ಪನೆಯನ್ನು ನಿರಾಕರಿಸಿ ಸಖನ ಪರಿಕಲ್ಪನೆಯನ್ನು ತರುತ್ತಾರೆ. ಈ ಮೂಲಕ ಮಹಿಳೆಯರು ಗಂಡನನ್ನು, ಮದುವೆಯನ್ನು, ಕುಟುಂಬವನ್ನು, ನಿರಾಕರಿಸುತ್ತಿಲ್ಲ, ತಮ್ಮನ್ನು ಸಮಾನ ದೃಷ್ಟಿಯಿಂದ, ನೆಲೆಯಿಂದ ನಡೆಸಿಕೊಳ್ಳದ ಕುಟುಂಬವನ್ನು ನಿರಾಕರಿಸುತ್ತಿದ್ದಾರೆ. ಇದನ್ನು ಭಕ್ತಿಕವಿಗಳ ಮೂಲಕ ಆಶಾ ಶೋಧಿಸುತ್ತಾರೆ. ಈ ಮೂಲಕ ಮಹಿಳಾ ಸಾಹಿತ್ಯ, ಮಹಿಳಾ ಕವಿಗಳ ಬಗ್ಗೆ ಇದುವರೆಗೆ ಇದ್ದ ಓದನ್ನು ಮರುಓದಿಗೆ, ಮರು ವ್ಯಾಖ್ಯಾನಕ್ಕೆ ಒಳಪಡಿಸುತ್ತಾರೆ. ಇದರಿಂದ ಭಕ್ತಿ ಕವಿಗಳ ಬಗ್ಗೆ ಸೀಮಿತ ಅಭಿಪ್ರಾಯಗಳನ್ನು ಹೋಗಲಾಡಿಸುತ್ತಾರೆ; ಮಹಿಳಾ ಕಾವ್ಯದ ಹುಟ್ಟಿನ ಸಾಮಾಜಿಕ ಒತ್ತಡಗಳನ್ನು ಮಹಿಳಾ ಕಾವ್ಯದ ವಿಶಿಷ್ಟತೆಯನ್ನು ಗುರುತಿಸುತ್ತಾರೆ.



ಆಶಾದೇವಿಯವರು ಆಧುನಿಕವಾಗಿ ವೈಚಾರಿಕ ಚಿಂತನೆ ಇಲ್ಲದ ಕಾಲದಲ್ಲಿ ಮಾಡಿದ ಹೋರಾಟವನ್ನು ಸಾರ್ವತ್ರಿಕ ಹೋರಾಟ ಎಂದು ಹೇಳುತ್ತಾರೆ. ಸ್ಥಳೀಯ ಹೋರಾಟವನ್ನು ವಿಶ್ವಾತ್ಮಕ ಹೋರಾಟ ಎಂದು ಹೇಳುತ್ತಾರೆ. ಸ್ಥಳೀಯತೆಯಲ್ಲಿ ವಿಶ್ವಾತ್ಮಕತೆಯನ್ನು ಹುಡುಕುವುದು, ವೈಯಕ್ತಿಕತೆಯಲ್ಲಿ ಸಾರ್ವತ್ರಿಕತೆ ಹುಡುಕುವುದು ಇವರ ಚಿಂತನೆಯ ಉದ್ದೇಶವಾಗಿದೆ. ಇದನ್ನು ಭಕ್ತಿ ಸಾಹಿತ್ಯದ ಮೂಲಕ ಪ್ರಚುರಪಡಿಸುತ್ತಾರೆ. ಈ ಮೂಲಕ ಮಹಿಳೆಗಿರುವ ಕುಂದಿಲ್ಲದ ಆತ್ಮಘನತೆಯನ್ನು ಬದುಕಿನ ಪ್ರೀತಿಯನ್ನು ಮಹಿಳೆಯ ನಿಜದ ನೆಲೆಗಳನ್ನು ಶೋಧಿಸುತ್ತಾರೆ. 'ಅಕ್ಕಮಹಾದೇವಿ' ಮತ್ತು 'ಆಂಡಾಳ್' ಕವಿತೆಗಳ ಮೂಲಕ ದೇಹವನ್ನು ಕುರಿತ ಮಹಿಳೆಯ ಚಿಂತನೆಗಳನ್ನು ತಾತ್ವಿಕವಾಗಿ ಚರ್ಚಿಸುತ್ತಾರೆ. ಭಕ್ತಿಯನ್ನು ಧಾರ್ಮಿಕ ಭಾವನೆಯ ನೆಲೆಯಲ್ಲಿ ಗ್ರಹಿಸದೆ ಅದಕ್ಕೆ ಬದಲಾಗಿ ಬಂಡಾಯದ ಪರ್ಯಾಯ ಪ್ರತಿಭಟನೆ ವಿಧಾನದ ಭಾಗವಾಗಿ ನೋಡುತ್ತಾರೆ.

ಹೀಗೆ ನೇರವಾಗಿ ಅಭಿವ್ಯಕ್ತಿಸುವ ಮಾರ್ಗಗಳು ಮುಚ್ಚಿ ಹೋದಾಗ ಬಹುಪಾಲು ಜನ ಪ್ರತಿರೋಧವನ್ನು ಪರ್ಯಾಯ ವಿಧಾನಗಳಲ್ಲಿ ಹೊರಹಾಕುತ್ತಾರೆ. ಈ ಮೂಲಕ ಅನುಭಾವಿಗಳ ವ್ಯಕ್ತಿತ್ವವನ್ನು ಬರವಣಿಗೆಯ ಅಧ್ಯಯನಗಳನ್ನು ಮರುವ್ಯಾಖ್ಯಾನಕ್ಕೆ ಒಳಪಡಿಸಿದ್ದಾರೆ. ಇವರು ಭಕ್ತಿಯ ಮೂಲಕ ದೇವರನ್ನು ಮೀರಿ ನಿಂತ ನೆಲೆಯನ್ನು ನೋಡಬಹುದು. ಹೀಗೆ ತನ್ನನ್ನು ತಾನು ಅರ್ಪಿಸಿಕೊಂಡು ದೇವರ ಭಕ್ತಿಯಲ್ಲಿ ತಲ್ಲೀನರಾಗಿ ಬದುಕಿರುವ ಹಲವಾರು ಉದಾಹರಣೆಗಳು ದೊರೆಯುತ್ತವೆ. ಪುರುಷ ಸಮಾಜದ ಬಂಧನದಿಂದ ದೂರವಾಗಲು ಭಕ್ತಿಯ ಮಾರ್ಗವನ್ನು

ಹಿಡಿದಿರುವುದನ್ನು ಈ ಹಿನ್ನೆಲೆಯಲ್ಲಿ ಗುರುತಿಸಬಹುದು. ಹೀಗೆ ದೇವರಿಗೆ ಅರ್ಪಿಸಿಕೊಂಡು ಪಿತೃ ಸಂಸ್ಕೃತಿಯು ಮಹಿಳೆಗೆ ಕೊಡದೆ ಇರುವ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಭಕ್ತಿಯ ಮೂಲಕ ಪಡೆದಿರುವ ಉಪಾಯಗಾರಿಕೆಯನ್ನು ಗುರುತಿಸುತ್ತಾರೆ. ಇದರ ಮೂಲಕ ಪಿತೃಸಂಸ್ಕೃತಿಯ ವ್ಯವಸ್ಥೆಯನ್ನು ತಿರಸ್ಕರಿಸುತ್ತಾರೆ. ಮಹಿಳಾ ಅನುಭಾವಿಗಳು ಪರೋಕ್ಷವಾಗಿ ಹುಟ್ಟು ಹಾಕಿದ ಸ್ತ್ರೀವಾದಿ ಹೋರಾಟದ ಎಳೆಗಳನ್ನು ಚರಿತ್ರೆಯ ಆಧಾರಗಳ ಮೂಲಕ ಚರ್ಚಿಸುತ್ತಾರೆ.

ಆದರೆ ಪಿತೃಪ್ರಧಾನ ಸಂಸ್ಕೃತಿಯು ಮಹಿಳೆಯರ ಪ್ರತಿರೋಧದ ಆಯಾಮಗಳು ಮುನ್ನೆಲೆಗೆ ಬರದಂತೆ ತಡೆಯಲು ಹಲವಾರು ತಂತ್ರಗಳನ್ನು ಕಾಲ ಕಾಲಕ್ಕೆ ಚಾಲ್ತಿಗೆ ತರುತ್ತಿದೆ. ಇದರ ಭಾಗವಾಗಿಯೇ ಭಕ್ತಿ ಕವಿಗಳನ್ನು ಭಕ್ತಿ ಸಾಹಿತ್ಯದ ಮೂಲಕ ನಡೆಸಿದ ಹೋರಾಟವನ್ನು ದೇವರ ನೆಲೆಯಲ್ಲಿ ಧಾರ್ಮಿಕ ಚೌಕಟ್ಟಿನೊಳಗೆ ದೈವೀಕರಿಸುತ್ತಾ, ಹೋರಾಟದ ಹಾದಿಗಳನ್ನು ಮುಚ್ಚಿ ಹಾಕುತ್ತಿದೆ. ಅವರ ಹೋರಾಟವನ್ನು ಭಕ್ತಿ ಕವಿಗಳು ಎತ್ತುವ ಪ್ರತಿರೋಧಗಳನ್ನು, ಪ್ರಶ್ನೆಗಳನ್ನು, ಸಾಮಾಜಿಕ ಪ್ರಶ್ನೆಗಳಾಗಿ ಚರ್ಚಿಸುವ ಕಡೆಗೆ ಗಮನ ಹರಿಸುವುದಿಲ್ಲ. ಆದ್ದರಿಂದಲೇ ಪ್ರತಿರೋಧದ ಆಯಾಮಗಳನ್ನು ಚರ್ಚಿಸದೆ, ಭಕ್ತಿಯನ್ನು ಕುರಿತಂತೆ ಇರುವ ಅವರ ನಿಲುವುಗಳನ್ನು ಮುನ್ನೆಲೆಗೆ ತರುತ್ತಾರೆ. ಅಕ್ಕಮಹಾದೇವಿಯ ಹೋರಾಟವನ್ನು ವಿಶ್ಲೇಷಣೆ ಮಾಡುವಾಗ ಹೇಗೆ ಸಂಕುಚಿತ ಚೌಕಟ್ಟಿನಲ್ಲಿ ಇಡುತ್ತಾರೆ ಎಂಬುದರ ಬಗ್ಗೆ ಆಶಾ ಅವರು ಹೀಗೆ ಹೇಳುತ್ತಾರೆ. "ಅಕ್ಕಮಹಾದೇವಿಯಂತಹ ಸಂಕ್ರಮಣ ಕಾಲಘಟ್ಟವೊಂದರ ಪ್ರತಿನಿಧಿಯ ವ್ಯಕ್ತಿತ್ವವನ್ನು ಅದೆಲ್ಲಾ ಸಮೃದ್ಧತೆ ಶಕ್ತಿ, ಸೌಂದರ್ಯ, ಸಂಕೀರ್ಣತೆ, ದ್ವಂದ್ವ, ನಿರ್ಭೀತಿ ಪ್ರಾಮಾಣಿಕತೆ ಈ ಎಲ್ಲಾ ಬಹುಮುಖಿ ಆಯಾಮಗಳನ್ನು ಅವುಗಳ ಸಾಂದ್ರತೆ ಮತ್ತು ತೀವ್ರತೆಯಲ್ಲಿ ಗುರುತಿಸದೇ ಸರಳವಾಗಿ ಭಕ್ತಿ ಚಳುವಳಿಯ ಆಯಾಮವೊಂದರಲ್ಲಿಯೇ ಸ್ಥಾಪಿಸಲು ನಡೆಸಿದ ಪ್ರಜ್ಞಾಪೂರ್ವಕವಾದ ಪ್ರಯತ್ನವಾಗಿಯೇ ಬಹುಪಾಲು ಲೇಖನಗಳು ಕಾಣಿಸುತ್ತವೆ"[೧೫]

ಮೇಲ್ಕಾಣಿಸಿದ ಉಲ್ಲೇಖದಲ್ಲಿ ಮುಖ್ಯವಾಗಿ ಎರಡು ವಿಷಯಗಳನ್ನು ಹೇಳುತ್ತಿದ್ದಾರೆ. ಒಂದು- ಅಕ್ಕಮಹಾದೇವಿ ತನ್ನ ಕಾಲದಲ್ಲಿ ಒಂದು ಹೆಣ್ಣು ಯಾವ ಬಗೆಯಲ್ಲಿ ಹೋರಾಟ ಮಾಡುತ್ತಾ ಬದುಕಿದ್ದಳು ಎನ್ನುವುದನ್ನು ಹೇಳುತ್ತಾ, ಈ ಎಲ್ಲಾ ಸಂಕೀರ್ಣತೆಯನ್ನು ಪ್ರತಿನಿಧಿಸುವ ವ್ಯಕ್ತಿತ್ವವಾಗಿ ನೋಡುವುದು;. ಎರಡು-ಈ ಹೋರಾಟವನ್ನು ಅರ್ಥಮಾಡಿಕೊಳ್ಳದೆ, ಸರಳ ಭಕ್ತಿಯ ಆಯಾಮದಲ್ಲಿ ಸ್ಥಾಪಿಸುವ ಪ್ರಯತ್ನ ಮಾಡುತ್ತಿರುವುದನ್ನು ವಿರೋಧಿಸುವುದು. ಆಶಾದೇವಿಯವರು ಅಕ್ಕನ ಹೋರಾಟದ ಬದುಕನ್ನು ಹೋರಾಟದ ಚಿಂತನೆಯನ್ನು ಪುರುಷ ಸಂಸ್ಕೃತಿಯ ಚೌಕಟ್ಟಿನಲ್ಲಿ ಅರ್ಥಮಾಡಿಕೊಳ್ಳುವುದನ್ನು ಖಂಡಿಸುತ್ತಾರೆ. ಮೇಲ್ಕಾಣಿಸಿದ ಉಲ್ಲೇಖದಲ್ಲಿ ಎರಡು ಸಂಗತಿಗಳಿವೆ. ಅ. ಅಕ್ಕನ ವ್ಯಕ್ತಿತ್ವ ಎಂತಹದ್ದು ಎಂಬ ಬಗ್ಗೆ ಇದೆ. ಆ. ಅಂತಹ ಅಕ್ಕನನ್ನು ಹೇಗೆ ನೋಡುತ್ತಿದ್ದಾರೆ ಎಂಬುದಾಗಿ ಇದೆ. ಮೊದಲನೆಯದರಲ್ಲಿ ಅಕ್ಕನ ಸಂಕೀರ್ಣ ವ್ಯಕ್ತಿತ್ವದ ಚಿತ್ರಣ ಇದೆ. ಎರಡನೆಯದರಲ್ಲಿ ಆ ಸಂಕೀರ್ಣ ವ್ಯಕ್ತಿತ್ವವನ್ನು ಸರಳೀಕರಿಸುತ್ತಿರುವ ಚಿಂತನೆಗಳ ಬಗ್ಗೆ ಆಕ್ರೋಶ ವಿರೋಧ ಇದೆ. ಈ ಮೂಲಕ ಆಶಾ ಅವರು ಮಹಿಳೆಗೆ ಇರುವ ಶಕ್ತಿಯನ್ನು ಕೂಡ ನಿಶಕ್ತಗೊಳಿಸುವ ಕೆಲಸವನ್ನು ಮಾಡುತ್ತಿದೆ ಎಂದು ಹೇಳುತ್ತಾರೆ.

ಇನ್ನು ಮಹಿಳಾ ಕಾವ್ಯವನ್ನು ಮತ್ತು ಕಾವ್ಯದಲ್ಲಿನ ಹೋರಾಟವನ್ನು, ಕುರಿತಂತೆ ಆಶಾದೇವಿ ಹೀಗೆ ಹೇಳುತ್ತಾರೆ. "ಹೆಣ್ಣಿನ ಕಾವ್ಯವನ್ನು ಕಾವ್ಯದ ರೂಪದಲ್ಲಿನ ಅವಳ ಹೋರಾಟ ಮತ್ತು ಪ್ರತಿರೋಧವನ್ನು ರಾಜಕೀಯ ಕಥನವೆಂದು ಗುರುತಿಸಬೇಕಾಗಿರುವುದು ಮೂಲತಃ ಈ ಕಾರಣಕ್ಕಾಗಿಯೇ"[೧೬] ಈ ಹೇಳಿಕೆಯಲ್ಲಿ ಈ ಎಲ್ಲಾ ನಿಯಂತ್ರಣಗಳ ಮಧ್ಯೆ ಮಹಿಳಾ ಭಕ್ತಿ ಕವಿಗಳು ತಮ್ಮ ಕಾವ್ಯವನ್ನು ಪ್ರಬಲ ಆಯುಧವನ್ನಾಗಿ ಮಾಡಿಕೊಂಡು ಯುದ್ಧ ಮಾಡಿದರು, ಅದರೊಂದಿಗೆ ಗೆದ್ದರು ಎಂಬ ಬಗ್ಗೆ ಅಭಿಮಾನವಿದೆ. ಮಹಿಳಾ ಕಾವ್ಯದ ಮೂಲಕವಾಗಿಯೇ ಮಹಿಳಾ ಪ್ರತಿರೋಧದ ಚರಿತ್ರೆಯನ್ನು ಕಟ್ಟುವುದು ಲೇಖಕಿಯ ಉದ್ದೇಶವಾಗಿದೆ. ಕಾವ್ಯದ ಮೂಲಕವಾಗಿಯೇ ಮಹಿಳೆಯ ಚಹರೆಯನ್ನು ಆಕೆಯ ಹೋರಾಟವನ್ನು ವಿಸ್ತರಿಸುತ್ತಾರೆ.

ಪರ್ಯಾಯ ಪ್ರತಿಭಟನೆಯಲ್ಲಿ ಭಕ್ತಿ ಸಾಹಿತ್ಯದ ಅನುಭಾವಿಗಳಿಗೆ ಮತ್ತು ಆಧುನಿಕ ಕವಿಗಳಿಗೆ ರೂಪಕಗಳೇ ಪರ್ಯಾಯ ಪ್ರತಿಭಟನೆಯ ಸಾಧನಗಳಾಗಿವೆ. ಕಾವ್ಯದ ಮೂಲಕ ತಮ್ಮ ಮನಸ್ಸಿನ ತೊಳಲಾಟವನ್ನು, ವೇದನೆಯನ್ನು, ಪ್ರೀತಿಯನ್ನು ವ್ಯಕ್ತಪಡಿಸಬೇಕಾದಾಗ ಭಕ್ತಿ ಕವಿಗಳು ರೂಪಕದ ಭಾಷೆಯನ್ನು ಬಳಸುತ್ತಾರೆ. ಮಹಿಳಾ ಕವಿಗಳು ಬಳಸಿದ ಈ ರೂಪಕಗಳನ್ನು ಕುರಿತು ಆಶಾ ಅವರು ಹೀಗೆ ಹೇಳುತ್ತಾರೆ. "ರೂಪಕಗಳು ಸಾಂಸ್ಕೃತಿಕ ಕ್ಷೇತ್ರಗಳ ಪುರುಷರಿಗೆ ಶುದ್ಧ ಪ್ರತಿಭೆಯ ಸಂಕೇತಗಳಾದರೆ, ಮಹಿಳೆಯರಿಗೆ ಅನಿವಾರ್ಯ ಅಗತ್ಯ, ತನ್ನ ವ್ಯಕ್ತಿತ್ವದ ಅಧಿಕೃತತೆಗಾಗಿ ನಿರಂತರ ಪ್ರಯತ್ನಿಸುವ ಮಹಿಳೆಯರು ಬಿಚ್ಚಿ ಹೇಳಲಾಗದ್ದನ್ನು ಮುಚ್ಚಿ ಹೇಳುವುದಕ್ಕೆ ಹಾತೊರೆಯುತ್ತಾರೆ. ಅನೇಕ ಬಾರಿ ರೂಪಕಗಳು ಮಹಿಳೆಯರ ಅಡಗುತಾಣಗಳೂ ಹೌದು."[೧೭] ಈ ಮೂಲಕ ಆಶಾ ಅವರು ರೂಪಕಗಳು ಮಹಿಳೆಯರಿಗೆ ಮತ್ತು ಪುರುಷರಿಗೆ ಬಳಕೆಯಾಗುವ ಎರಡು ವಿಧಾನಗಳನ್ನು ಕೊಡುತ್ತಿದ್ದಾರೆ. ಇಲ್ಲಿ ರೂಪಕಗಳ ಬಳಕೆ ಮಹಿಳೆಯರಿಗೆ ಅನಿವಾರ್ಯ. ರೂಪಕಗಳನ್ನು ನಿರ್ದಿಷ್ಟ ಉದ್ದೇಶ ಮತ್ತು ಒತ್ತಡಗಳಿಗೆ ಮಹಿಳೆಯರು ಬಳಸುತ್ತಾರೆ. ಇವುಗಳಿಂದ ತಮ್ಮ ಅಸ್ತಿತ್ವವನ್ನು ಚಹರೆಯನ್ನು ಗುರುತಿಸಿಕೊಳ್ಳುತ್ತಾರೆ. ಆದರೆ ಪುರುಷರಿಗೆ ತಮ್ಮ ಪ್ರತಿಭೆಯ ದ್ಯೋತಕವಾಗಿ ಬಳಕೆಯಾಗುತ್ತದೆ. ಅವರಿಗೆ ರೂಪಕಗಳ ಬಳಕೆಯ ಹಿಂದೆ ಯಾವುದೇ ನಿಶ್ಚಿತ ಉದ್ದೇಶ, ಅನಿವಾರ್ಯ ಇರುವುದಿಲ್ಲ. ಇದರಿಂದ ರೂಪಕಗಳು ಮಹಿಳೆಯರಿಗೆ ಸಂಕೀರ್ಣ ವ್ಯಕ್ತಿತ್ವಗಳಾಗಿ ಕಂಡರೆ, ಪುರುಷರಿಗೆ ಪ್ರತಿಭೆಯ ಸಂಕೇತಗಳಾಗಿ ಕಾಣುತ್ತವೆ. ಈ ಉದ್ದೇಶದಿಂದ ಆಶಾ ಅವರು ಮಹಿಳೆ ಮತ್ತು ಪುರುಷರು ಬಳಸುವ ರೂಪಕಗಳನ್ನು ಬೈನರಿ ನೆಲೆಯಲ್ಲಿ ಗ್ರಹಿಸುತ್ತಾರೆ. ಈ ಮೂಲಕ ರೂಪಕಗಳ ಹಿಂದಿರುವ ಸಾಮಾಜಿಕ ಸಾಂಸ್ಕೃತಿಕ ಅನಿವಾರ್ಯತೆಯನ್ನು ಗ್ರಹಿಸುತ್ತಾ, ಇವುಗಳ ಮೂಲಕವಾಗಿ ಮಹಿಳೆಯ ಹೋರಾಟವನ್ನು ಶೋಧಿಸುತ್ತಾರೆ.

### ೫.೩.೨.ಮೌನ ಪ್ರತಿಭಟನೆಯ ನೆಲೆ

ಪರೋಕ್ಷ ಪ್ರತಿಭಟನೆ ನೆಲೆಯ ಇನ್ನೊಂದು ಪ್ರಬಲ ಆತ್ಯಂತಿಕ ಮಾಧ್ಯಮವೆಂದರೆ 'ಮೌನ'. ಕುಟುಂಬದಲ್ಲಿ, ಸಮಾಜದಲ್ಲಿ ಮಾಡುವ ದೌರ್ಜನ್ಯವನ್ನು ಮಹಿಳೆಯು ಕೆಲವೊಂದು ಸಾರಿ ದಿಟ್ಟತನದಿಂದ ವಾಚಾಳಿಯಾಗಿ ಆಕ್ರೋಶದಿಂದ ಪ್ರತಿಭಟಿಸಿದರೆ, ಕೆಲವು ಸಲ 'ಮೌನ'ವನ್ನು ತನ್ನ ಅಸ್ತ್ರವನ್ನಾಗಿಸಿಕೊಳ್ಳುತ್ತಾರೆ. ಉಪವಾಸ ಕೂರುವುದರಿಂದ, ಮಾತನ್ನು ಆಡದೆ ಇರುವುದರಿಂದ, ತಮ್ಮನ್ನು

ತಾವು ಶಿಕ್ಷೆಗೆ ಒಳಪಡಿಸಿಕೊಳ್ಳುವುದು ಕೂಡ ಒಂದು ಪ್ರತಿಭಟನೆಯ ಮಾದರಿ ಎನ್ನುವುದನ್ನು ಮಹಿಳೆಯರು ತೋರಿಸಿದ್ದಾರೆ. ಈ ಮೌನವನ್ನು ಅಸ್ತ್ರವನ್ನಾಗಿ ಬಳಸಿ ಪುರುಷ ಪ್ರಧಾನ ಸಮಾಜದ ವಿರುದ್ಧ ಅವರು ತಮ್ಮ ಆಕ್ರೋಶವನ್ನು ತೀರಿಸಿಕೊಳ್ಳುತ್ತಾರೆ. ಇದರಿಂದ ಹೆಣ್ಣಿಗೂ ಮೌನಕ್ಕೂ ಪ್ರತಿಭಟನೆಗೂ ಬಿಡಿಸಲಾರದ ಅಂತರ್‌ಸಂಬಂಧವಿದೆ. ಹಾಗಾಗಿ ಮೌನವೇ ಪ್ರತಿಭಟನೆಯ ಅಧಿಕೃತ ಮಾಧ್ಯಮವಾಗಿದೆ. ಈ ಮೌನವನ್ನು ಆಶಾದೇವಿಯವರು ರೂಪಕದ ನೆಲೆಯಲ್ಲಿ ಗ್ರಹಿಸುತ್ತಾರೆ. ಮೌನವನ್ನು ಕುರಿತು ಅದರ ಅಗತ್ಯತೆಯನ್ನು ಕುರಿತು "ಮೌನ ಹೆಣ್ಣಿನ ಸ್ಥಿತಿಗತಿಯ ಮಟ್ಟಿಗೆ ಒಂದು ರೂಪಕವು ಹೌದು ವಸ್ತುಸ್ಥಿತಿಯೂ ಹೌದು"[೧೮] ಎಂದು ಹೇಳುತ್ತಾರೆ. ಈ ಹೇಳಿಕೆಯಲ್ಲಿ ಮೌನವನ್ನು ಪರೋಕ್ಷವಾಗಿ ತನ್ನ ಅಸ್ತ್ರವನ್ನಾಗಿಸಿಕೊಂಡಿರುವುದನ್ನು ಶೋಧಿಸುತ್ತಾರೆ. ಮೌನವೇ ಮಹಿಳೆಗೆ ಪ್ರಧಾನ ಗುಣ ಎಂದು ಪುರುಷ ಸಮಾಜ ಶತಮಾನಗಳಿಂದಲೂ ಹೇರಿದೆ. ಆದರೆ ಅದೇ ಅಸ್ತ್ರವನ್ನು ಬಳಸಿಕೊಂಡು ವ್ಯವಸ್ಥೆಯನ್ನು ಖಂಡಿಸುತ್ತಾಳೆ. ಮಹಿಳೆಯ ಇಂದಿನ ಅವಸ್ಥೆಯನ್ನು ಗ್ರಹಿಸಿದರೆ ಆಕೆ ನೇರವಾಗಿ ಪ್ರತಿರೋಧ ವ್ಯಕ್ತಪಡಿಸಲು ಯಾವುದೇ ನೇರದಾರಿಗಳು ಇಲ್ಲ. ಇದರಿಂದ ಮೌನವನ್ನು ರೂಪಕದ ನೆಲೆಯಲ್ಲಿ ಪರೋಕ್ಷ ಸಾಧನವನ್ನಾಗಿ ಮಾಡಿಕೊಂಡಿರುವ ಮಹಿಳೆಯ ಉದ್ದೇಶವನ್ನು ಗುರುತಿಸುತ್ತಾರೆ. ಮಹಿಳೆಯ ಸುಃಖ ದುಃಖಗಳು, ಪ್ರತಿಭಟನೆಗಳು ಮೌನದಲ್ಲಿಯೇ ತುಂಬ ಶಕ್ತವಾಗಿ ಅಭಿವ್ಯಕ್ತವಾಗುತ್ತವೆ ಎಂಬುದು ಈ ಮೂಲಕ ಒಪ್ಪಿತವಾದ ಮಾತಾಗಿದೆ. ಈ ಎಲ್ಲವುದರ ಮೂಲಕ ಮೌನವು ಮಹಿಳೆಗೆ ಪ್ರತಿರೋಧದ ಶಕ್ತ ಮಾದರಿಯಾಗಿ ಮಾರ್ಪಾಡಾಗಿರುವುದನ್ನು ಆಶಾ ಶೋಧಿಸುತ್ತಾರೆ.

ಮೌನದ ಮೂಲಕ ಒಬ್ಬ ಮಹಿಳೆಯು ಕುಟುಂಬದಲ್ಲಿ ಹೇಗೆ ಪ್ರತಿರೋಧ ವ್ಯಕ್ತಪಡಿಸುತ್ತಾಳೆ ಎಂಬುದನ್ನು ಲೇಖಕಿ ಯಶವಂತ ಚಿತ್ತಾಲರ 'ಪುರುಷೋತ್ತಮ' ಕಾದಂಬರಿ ಮೂಲಕ ಗುರುತಿಸುತ್ತಾರೆ. ಗಂಡ ತನ್ನ ಮೇಲೆ ದಬ್ಬಾಳಿಕೆ ಮಾಡಿದಾಗ, ಹೊಡೆದಾಗ, ಮಾತನ್ನು ಆಡದಿರುವ ಮೂಲಕ ಮೌನವಾಗಿದ್ದು ತಾನೇ ಶಿಕ್ಷೆ ಅನುಭವಿಸುತ್ತಾಳೆ. ಹೀಗೆ ಕುಟುಂಬದಲ್ಲಿ ಒಬ್ಬ ಮಹಿಳೆ ಮಾಡಿದ ಹೋರಾಟದಿಂದ ಸಮಾಜದ ಇನ್ನೊಬ್ಬ ಮಹಿಳೆಯು ಪ್ರೇರಣೆ ಪಡೆಯುತ್ತಾಳೆ. ಒಬ್ಬ ಮಹಿಳೆಯು ಮಾಡಿದ ಹೋರಾಟವು ಇನ್ನು ಹಲವಾರು ಮಹಿಳೆಯರ ಪರವಾಗಿರುತ್ತದೆ ಎಂಬ ನಿಲುವಿಗೆ ಆಶಾದೇವಿ ಬರುತ್ತಾರೆ.

ಉಪವಾಸ ಕೂರುವುದು ಪ್ರತಿಭಟನೆಯ ಒಂದು ಮಾರ್ಗ ಎಂದು ಗಾಂಧಿ ಹೇಳುತ್ತಾರೆ. ಈ ಎಲ್ಲದರಿಂದ ಮಹಿಳೆ ಮಾಡುವ ಹೋರಾಟಕ್ಕೆ ವಿಶ್ವಾತ್ಮಕ ಆಯಾಮ ಇದೆ ಎಂಬುದನ್ನು ಗುರುತಿಸುತ್ತಾರೆ. ಒಂದು ಕುಟುಂಬದಲ್ಲಿ ಒಬ್ಬ ಮಹಿಳೆ ಉಪವಾಸ ಕೂರುವುದು, ಮೌನ ತಾಳುವುದು, ಸಮಾಜದ ಎಲ್ಲಾ ಮಹಿಳೆಯರ ಪರವಾಗಿರುತ್ತದೆ. ಇದರಿಂದ ಒಬ್ಬ ಮಹಿಳೆ ಹೋರಾಟವನ್ನು ಮಾಡಿದರೆ ಅದಕ್ಕೆ ವಿಶ್ವದ ಆಯಾಮ ಇದೆ ಎಂದು ಹೇಳುತ್ತಾರೆ. ಅಂದರೆ ವ್ಯಕ್ತಿಗತವಾದ ಹೋರಾಟ ಸಾರ್ವತ್ರಿಕ ಹೋರಾಟ ಎಂಬುದಾಗಿ ಹೇಳುತ್ತಾರೆ. ಹೀಗೆ ಮಹಿಳೆಯರು ತಮ್ಮ ಬದುಕಿನ ಎಲ್ಲಾ ಇಕ್ಕಟ್ಟುಗಳಲ್ಲಿ ಪ್ರತಿಭಟನೆ ಮಾಡಲು ತಮ್ಮ ಸ್ವಂತಿಕೆಯನ್ನು ಅಸ್ತಿತ್ವವನ್ನು ಹುಡುಕಿಕೊಳ್ಳಲು, ಅವಮಾನ ಬಂದಾಗ ಅದನ್ನು ಸಹಿಸದೆ ಯಾವೆಲ್ಲಾ ಪರ್ಯಾಯ ದಾರಿಗಳಿವೆಯೋ ಅವನ್ನೆಲ್ಲಾ ಹುಡುಕಿಕೊಂಡಿದ್ದಾರೆ. ಮಹಿಳೆಯರು ಹುಟ್ಟಿಸಿದ

ಆ ಎಲ್ಲಾ ಬಿಡುಗಡೆಯ ದಾರಿಗಳನ್ನು ಶೋಧಿಸುತ್ತಾರೆ. ಇದರ ಮೂಲಕ ಮಹಿಳಾ ಹೋರಾಟಕ್ಕೆ ಸಾರ್ವತ್ರಿಕ ಆಯಾಮವನ್ನು ಕೊಡುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಶಾ ಅವರು ಸಾಹಿತ್ಯವನ್ನು ಕೇವಲ ಕಲೆಗಾಗಿ, ರಸಿಕತೆಗಾಗಿ, ಮನರಂಜನೆಗಾಗಿ, ಓದುವುದಿಲ್ಲ. ಅದರಲ್ಲಿರುವ ಮಹಿಳಾ ಪ್ರತಿಭಟನೆಯ ಹಾದಿಗಳನ್ನು ಹೆಕ್ಕುವುದಕ್ಕೆ ಓದುತ್ತಾರೆ. ಈ ಮೂಲಕ ಮಹಿಳೆಯ ಲೋಕವನ್ನು ನೋಡುವ ದೃಷ್ಟಿಕೋನವನ್ನು ತಿಳಿಯಲು ಸಹಾಯಕವಾಗಿದೆ. ಹೀಗೆ ಪರಂಪರೆಯಲ್ಲಿನ, ಚರಿತ್ರೆಯಲ್ಲಿನ, ಬೇರೆ ಬೇರೆ ಪ್ರತಿಭಟನೆಯ ಮಾದರಿಗಳನ್ನು, ವಿಧಾನಗಳನ್ನು ಸರಳೀಕರಿಸದೆ ಆಧುನಿಕ ಸಂದರ್ಭದಲ್ಲಿ, ವರ್ತಮಾನದ ಸಂದರ್ಭದಲ್ಲಿ ನಿರಾಕರಿಸದೆ ಅಲ್ಲಿಯೂ ಬಂಡಾಯ ಇದೆ ಎಂಬುದನ್ನು ಗುರುತಿಸುತ್ತಾರೆ.

ಆದರೆ ಎಷ್ಟೋ ಪ್ರತಿಭಟನೆಗಳು ನಡೆದರೂ ಸಮಾಜದಲ್ಲಿ ಮಹಿಳೆಯನ್ನು ನೋಡುವ ದೃಷ್ಟಿಕೋನವಾಗಲಿ, ಅಸಮಾನತೆಯಾಗಲಿ ಇಂದಿಗೂ ಬದಲಾಗಿಲ್ಲ. ಹೀಗಾಗಿ ವಚನ ಸಾಹಿತ್ಯದಿಂದ, ಪ್ರಾಚೀನ ಸಾಹಿತ್ಯ ಪಠ್ಯಗಳಿಂದ ಇಂದಿನ ಆಧುನಿಕ ಪಠ್ಯಗಳವರೆಗೂ ಪ್ರತಿಭಟನೆಯ ಆಧಾರಗಳು ದೊರೆಯುತ್ತವೆ. ಆದ್ದರಿಂದ ಆಶಾದೇವಿಯವರು ದೇಶ ಕಾಲಾತೀತವಾಗಿ ಹೆಣ್ಣಿನ ಅವಸ್ಥೆ ಮತ್ತು ಸವಾಲುಗಳಲ್ಲಿ ಪರಮ ಸತ್ಯದಂತೆ ಇವೆ ಎಂದು ಹೇಳುತ್ತಾರೆ. ಇದಕ್ಕೆ ಆಧಾರವಾಗಿ ಜನಪದ ಕವಿಯೊಬ್ಬಳು ಹೇಳುವ "ಅಯ್ಯೋ ಆ ಸೀತಾದೇವಿಗೂ ಕಷ್ಟ ತಪ್ಪಲಿಲ್ಲವಂತೆ ಇನ್ನು ನನಗೆ ತಪ್ಪೀತೆ ಎಂಬ ಮಾತನ್ನು ಉಲ್ಲೇಖಿಸುತ್ತಾರೆ."[೧೯]

**ಕೊನೆ ಟಿಪ್ಪಣಿಗಳು**

೧. ಆಶಾದೇವಿ.ಎಂ.ಎಸ್., ನಡುವೆ ಸುಳಿವ ಆತ್ಮ, ಪು. ೧೩೯

೨. ಅದೇ, ಪು. ೧೪೦

೩. ಅದೇ, ಪು. ೧೪೦

೪. ಆಶಾದೇವಿ. ಎಂ.ಎಸ್., 'ಹರುಷದ ಧೈರ್ಯವುಳ್ಳ ಹೆಣ್ಣು', ಪು. ೨

೫. ಅದೇ, ಪು. ೨

೬. ಆಶಾದೇವಿ.ಎಂ.ಎಸ್., ನಡುವೆ ಸುಳಿವ ಆತ್ಮ, ಪು. ೨೨

೭. ಅದೇ, ಪು. ೨೪

೮. ಆಶಾದೇವಿ.ಎಂ.ಎಸ್., 'ಸ್ತ್ರೀಮತವನುತ್ತರಿಸಲಾಗದೆ? ಧರ್ಮಶಾಸ್ತ್ರದೊಳ್', ಪು. ೨

೯. ಅದೇ, ಪು. ೨

೧೦. ಆಶಾದೇವಿ.ಎಂ.ಎಸ್., ಸೀತೆ:ಅದಿಮ ಸ್ತ್ರೀವಾದಿ, ಪು. ೨

೧೧. ಅದೇ, ಪು. ೨

೧೨. ಆಶಾದೇವಿ ಎಂ.ಎಸ್., 'ಭಕ್ತಿ ಎನ್ನುವ ಬಂಡಾಯದ ಆಂಡಾಳ್', ಪು. ೨

೧೩. ಅದೇ, ಪು. ೨

೧೪. ಅದೇ, ಪು. ೨

೧೫. ಆಶಾದೇವಿ ಎಂ.ಎಸ್., ಸ್ತ್ರೀಮತವನುತ್ತರಿಸಲಾಗದೆ?, ಪು. ೭೧

೧೬. ಆಶಾದೇವಿ ಎಂ.ಎಸ್., 'ಭಕ್ತಿ ಎನ್ನುವ ಬಂಡಾಯದ ಆಂಡಾಳ್', ಪು. ೨

೧೭. ಆಶಾದೇವಿ ಎಂ.ಎಸ್., ನಡುವೆ ಸುಳಿವ ಆತ್ಮ, ಪು. ೧೪೩

೧೮. ಆಶಾದೇವಿ ಎಂ.ಎಸ್., ಸ್ತ್ರೀಮತವನುತ್ತರಿಸಲಾಗದೆ?, ಪು. ೧೨೦

೧೯. ಆಶಾದೇವಿ.ಎಂ.ಎಸ್., 'ದ್ರೋಪ್ದಿ ಎನ್ನುವ ಅಗ್ನಿಕನ್ಯೆ', ಪು. ೨

*****

# ಅಧ್ಯಾಯ–ಆರು

# ಆಶಾದೇವಿ ಚಿಂತನೆ: ಸ್ತ್ರೀ ಚೈತನ್ಯದ ವಿವಿಧ ಧಾತುಗಳು

## ೬.೧.ಪ್ರವೇಶ

ಮಹಿಳಾ ಜೀವಂತಿಕೆ ಎಂಬ ಪರಿಭಾಷೆಯು ವಿಶಾಲವಾದ ಅರ್ಥವ್ಯಾಪ್ತಿಯನ್ನು ಹೊಂದಿದೆ. ಮಹಿಳೆಗಿರುವ ಒಟ್ಟು ಚಹರೆಯನ್ನು ಜೀವಂತಿಕೆ ಎಂಬ ಪದವೇ ಹಿಡಿಯಾಗಿ ಕಟ್ಟಿಕೊಡುತ್ತದೆ. ಜೀವನ ಉತ್ಸಾಹ, ತ್ಯಾಗ, ಪ್ರೀತಿ, ಕರುಣೆ, ಸಧೃಡತೆ, ಮಾನಸಿಕ ಗಟ್ಟಿತನ, ಧೈರ್ಯ, ಆತ್ಮಸ್ಥೈರ್ಯ ಇಂತಹ ಗುಣಗಳೇ ಮಹಿಳೆಯ ಜೀವಂತಿಕೆಯ ಗುಣವನ್ನು ಹೆಚ್ಚಾಗಿ ಪ್ರಕಟಪಡಿಸುತ್ತವೆ. ಮಹಿಳೆಗಿರುವ ಈ ಎಲ್ಲಾ ಶಕ್ತಿಗಳನ್ನು ಆಶಾದೇವಿಯವರು ಚರ್ಚೆಗೆ ಒಳಪಡಿಸುತ್ತಾರೆ. ಅಂದರೆ ಪುರುಷ ಸಮಾಜವು ಇದುವರೆಗೆ ಹೆಣ್ಣಿನ ತಾಯ್ತನ, ಲೈಂಗಿಕತೆ, ತ್ಯಾಗ ಮುಂತಾದ ಗುಣಗಳು ಮಹಿಳೆಯ ಶಕ್ತಿಯನ್ನು ಕುಗ್ಗಿಸುತ್ತದೆ ಎಂದು ಇವತ್ತಿನವರೆಗೂ ಪೂರ್ವ ನಿಯೋಜಿತ ತಂತ್ರದ ಭಾಗವಾಗಿ ನಂಬಿಸಲಾಗಿದೆ. ಈ ಎಲ್ಲಾ ಪರಿಮಿತಿಗಳನ್ನು ಆಶಾ ಅವರು ಮಹಿಳೆಯ ನೈಜ ಗುಣಗಳಾಗಿ ಗುರುತಿಸುತ್ತಾರೆ. ಪುರುಷ ಪ್ರಧಾನ ಸಮಾಜವು ಮಹಿಳೆಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು, ಹೆಣ್ಣಿನ ತಾಯ್ತನವನ್ನು ಒಂದು ಅಸ್ತ್ರವನ್ನಾಗಿಸಿಕೊಂಡಿದೆ. ಹೆಣ್ಣನ್ನು ಗೃಹಿಣಿ, ಮಗುವಿನ ತಾಯಿ ಎಂದು ಹೇಳುತ್ತಾ ಅವಳ ಮನಸ್ಥಿತಿಯನ್ನು ಸಂಕುಚಿತ ವ್ಯಾಪ್ತಿಗೆ ತಳ್ಳಲಾಗಿದೆ. ಮಹಿಳೆಯ ದೈಹಿಕ ಚಹರೆಯನ್ನು ದಾಳವಾಗಿಸಿಕೊಂಡು ಆಕೆಯ ಮಾನಸಿಕ, ಬೌದ್ಧಿಕ ನೆಲೆಗಳವರೆಗೂ ತಾರತಮ್ಯ ಪ್ರಾರಂಭಿಸುತ್ತಾ ಬರಲಾಗಿದೆ. ಆದರೆ ಈ ಎಲ್ಲಾ ಮಾನದಂಡಗಳನ್ನು ಹಿಂದಿನಿಂದಲೂ ಬಹುತೇಕ ಮಹಿಳೆಯರು ವಿರೋಧ ವ್ಯಕ್ತಪಡಿಸದೆ ಒಪ್ಪಿಕೊಂಡು ಬಂದಿದ್ದಾರೆ.

ಮೊದಲು ಭಾರತೀಯ ಸಮಾಜದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಅಲ್ಲಿ ಮಹಿಳೆಯೇ ಯಜಮಾನಿ. ಆದರೆ ಮಾತೃಪ್ರಧಾನ ಕುಟುಂಬದಲ್ಲಿ ಹೆಣ್ಣಿನ ಮಿತಿಯಾಗಿ ತಾಯ್ತನ ಎಂದು ಕೆಲಸ ಮಾಡಿಲ್ಲ. ಕಾಲಾನಂತರದಲ್ಲಿ ಮಾತೃಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿ ಮಾರ್ಪಾಡಾಗ ತೊಡಗಿದವು. ಇದರ ನಂತರ ಬೆಳವಣಿಗೆಯಲ್ಲಿ ವಿವಾಹ ಎಂಬ ಸಂಸ್ಥೆಯನ್ನು ಸ್ಥಾಪಿಸುವ ಮೂಲಕ ಮಹಿಳೆಯ ಲೈಂಗಿಕತೆಯ ನಿಯಂತ್ರಣ ಹಕ್ಕು, ಶೀಲ–ಅಶ್ಲೀಲದ ಚಿಂತನೆಗಳಿಗೆ ಚಾಲನೆ ದೊರೆಯಿತು. ಹೀಗೆ ಸ್ತ್ರೀಯರನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಪುರುಷ ಸಮಾಜವು ಸ್ತ್ರೀಯ ಮುಖ್ಯ ಗುಣಗಳನ್ನು ಅವಳ ಶಕ್ತಿಯನ್ನು ಕುರಿತ ವ್ಯಾಖ್ಯಾನದೊಂದಿಗೆ ದಾಳಿ ಮಾಡಲು ಪ್ರಾರಂಭಸಿತು. ತಾಯ್ತನ ಆಕೆಯ ಶಕ್ತಿ ಎಂದು, ಇದು ತನ್ನ ಅಧಿಕಾರ ಸ್ಥಾಪನೆಯ ಆಶಯಕ್ಕೆ ಸವಾಲಾಗುತ್ತದೆ ಎಂಬುದು ಪಿತೃಸಮಾಜಕ್ಕೆ ಖಚಿತವಾಗಿ ತಿಳಿದಿದೆ. ಆದ್ದರಿಂದ ಮಹಿಳೆಯು ತನ್ನ ಈ ಶಕ್ತಿ ಕೇಂದ್ರದ(ತಾಯ್ತನದ) ಬಗೆಗೆ ಹೆಮ್ಮೆ, ಅಭಿಮಾನಗಳನ್ನು ಬೆಳಸಿಕೊಂಡು ಇದೇ ತನ್ನ ಅಸ್ಮಿತೆಯ ಮುಖ್ಯ ಕುರುಹು ಎಂದು ಗುರುತಿಸಿಕೊಳ್ಳುವುದರಿಂದ ತನ್ನ ಬಲ ಕುಗ್ಗುವುದೆಂಬ ಆತಂಕ ಅದಕ್ಕೆ. ಇದರಿಂದ ಮಹಿಳೆಯು ಈ ತಿಳುವಳಿಕೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗದ ರೀತಿಯಲ್ಲಿ

ವಾತಾವರಣವನ್ನು ಸ್ಥಾಪಿಸಿ, ಇಂತಹ ಮೌಲ್ಯಗಳನ್ನು ಬದಲಾದ ಕಾಲಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ಅದು ಬಂದಿದೆ.

ತಾಯ್ತನ, ಲೈಂಗಿಕತೆ ಹಾಗೂ ಅದಕ್ಕೆ ಸಂಬಂಧಿಸಿದ ಮಹಿಳೆಯ ದೈಹಿಕ ಮಾನಸಿಕ ಪ್ರಕ್ರಿಯೆಗಳನ್ನು ಅಸಹ್ಯಗಳೆಂಬಂತೆ ಕಾಣುವುದು ಇಂತಹ ಪುರುಷವಾದಿ ರಾಜಕಾರಣದ ಒಂದು ಹುನ್ನಾರವಾಗಿದೆ. ಹಾಗಾಗಿ ಮುಟ್ಟು, ಹೆರಿಗೆಗಳು, ಮೈಲಿಗೆ ಸೂತಕಗಳ ನೆಪವೊಡ್ಡಿ, ಮಹಿಳೆಯ ದೇಹದ ಮೇಲೆ ಹಲವಾರು ರೀತಿಯ ನಿರ್ಬಂಧಗಳನ್ನು ಮೊದಲಿನಿಂದಲೂ ಇದರ ಒಂದು ಭಾಗವಾಗಿಯೇ ಹೇರಲಾಗಿದೆ. ಆದರೆ ಇದೇ ತಾಯ್ತನ ಲೈಂಗಿಕತೆ ತನ್ನ ಶಕ್ತಿ ಎಂದು ಮಹಿಳೆಗೆ ಗೊತ್ತಿದ್ದೂ ಅದರ ಆನಂದವನ್ನು ಅವಳು ಅನುಭವಿಸಲು ಸಾಧ್ಯವಾಗದ ರೀತಿಯಲ್ಲಿ ಈ ಕೇಂದ್ರ ಬಿಂದುವಿನಿಂದ ಸುತ್ತಲೂ ಸಾಮಾಜಿಕ ನಿಯಂತ್ರಣದ ಬೇಲಿ ಬಲಗೊಳ್ಳುತ್ತಿದೆ. ಮಹಿಳೆಯು ಹೆರುವುದೇ ಒಂದು ಮಿತಿ ಎಂದು ಪುರುಷಪ್ರಧಾನ ಸಮಾಜ ಪೂರ್ವನಿರ್ಧರಿತ ಯೋಜನೆಯನ್ನು ನಿರ್ಮಿಸಿ ಸಾಮಾಜಿಕ ಚೌಕಟ್ಟಿನಲ್ಲಿ ಇಡಲು ಪ್ರಯತ್ನಿಸುತ್ತಲೇ ಇದೆ. ವಾಸ್ತವದಲ್ಲಿ ಇದು ಹೆಣ್ಣಿನ ಲೈಂಗಿಕ ಬದುಕಿಗೆ ಹಾಕುವ ಒಂದು ಬಂಧನ. ಅವಳ ಲೈಂಗಿಕ ಬದುಕಿನ ಮೇಲೆ ಪುರುಷನು ತನ್ನ ಹಕ್ಕನ್ನು ಸ್ಥಾಪಿಸುವ ಒಂದು ತಂತ್ರ, ಪಾತಿವ್ರತ್ಯ, ತಾಯ್ತನಗಳನ್ನು ಲೈಂಗಿಕ ಚೌಕಟ್ಟಿನಲ್ಲಿ ಮಹಿಳೆಯ ಮೇಲೆ ಹೇರಿ ತನ್ನ ಅಧಿಕಾರ ಸ್ಥಾಪನೆ ಮಾಡುತ್ತಿದೆ. ಹೆರುವುದು, ಪಾಲನೆ, ಪೋಷಣೆ, ಹಾಲುಣಿಸುವುದು ಇವಿಷ್ಟು ಶ್ರಮಬಾಧ್ಯತೆಗಳೇ ಮಹಿಳೆಯ ಕರ್ತವ್ಯ ಎಂಬುದನ್ನು ಮಹಿಳೆಯ ಮನಸ್ಸಿನಲ್ಲಿ ತುಂಬಿ ಆಕೆಯ ತಾಯ್ತನವನ್ನು ಒಂದು ಮಿತಿಯಲ್ಲಿಟ್ಟಿದೆ.

ಹೀಗೆ ಪುರುಷ ಪ್ರಧಾನ ಸಮಾಜವು ಪ್ರಬಲ ರಾಜಕಾರಣದ ಹುನ್ನಾರಗಳನ್ನು ಹೂಡಿ ಮಹಿಳೆಯ ಬದುಕನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳುವ ಮಾರ್ಗವನ್ನು ರೂಪಿಸಿಕೊಂಡಿದೆ. ಈ ಹುನ್ನಾರಗಳನ್ನು ಮೀರುವುದು ಮಹಿಳೆಗೆ ಬಹಳ ಮುಖ್ಯವಾದ ಸವಾಲಾಗಿದೆ. ಸ್ತ್ರೀ ಶಕ್ತಿಯ ಈ ತಾಯ್ತನವನ್ನು ಒಂದು ಶಕ್ತಿ ಕೇಂದ್ರವೆಂದು, ಅಸ್ಮಿತೆಯ ಕುರುಹೆಂದು ಗೌರವಿಸುವುದಿರಲಿ, ಗುರುತಿಸಿದರೂ ಅವಳ ಬಲ ಹೆಚ್ಚಾಗುತ್ತದೆ ಎಂಬುದನ್ನು ಕಂಡುಕೊಂಡಿರುವುದರಿಂದ ಈ ಕೇಂದ್ರವನ್ನು ತನ್ನ ಅಧೀನಪಡಿಸಿಕೊಳ್ಳಲು ಅದು ಗಮನಹರಿಸಿದೆ. ಆದ್ದರಿಂದ ಆಶಾದೇವಿಯವರು ಪುರುಷ ಸಮಾಜದ ಈ ಎಲ್ಲಾ ಕುತಂತ್ರಗಳನ್ನು ಒಡೆಯುವ ಭಾಗವಾಗಿ ತಮ್ಮ ಸ್ತ್ರೀವಾದವನ್ನು ಮಂಡಿಸುತ್ತಾರೆ. ಮಹಿಳೆಯನ್ನು ಯಾವ ಮಿತಿಯಲ್ಲಿ ಇದುವರೆಗೂ ಗುರುತಿಸಲಾಗಿತ್ತೊ, ಅದೇ ಅವಳ ಶಕ್ತಿ ಎಂಬುದನ್ನು ಸಾಬೀತುಪಡಿಸುತ್ತಾರೆ. ಆ ಮೂಲಕ ಮಹಿಳಾ ಅಸ್ಮಿತೆಯ ಕುರುಹುಗಳನ್ನು, ಮಹಿಳೆಯ ಬಿಡುಗಡೆಯ ಹಾದಿಗಳನ್ನು ಹುಡುಕುತ್ತಾರೆ.

### ೭.೨. ತಾಯ್ತನದ ಧಾತು

ಆಶಾದೇವಿಯವರು ಮಹಿಳೆಯಲ್ಲಿರುವ ಮತ್ತು ಪ್ರಾಕೃತಿಕವಾಗಿ ಹೆಣ್ಣಿಗಷ್ಟೆ ದೊರೆತಿರುವ ತಾಯ್ತನಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾರೆ. ಇವರು ಹೆಣ್ಣಿನಲ್ಲಿರುವ ತುಂಬಾ ವಿಶೇಷವಾದ ಗುಣವೆಂದರೆ ತಾಯ್ತನ ಎಂದು ಹೇಳುತ್ತಾರೆ. ತಾಯ್ತನವನ್ನು ಇದುವರೆಗೆ ಮಹಿಳೆಯರು ತಮ್ಮ ಸ್ವಾತಂತ್ರ್ಯವನ್ನು, ಅಸ್ತಿತ್ವವನ್ನು ಕಿತ್ತುಕೊಳ್ಳುವ ಒಂದು ಮಿತಿ ಎಂದು, ಅದು ನಮ್ಮ ವ್ಯಕ್ತಿತ್ವವನ್ನು

ಕುಗ್ಗಿಸುತ್ತದೆ ಎಂದು, ಹೆರುವುದು ನಮ್ಮನ್ನು ಸಂಕುಚಿತರನ್ನಾಗಿಸುತ್ತದೆ ಎಂದು ತಿಳಿಯಲಾಗಿತ್ತು. ಆದರೆ ಆಶಾ ಅವರು ತಾಯ್ತನ ಎಂಬುದು ಹೆಣ್ಣಿಗಿರುವ ಮಿತಿ ಅಲ್ಲ, ಅದು ನಮ್ಮ ಶಕ್ತಿ ಎಂದು ಗುರುತಿಸುತ್ತಾರೆ. ಇದರ ಭಾಗವಾಗಿ ತಾಯ್ತನದ ಮೂಲಕವೇ ಮಹಿಳೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು, ಕಾಯ್ದುಕೊಂಡು, ಜೀವನದಲ್ಲಿ ಹೋರಾಡಿದ, ಆತ್ಮಸ್ಥೈರ್ಯದಿಂದ ಬದುಕಿದ ಮಹಿಳೆಯರನ್ನು ಗುರುತಿಸುತ್ತಾರೆ. ಇದನ್ನು ಹಲವಾರು ನಿದರ್ಶನಗಳ ಮೂಲಕ ಸಾಬೀತುಪಡಿಸುತ್ತಾರೆ. ಆ ಮೂಲಕ ತಾಯ್ತನದಲ್ಲಿ ವ್ಯಕ್ತವಾಗುವ, ಪ್ರೀತಿ, ಕರುಣೆ, ಕಾಳಜಿ ಮುಂತಾದ ವಿಶಿಷ್ಟ ಗುಣಗಳನ್ನು ಗುರುತಿಸುತ್ತಾರೆ.

**೬.೩.ತ್ಯಾಗದ ಧಾತು**

ಹೆಣ್ಣಿನಲ್ಲಿ ಮೊದಲು ಗುರುತಿಸುವಂತಹದ್ದು ತ್ಯಾಗ, ಪ್ರೀತಿ ಇವೆರಡು ಸಂವೇದನೆಯ ನೆಲೆಗಳು. ಇವು ಹೆಣ್ಣಿಗೆ ಜನ್ಮದತ್ತವಾಗಿ ಬಂದಿರುವಂತಹವುಗಳು. ತ್ಯಾಗ, ಪ್ರೀತಿ ಇವೆರಡರ ಆತ್ಯಂತಿಕ ಮಾದರಿಯೇ ತಾಯ್ತನ ಎಂಬುದನ್ನು ಆಶಾದೇವಿಯವರು ತಿಳಿಯಪಡಿಸುತ್ತಾರೆ. ಇದನ್ನು ಆಶಾ ಅವರು ಶಂಕರಮೊಕಾಶಿ ಪುಣೇಕರ ಅವರ 'ಗಂಗವ್ವ ಗಂಗಾಮಾಯಿ' ಕಾದಂಬರಿಯಲ್ಲಿನ 'ಗಂಗವ್ವ' ಎಂಬ ತಾಯಿ ಪಾತ್ರದ ಮೂಲಕ ಚರ್ಚಿಸುತ್ತಾರೆ. 'ಗಂಗವ್ವ ಗಂಗಾಮಾಯಿಯಾಗುವ ಅಪೂರ್ವ ಕಥನ' ಎಂಬ ಲೇಖನದ ಹೆಸರೇ ಸೂಚಿಸುವಂತೆ ತಾಯಿ ಪಾತ್ರದಲ್ಲಿರುವ ಗಂಗವ್ವ ಎಂಬ ಮಹಿಳೆಯ ಪ್ರೀತಿ, ತ್ಯಾಗವನ್ನು ಈ ಲೇಖನ ಅನಾವರಣಗೊಳಿಸುತ್ತದೆ. ಗಂಗವ್ವನ ವ್ಯಕ್ತಿತ್ವವನ್ನು 'ಗಂಗಾ'ಮಾತೆಗೆ ಹೋಲಿಸಲಾಗಿದೆ. ಯಾವುದೇ ಅಪೇಕ್ಷೆಯಿಲ್ಲದೆ ಮನುಷ್ಯನ ಪಾಪವನ್ನು, ಕೊಳೆಯನ್ನು ತೊಳೆಯುವ ಗಂಗೆಯಂತೆ ಗಂಗವ್ವಳು ಕೂಡ ತನಗಾಗಿ ಬದುಕದೆ, ತನ್ನ ಮಗನ ಸಂತೋಷಕ್ಕಾಗಿ, ಜೀವನ ರೂಪಿಸುವುದಕ್ಕಾಗಿ ತನ್ನ ಇಡೀ ಜೀವನವನ್ನು ತ್ಯಾಗ ಮಾಡುತ್ತಾ ಗಂಗೆಯಂತೆ ಗಂಗಾಮಾಯಿಯಾಗುವ ತಾಯ್ತನದ ಗುಣವನ್ನು ಅವರು ಗುರುತಿಸುತ್ತಾರೆ. ತನ್ನ ಮಗನ ಬದುಕನ್ನು ರೂಪಿಸುವುದು ತನ್ನ ಕರ್ತವ್ಯವೆಂದು ಪ್ರತಿ ತಾಯಿಯೂ ಪರಿಭಾವಿಸಿ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಆ ಕಾರ್ಯವನ್ನು ಸಮರ್ಥವಾಗಿ ನಿಭಾಯಿಸುವುದೇ ನಿಜವಾದ ತಾಯ್ತನವೆಂದು ಅವರು ಸೂಚಿಸುತ್ತಾರೆ.

ಈ ತಾಯ್ತನವನ್ನು ಕುರಿತು ಆಶಾ ಅವರು ಹೀಗೆ ಹೇಳುತ್ತಾರೆ: "ತಾಯ್ತನವೆನ್ನುವುದೇ ಅಹಂಕಾರವನ್ನು ಕಳೆದುಕೊಳ್ಳುತ್ತಾ ಹೋಗುವ ಕ್ರಿಯೆಯೂ ಹೌದು ಎನಿಸಿಬಿಡುತ್ತದೆ ಗಂಗವ್ವನನ್ನು ಅರ್ಥಮಾಡಿಕೊಳ್ಳುವಾಗ."[೧] ಅಂದರೆ ಗಂಗವ್ವಳು ತನ್ನ ಮಗನ ಜೀವನ ಚೆನ್ನಾಗಿರಲೆಂದು ತನಗೆ ಏನೇ ಕಷ್ಟ ಅವಮಾನ ಆದಾಗಲೂ ಸಹಿಸಿಕೊಳ್ಳುತ್ತಾಳೆ. ಇದೆಲ್ಲವನ್ನು ಮಾಡಲು ಪ್ರಮುಖ ಕಾರಣ ಮಗನ ಮೇಲಿನ ಪ್ರೀತಿ. ಆದ್ದರಿಂದ ತಾಯ್ತನ ಜವಾಬ್ದಾರಿ, ಕಾಳಜಿಗಳು ಇಲ್ಲಿ ಕೆಲಸ ಮಾಡುತ್ತವೆ. ಲೇಖಕಿ ಈ ಕಾದಂಬರಿಯನ್ನು ಚರ್ಚಿಸುತ್ತಾ ತಾಯ್ತನದ ನಿಜ ಸ್ವರೂಪವನ್ನು ಅನಾವರಣಗೊಳಿಸುತ್ತಾರೆ. ಇನ್ನು ಮುಖ್ಯವಾಗಿ ಒಬ್ಬ ತಾಯಿಯ, ತಾಯ್ತನದ ಚಹರೆಯನ್ನು ಹೇಳುತ್ತಾ, ಇಡೀ ಮಹಿಳಾ ಕುಲದ ತಾಯ್ತನದ ನೆಲೆಗೆ ತಮ್ಮ ಚಿಂತನೆಯನ್ನು ವಿಸ್ತರಿಸುತ್ತಾರೆ. ಅಂದರೆ ಆಶಾ ಅವರ ವಿಮರ್ಶೆಯ ನೆಲೆಯು ವೈಯಕ್ತಿಕತೆಯಿಂದ ಸಾರ್ವತ್ರಿಕತೆಯ ಕಡೆಗೆ ಚಲಿಸುತ್ತದೆ. ಯಾವುದೇ ಹೆಣ್ಣಾಗಲಿ ಬೇರೆಯವರ ನೋಟಕ್ಕೆ ಅಹಂಕಾರಿಯಾಗಿದ್ದರೂ, ಸ್ವಾಭಿಮಾನಿಯಾಗಿದ್ದರೂ ತನ್ನ ಕರುಳಬಳ್ಳಿಯ ಸಂಬಂಧದಲ್ಲಿ ಮಾತ್ರ ತನ್ನ ಅಹಂಕಾರವನ್ನು ಕಳೆದುಕೊಳ್ಳುತ್ತಾಳೆ. ಇದು ತಾಯ್ತನಕ್ಕೆ ಇರುವ ಅಪೂರ್ವಶಕ್ತಿ ಎಂಬ

ನಿಲುವು ಚಿಂತಕಿಯದು. ಹೀಗೆ ಗಂಗವ್ವ 'ಗಂಗೆಯಂತೆ' ಗಂಗಾಮಾಯಿಯಾಗುತ್ತಾಳೆ. ಈ ಮೂಲಕ ಪಿತೃಪ್ರಧಾನ ಸಮಾಜವು ತಾಯ್ತನವನ್ನು ತನ್ನ ಮಗನ ಮೇಲಿನ ಅಧಿಕಾರದ ನೆಲೆಯಲ್ಲಿ ಗುರುತಿಸುತ್ತದೆ. ಈ ಒಂದು ತತ್ವವನ್ನು ಮೊದಲಿನಿಂದಲೂ ಮಹಿಳೆಯನ್ನು ಪ್ರೇರೇಪಿಸುತ್ತಾ ಬಂದಿದೆ. ಆದ್ದರಿಂದ ಲೇಖಕಿ ಮಹಿಳೆಯ ಈ ಸ್ಥಾಪಿತ ನಿಲುವೊಂದನ್ನು ತಾಯ್ತನದ ಮೂಲಕ ಅಗೋಚರದ ನೆಲೆಯಲ್ಲಿ ಮುರಿಯಲೆತ್ನಿಸುತ್ತಾರೆ. ತಾಯ್ತನ ಎಂದರೆ ತ್ಯಾಗದ ಆತ್ಯಂತಿಕ ಸ್ವರೂಪ ಎನ್ನುವುದನ್ನು ಈ ಮೂಲಕ ತಿಳಿಸುತ್ತಾರೆ. ಹೀಗೆ ಗಂಗವ್ವನ ಪಾತ್ರದ ನಿಜ ಸ್ವರೂಪವನ್ನು ನಮ್ಮ ಭಾರತೀಯ ಪ್ರತಿ ತಾಯಂದಿರಲ್ಲಿ ನೋಡಬಹುದು. ಆದ್ದರಿಂದ ಚಿಂತಕಿಯಾದ ಆಶಾದೇವಿಯವರು ನಮ್ಮ ಪರಂಪರೆಯ ಪ್ರಮುಖ ಸ್ತ್ರೀಪಾತ್ರಗಳನ್ನು ಮರು ವಿಶ್ಲೇಷಣೆಗೆ ಒಳಪಡಿಸುತ್ತಾರೆ. ಆ ಮೂಲಕ ಸಾರ್ವಕಾಲಿಕವಾದ, ದೇಶ, ಕಾಲಾತೀತವಾದ ಮಾಸದ ತಾಯ್ತನದ ಚಹರೆಯನ್ನು ಗುರುತಿಸುತ್ತಾರೆ.

### ೬.೪. ಪ್ರೀತಿಯ ಧಾತು

ತಾಯಿಯ ಮತ್ತು ಮಗನ ನಡುವಿನ ಪ್ರೀತಿ, ವಾತ್ಸಲ್ಯವನ್ನು ಆಶಾ ಅವರು 'ಅಕ್ಷಯ ಪಾತ್ರಗಳ ತಾಯಿ' ಈ ಲೇಖನದ ಮೂಲಕ ಚರ್ಚೆಗೆ ಒಳಪಡಿಸುತ್ತಾರೆ. 'ಅಕ್ಷಯ ಪಾತ್ರಗಳ ತಾಯಿ' ಈ ಒಂದು ಶೀರ್ಷಿಕೆಯೇ ತಾಯ್ತನದ ಶಕ್ತಿಯನ್ನು ತಿಳಿಸುತ್ತದೆ. ಚಿಂತಕಿ 'ಅಕ್ಷಯ ಪಾತ್ರೆಗೆ' ತಾಯಿಯನ್ನು ರೂಪಕದ ನೆಲೆಯಲ್ಲಿ ಹೋಲಿಸಿದ್ದಾರೆ. ಅಕ್ಷಯ ಪಾತ್ರೆ ಗೊತ್ತಿರುವಂತೆ ಎಂದಿಗೂ ಖಾಲಿಯಾಗದ, ಮಗೆದಷ್ಟು, ಕೇಳಿದಷ್ಟು ಅನ್ನವನ್ನು, ಇನ್ನು ಬೇಕಾದದ್ದೆಲ್ಲವನ್ನು ಬೇಕೆಂದಷ್ಟು ಕೊಡುವ ಸಾಮರ್ಥ್ಯ ಇರುವಂತಹದು. ಇಂತಹ ಒಂದು ವಸ್ತುವಿಗೆ ತಾಯಿಯ ವ್ಯಕ್ತಿತ್ವವನ್ನು ಹೋಲಿಸುತ್ತಾರೆ. ಅಂದರೆ ತಾಯ್ತನವು ಅಕ್ಷಯ ಪಾತ್ರೆಯಂತೆಯೇ ತನ್ನ ಕರುಳಬಳ್ಳಿಯ ಸಂಬಂಧಕ್ಕೆ ಬೇಕಾದಷ್ಟು ಪ್ರೀತಿಯನ್ನು, ವಾತ್ಸಲ್ಯವನ್ನು ಬದುಕಿನ ಕೊನೆಯ ಘಳಿಗೆಯವರೆಗೂ ಧಾರೆ ಎರೆಯುತ್ತದೆ. ಮತ್ತೆ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ. ಇನ್ನು ತಾಯ್ತನಕ್ಕೆ ಇರುವ ಶಕ್ತಿಯನ್ನು, ವೈಶಿಷ್ಟವನ್ನು ಕುರಿತು ಆಶಾದೇವಿ ಹೀಗೆ ಹೇಳುತ್ತಾರೆ– "ನಿರಪೇಕ್ಷವಾದ ಪ್ರೀತಿ, ಪಾರವೇ ಇಲ್ಲದ ಕ್ಷಮೆ, ಅತೀಂದ್ರಿಯ ಎನ್ನಿಸುವ ಮಟ್ಟದಲ್ಲಿ ಮತ್ತು ಪ್ರಮಾಣದಲ್ಲಿ ತನ್ನ ಒಡಲು ಕುಡಿಗಳನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ಈ ಎಲ್ಲವು ತಾಯಿಯನ್ನು ಜೀವಿಗಳಲ್ಲೇ ಅನುಪಮ ಎನ್ನಿಸುವ ನೆಲೆಯಲ್ಲಿ ನಿಲ್ಲಿಸುತ್ತವೆ."[೨]

ಈ ಹೇಳಿಕೆಯ ಮೂಲಕ ತಾಯ್ತನಕ್ಕೆ ಮಾತ್ರ ದಕ್ಕಬಹುದಾದ ನಿಲುಕಲಾರದ ಜನ್ಮದತ್ತವಾದ ಶಕ್ತಿ. ಈ ಮೂಲಕ ಗಂಡಿಗೆ ಇಲ್ಲದ ಕೇವಲ ಹೆಣ್ಣು ಅಂದರೆ ತಾಯಿ ಮಾತ್ರ ಪಡೆಯಬಹುದಾದ, ಪಡೆದಿರುವ ಅತೀಂದ್ರಿಯ ಸ್ವರೂಪವನ್ನು ಅವರು ತಿಳಿಸುತ್ತಾರೆ. ಹಾಗಾಗಿ ತಾಯ್ತನದ ಮರೆಮಾಚಿದ ಸ್ವರೂಪವನ್ನು ತಿಳಿಸುವುದು ಮತ್ತು ಇದುವರೆಗೆ ಪುರುಷ ಸಮಾಜ ಹೇರಿದ ಸ್ಥಾಪಿತ ಮಹಿಳೆಯ ಮೌಲ್ಯಗಳನ್ನು ಮುರಿಯುವುದು–ಈ ಎರಡೂ ಕೆಲಸಗಳನ್ನು ಒಟ್ಟಿಗೇ ಅವರ ಚಿಂತನೆ ಮಾಡುತ್ತದೆ.

ಈ ಲೇಖನದಲ್ಲಿ ಆಶಾದೇವಿಯವರು ತಾಯಿ ಮತ್ತು ಮಗನ ಪ್ರೀತಿಯನ್ನು ಮ್ಯಾಕ್ಸಿಂ ಗೋರ್ಕಿ ಬರೆದ 'ತಾಯಿ' ಕಾದಂಬರಿಯ ಮೂಲಕ ಚರ್ಚಿಸುತ್ತಾರೆ. ಆಶಾ ಅವರಿಗೆ ಕಾದಂಬರಿಯಲ್ಲಿನ 'ತಾಯಿ' ಪಾತ್ರವನ್ನು ಚರ್ಚಿಸುವುದು ಮುಖ್ಯವಾಗಿಲ್ಲ. ತಾಯ್ತನಕ್ಕಿರುವ ಅಪಾರ ನೈಪುಣ್ಯತೆಯನ್ನು 'ತಾಯಿ' ಕಾದಂಬರಿಯ ಮೂಲಕ ಗುರುತಿಸುವುದು ಅವರ ಪ್ರಮುಖ ನಿಲುವಾಗಿದೆ. ಅಂದರೆ ತಾಯ್ತನವನ್ನು

ಗುರುತಿಸಲು ಸಾಹಿತ್ಯ ಪಠ್ಯಗಳನ್ನು ಪೂರಕ ನೆಲೆಯಲ್ಲಿ ಬಳಸಿಕೊಳ್ಳುತ್ತಾರಷ್ಟೆ. ಈ ಒಂದು ಕಾದಂಬರಿಯ ಮೂಲಕ ತಾಯಿ 'ನಿಲೋವ್ನ' ಮತ್ತು ಮಗ 'ವ್ಲಾಸೋವ' ಎಂಬ ಎರಡು ಪಾತ್ರಗಳ ಕರುಳ ಸಂಬಂಧದ ಪ್ರೀತಿಯನ್ನು ಅನಾವರಣಗೊಳಿಸುತ್ತಾರೆ. ತಾಯಿ ನೀಲೋವ್ನಳು ತನ್ನ ಮಗನ ಮೇಲಿನ ಪ್ರೀತಿಗಾಗಿ ಕ್ರಾಂತಿಕಾರಿ ಚಟುವಟಿಕೆಗಳಿಗೆ ಇಳಿಯುತ್ತಾಳೆ. ತನ್ನ ಗಂಡ ಹೊಡೆದಾಗಲೂ ಸಹಿಸಿಕೊಂಡಿದ್ದ ನಿಲೋವ್ನಳಿಗೆ ಆಗ ಇದ್ದ ತಾಳ್ಮೆ ಮಗ ಜೈಲಿಗೆ ಹೋದಾಗ ಸಿಡಿದೇಳುತ್ತದೆ. ಅಂದರೆ ಮಗನ ಮೇಲಿನ ಪ್ರೀತಿಗೆ ಎಂತಹ ಕಷ್ಟವನ್ನು ಬೇಕಾದರೂ ಸಹಿಸಬಲ್ಲಳು. ತಾಯಿಯು ಎಂತಹ ಪರಿಸ್ಥಿತಿಯನ್ನು ಬೇಕಾದರೂ ಎದುರಿಸಬಲ್ಲಳು ಎಂಬುದನ್ನು ಆಶಾ ಅವರು ನಿಲೋವ್ನ ಪಾತ್ರದ ಮೂಲಕ ಗುರುತಿಸುತ್ತಾರೆ. ಆದ್ದರಿಂದ ಈ ಒಂದು ಶಕ್ತಿ ತಾಯ್ತನಕ್ಕೆ ಮಾತ್ರ ಇರುವುದು ಎಂಬುದು ಚಿಂತಕಿಯ ನಿಲುವಾಗಿದೆ. ಹೀಗೆ ಮಗನ ಮೇಲಿನ ಪ್ರೀತಿಗೆ ಹೋರಾಟಗಾರ್ತಿಯಾಗಿ ಮಾರ್ಪಾಡಾಗುತ್ತಾಳೆ. ತನ್ನ ಮಗನಿಗಾಗಿ ಇಡೀ ತನ್ನ ಜೀವನದ ಸುಖವನ್ನು ತ್ಯಾಗ ಮಾಡುತ್ತಾಳೆ. ಈ ಪಾತ್ರವನ್ನು, ಕರ್ತವ್ಯವನ್ನು ನಿರ್ವಹಿಸಲು ತಾಯಿಗೆ ಮಾತ್ರ ಸಾಧ್ಯ ಎಂಬುದನ್ನು ಈ ಮೂಲಕ ಗುರುತಿಸುತ್ತಾರೆ.

ಈ ಎಲ್ಲ ಅಂಶಗಳಿಂದ ತಾಯಿ ಎಂಬುವವಳು ತನ್ನ ಜವಾಬ್ದಾರಿಯನ್ನು, ಪ್ರೀತಿಯನ್ನು ನಿರ್ವಹಿಸಲು ಎಂತಹ ದಿಗ್ಭಂಧನವನ್ನಾದರೂ, ಎಂತಹ ಒತ್ತಡವನ್ನಾದರೂ, ಎಂತಹ ಕರಾರನ್ನಾದರೂ, ಎಂತಹ ಪರಿಸ್ಥಿತಿಯನ್ನಾದರೂ ಮೀರುತ್ತಾಳೆ. ಇದೇ ತಾಯಿ ಮತ್ತು ಮಗುವಿಗೆ ಇರುವ ಅವಿನಾಭಾವ ಸಂಬಂಧವನ್ನು, ಸಖ್ಯವನ್ನು ತೋರಿಸುತ್ತದೆ. ಈ ಎಲ್ಲಾ ಅಂಶಗಳನ್ನು ಗುರುತಿಸುವ ಮೂಲಕ ತಾಯ್ತನದ ವಿಶಿಷ್ಟತೆ, ಶಕ್ತಿ, ಸಾಧ್ಯತೆ, ಭಾದ್ಯತೆಗಳನ್ನು ಆಶಾದೇವಿ ತಮ್ಮ ಸ್ತ್ರೀವಾದದ ಮೂಲಕ ಗುರುತಿಸುತ್ತಾರೆ. ಅಂದರೆ ತಾಯ್ತನ ಮಹಿಳೆಯ ಮಿತಿ ಅಲ್ಲ ಎಂದು ಹೇಳುತ್ತಾ, ಆ ತಾಯ್ತನದ ಭಾಗವಾಗಿಯೇ ಮಹಿಳಾ ಶಕ್ತಿ ಕೇಂದ್ರವನ್ನು ಶೋಧಿಸುತ್ತಾರೆ. ಈ ತಾಯ್ತನದ ಇತರ ಮಾದರಿಗಳನ್ನು ಇನ್ನು ಹೆಚ್ಚಾಗಿ ದೇವನೂರ ಮಹಾದೇವ ಅವರ 'ಸಾಕವ್ವ', ಲಂಕೇಶರ 'ಅವ್ವ', ಎಚ್.ನಾಗವೇಣಿಯವರ 'ಸೂರಕ್ಕೆ' ಪಾತ್ರದ ಮೂಲಕ ಗುರುತಿಸುತ್ತಾರೆ.

**೬.೫. ಧಾರಣಶಕ್ತಿಯ ಧಾತು**

ಈ ಧಾರಣಾ ಶಕ್ತಿ ಎನ್ನುವುದು ಮಹಿಳೆಗಿರುವ ಸಾಮರ್ಥ್ಯಗಳನ್ನು ಪ್ರತಿನಿಧಿಸುತ್ತದೆ. ಮಹಿಳೆಗಿರುವ ರಕ್ಷಕ ಶಕ್ತಿ, ಪೊರೆಯುವ ಶಕ್ತಿ ಈ ಧಾರಣಶಕ್ತಿಯ ಸಂಕೇತಗಳಾಗಿವೆ. ಮುಖ್ಯವಾಗಿ ಆಶಾದೇವಿಯವರು ಮಹಿಳೆಗಿರುವ ಈ ಜೀವ ಚೈತನ್ಯದ ಆಯಾಮಗಳನ್ನು ಗುರುತಿಸುತ್ತಾರೆ. ಮಹಿಳೆಗೆ ಮಾತ್ರ ಸಾಧ್ಯ ಎನ್ನಬಹುದಾಗ ಈ ಶಕ್ತಿ ಚೈತನ್ಯವನ್ನು ಹಲವು ಆಧಾರಗಳ ನೆಲೆಯಲ್ಲಿ, ಪ್ರಾಯೋಗಿಕ ನೆಲೆಯಲ್ಲಿ ಚರ್ಚಿಸುತ್ತಾರೆ. ಅಂದರೆ ಮಹಿಳೆಗೆ ಎಷ್ಟೊಂದನ್ನು, ಏನೆಲ್ಲವನ್ನು ಒಳಗೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಮತ್ತೆ ಇದೆಲ್ಲವನ್ನು ಒಳಗೊಳ್ಳುವುದಕ್ಕೆ ಅವಳಿಗೆ ಮಾತ್ರ ಸಾಧ್ಯವಾಗುತ್ತದೆ. ಎಷ್ಟೆಲ್ಲಾ ನೋವು, ಹಿಂಸೆ ಅಪವಾದ ಮಾಡಿದಾಗಲೂ ಹಿಮ್ಮೆಟ್ಟಿ ಬದುಕನ್ನು ಎದುರಿಸಿ ಬದುಕುವುದಕ್ಕೆ ಸಾಧ್ಯವಾಗುತ್ತದೆ ಎಂಬುದನ್ನು ಆಶಾ ಅವರು ವಿಶ್ಲೇಷಿಸುತ್ತಾರೆ. ಮಹಿಳೆಗಿರುವ ಈ ಒಂದು ಅಸಾಧರಣ ಚೈತನ್ಯದ ಶಕ್ತಿಯ ನೆಲೆಯನ್ನು ಸೀತೆ, ದ್ರೌಪದಿ, ಫಣಿಯಮ್ಮ, ಎಂ.ಎಸ್.ಸುಬ್ಬಲಕ್ಷ್ಮಿ, ಗಂಗವ್ವ, ನಿಲೋವ್ನ ಮುಂತಾದ ಪಾತ್ರಗಳ ಮೂಲಕ ವಿಶ್ಲೇಷಿಸುತ್ತಾರೆ. ಸೀತೆ ತನ್ನ ಬದುಕಿನ ಎಲ್ಲಾ ಘಟ್ಟಗಳಲ್ಲಿ ಪುರುಷ

ಪ್ರಧಾನ ಸಮಾಜದಿಂದ ಮತ್ತೆ-ಮತ್ತೆ ಪರೀಕ್ಷೆಗೆ ಒಳಪಟ್ಟರೂ ಆಕೆ ತನ್ನ ಆತ್ಮ ಸ್ಥೈರ್ಯವನ್ನು, ಆತ್ಮ ಘನತೆಯನ್ನು ಕೊನೆಯವರೆಗೂ ಉಳಿಸಿಕೊಳ್ಳುತ್ತಾಳೆ. ಏನೆಲ್ಲಾ ಅಪವಾದ ಬಂದಾಗಲು ಕೂಡ ಎಲ್ಲವನ್ನು ಸಹಿಸಿಕೊಂಡು ಏನೇ ಬಂದರೂ ಸರಿಯೇ ಕುಗ್ಗದೇ ಎಲ್ಲವನ್ನು ಎದುರಿಸುತ್ತಾಳೆ. ತನ್ನ ಮಕ್ಕಳನ್ನು ಉಳಿಸಿಕೊಳ್ಳುತ್ತಾಳೆ ಮತ್ತು ಅವರನ್ನು ಬೆಳೆಸುತ್ತಾಳೆ. ಆ ಮೂಲಕ ಒಂದು ಸಾಮಾಜಿಕ ಸ್ಥಾನಮಾನ ದೊರಕಿಸಿ ಕೊಡುತ್ತಾಳೆ. ಆದರೆ ಎಂತಹ ಕಷ್ಟಬಂದಾಗಲೂ ಎದೆಗುಂದುವುದಿಲ್ಲ. ತನ್ನ ಮಕ್ಕಳ ಅಭ್ಯುದಯಕ್ಕಾಗಿ ಕಾಯುತ್ತಾಳೆ, ಬದುಕುತ್ತಾಳೆ. ಇದು ಸೀತೆಗಿರುವ ಅನನ್ಯ ವ್ಯಕ್ತಿತ್ವದ ಧಾತುಗಳನ್ನು ತಿಳಿಸುತ್ತದೆ. ನಂತರ ದ್ರೌಪದಿಯು ಕೂಡ ಎಂತಹ ಅಪಮಾನ, ಅವಮಾನ ಆದಾಗಲೂ ಎದೆಗುಂದದೆ ಸನ್ನಿವೇಶವನ್ನು ಎದುರಿಸುತ್ತಾಳೆ. ವಸ್ತ್ರಾಪಹರಣದ ಸಂದರ್ಭದಲ್ಲಿ ತನ್ನನ್ನು ಕುರಿತು ಅವಹೇಳನ ಮಾತುಗಳನ್ನಾಡಿದರೂ ಆಕೆ ಎಲ್ಲವನ್ನು ಸಹಿಸಿಕೊಳ್ಳುತ್ತಾಳೆ. ಆದರೆ ಸಮಯ ಸಂದರ್ಭಗಳ ಬರುವಿಕೆಗಾಗಿ ಕಾಯುತ್ತಾಳೆ. ಇದು ದ್ರೌಪದಿಗಿರುವ ಅಸಾಧಾರಣ ವ್ಯಕ್ತಿತ್ವದ ನೆಲೆಯನ್ನು ತಿಳಿಸುತ್ತದೆ. ಮಹಿಳೆಯು ಈ ಎಲ್ಲಾ ಅಪಮಾನ, ಅವಮಾನ ಎಲ್ಲವನ್ನು ಒಳಗೊಳ್ಳುವ ಹಾಗೂ ಜೀವನವನ್ನು ಎದೆಗುಂದದೆ ಎದುರಿಸುವ ಶಕ್ತಿಯ ಪ್ರತಿಮೆಗಳಂತೆ ಕಂಡುಬರುತ್ತಾರೆ.

ಎಂ.ಎಸ್.ಸುಬ್ಬಲಕ್ಷ್ಮಿ ಕೂಡ ದೇವದಾಸಿ ಕುಟುಂಬದಿಂದ ಬಂದು ಅಪಮಾನ, ಅಸಹಾಯಕತೆ ಎಲ್ಲವುಗಳ ನಡುವೆ ತನ್ನ ಜೀವನವನ್ನು ರೂಪಿಸಿಕೊಂಡವರು. ಆ ಮೂಲಕ ಸಾಮಾಜಿಕವಾಗಿ ಉತ್ತಮ ಸ್ಥಾನಮಾನವನ್ನು ಸ್ವತಃ ತಾನೇ ರೂಪಸಿಕೊಂಡವರು. ಇದು ಸ್ತ್ರೀಗೆ ಇದ್ದಿರಬಹುದಾದ ಶಕ್ತಿ, ಗಟ್ಟಿ ಮನಸ್ಸು. ಇನ್ನು ಮುಖ್ಯವಾಗಿ ಅತ್ಯಾಚಾರವಾದ ಮಹಿಳೆಗೆ ಇರುವ ಮಾನಸಿಕ ಸ್ಥೈರ್ಯ, ಮಹಿಳೆಗಿರುವ ಅನನ್ಯ ಶಕ್ತಿ ಸಾಧ್ಯತೆಗಳನ್ನು ಆಶಾ ಚಿಂತನೆ ತಿಳಿಸುತ್ತದೆ. ಅತ್ಯಾಚಾರವನ್ನು, ಅದರ ಅಘಾತವನ್ನು ಮೀರುವ ಒಂದು ಸದೃಢ ಚೈತನ್ಯ ಮಹಿಳೆಗೆ ಇದೆ. ಎಲ್ಲಾ ಅಘಾತ, ಅಪಮಾನ, ನಿಂದನೆ ಎಲ್ಲವುಗಳನ್ನು ಒಳಗೊಳ್ಳುವ ಶಕ್ತಿ ನಿಜವಾಗಿ ಮಹಿಳೆಗೆ ಇರುವುದನ್ನು ಆಕೆಯ ಧಾರಣ ಚೈತನ್ಯದ ನೆಲೆಯಲ್ಲಿ ಗುರುತಿಸಬಹುದು. ಇನ್ನು ಫಣಿಯಮ್ಮ ಅನುಭವಿಸಿದ ಕಷ್ಟಗಳು ಯಾವ ಮಹಿಳೆಗೂ ಬರಬಾರದು ಎನಿಸುತ್ತದೆ. ಆಕೆಯು ವಿಧವೆಯಾಗಿ ಎಲ್ಲಾ ಅವಕಾಶ ಆವರಣಗಳಿಂದ ವಂಚಿತಳಾಗಿ, ತಲೆ ಬೋಳಿಸಿಕೊಂಡು ಇಷ್ಟವಿಲ್ಲದ ಜೀವನ ನಡೆಸುವುದು ಯಾವ ಜೀವವಿರುವ ಪ್ರಾಣಿಗೂ ಸಾಧ್ಯವಿಲ್ಲ. ಆ ಒಂದು ಕಡು ಕಷ್ಟವಾದ ಆಯ್ಕೆ ಆದ್ಯತೆಗಳಿಲ್ಲದ, ಸ್ವಾತಂತ್ರ್ಯವಿಲ್ಲದ ಜೀವನವನ್ನು ಕಳೆಯುವುದು ಎಂತಹ ಜೀವಿಗಾದರೂ ಕಷ್ಟಸಾಧ್ಯ. ಆದರೆ ಫಣಿಯಮ್ಮಳು ಈ ಎಲ್ಲಾ ಇಕ್ಕಟ್ಟು-ಬಿಕ್ಕಟ್ಟುಗಳ ನಡುವೆ ತನ್ನ ಜೀವನವನ್ನು ನಡೆಸುತ್ತಾಳೆ. ಎಲ್ಲಾ ಆಸೆ-ಆಕಾಂಕ್ಷೆಗಳನ್ನು ಹತ್ತಿಕ್ಕಿಕ್ಕೊಂಡು ಬದುಕುತ್ತಾಳೆ. ನಿಜವಾಗಿ ಇಂತಹ ಜೀವನ ಕಡು ಕಷ್ಟದ್ದು. ಇದು ಫಣಿಯಮ್ಮಳಿಗೆ ಸಾಧ್ಯವಾಯಿತು. ಅಂದರೆ ದುರ್ಗಮ್ಯ ಜೀವನದ ಪಯಣವನ್ನು ಸಾಧಿಸಲು ಸಾಧ್ಯವಾಗಿರುವುದು ಮಹಿಳೆಗಿರುವ ತಾಳ್ಮೆಯಿಂದ. ಆಕೆಗಿರುವ ಗಟ್ಟಿ ಮನಸ್ಸು ಆತ್ಮಸ್ಥೈರ್ಯದಿಂದ ಎಂಬುದು ತಿಳಿಯುತ್ತದೆ.

ಹೀಗೆ ಮಹಿಳೆಗೆ ಎಲ್ಲವುಗಳನ್ನು ಸಹಿಸಿಕೊಳ್ಳುವ ಶಕ್ತಿಯ ವಿವಿಧ ನೆಲೆಯನ್ನು ಆಶಾದೇವಿಅವರು ಗುರುತಿಸುತ್ತಾರೆ. ತಾಯಿಯಾಗಿ, ಹೆಂಡತಿಯಾಗಿ ಎಲ್ಲಾ ಪಾತ್ರಗಳನ್ನು ಸಮರ್ಥವಾಗಿ ನಿಭಾಯಿಸಲು ಒಬ್ಬ ಮಹಿಳೆಗೆ ಮಾತ್ರ ಸಾಧ್ಯ ಎಂಬ ಒಂದು ಸತ್ಯ ಇದರಿಂದ ತಿಳಿದುಬರುತ್ತದೆ. ಎಲ್ಲರನ್ನು ಬದುಕಿನ ಕೊನೆಯವರೆಗೂ ತನ್ನ ಜೊತೆಯಲ್ಲಿಯೇ ಉಳಿಸಿಕೊಳ್ಳಬೇಕು ಎಂಬ ಒಂದು ಧಾರಣಾ ಶಕ್ತಿ

ಮಹಿಳೆಗಿರುವುದನ್ನು ಆಶಾ ಅವರು ತಮ್ಮ ಚಿಂತನೆಯ ಮೂಲಕ ಆಳವಾದ ಚರ್ಚೆಗೆ ಒಳಪಡಿಸುತ್ತಾರೆ. ಎಲ್ಲರನ್ನು ಕಾಪಾಡಬೇಕು, ಸಲಹಬೇಕು, ಕಾಳಜಿಯಿಂದ ನೋಡಿಕೊಳ್ಳಬೇಕು, ಎಲ್ಲರನ್ನು ಸಂತೋಷದಿಂದ ಇಡಬೇಕು, ಎಲ್ಲರಿಗೂ ಪ್ರೀತಿ ವಿಶ್ವಾಸವನ್ನು ದೊರಕಿಸಿಕೊಡಬೇಕು, ಎಲ್ಲರನ್ನು ಸಮಾನ ಆದ್ಯತೆ ಮತ್ತು ಅವಕಾಶಗಳಲ್ಲಿ ನೋಡಬೇಕು ಎಂದು ಹಾಗೂ ಎಲ್ಲರನ್ನು ಎಲ್ಲಾ ತಪ್ಪುಗಳನ್ನು ಕ್ಷಮಿಸುತ್ತಾ ಸಂಬಂಧಗಳನ್ನು ಉಳಿಸಿಕೊಳ್ಳುತ್ತಾ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು ಎಂಬ ಒಂದು ನೈತಿಕ ಶಕ್ತಿ, ನೈತಿಕ ಪ್ರಜ್ಞೆ ಮಹಿಳೆಗೆ ಇರುವುದನ್ನು ಈ ಮೂಲಕ ಗುರುತಿಸುತ್ತಾರೆ.

**ಕೊನೆ ಟಿಪ್ಪಣಿಗಳು**

೧. ಆಶಾದೇವಿ ಎಂ.ಎಸ್., 'ಗಂಗವ್ವ ಗಂಗಾಮಾಯಿಯಾಗುವ ಅಪೂರ್ವ ಕಥನ', ಪು. ೨

೨. ಆಶಾದೇವಿ ಎಂ.ಎಸ್., 'ಅಕ್ಷಯ ಪಾತ್ರಗಳ ತಾಯಿ', ಪು. ೨

*****

## ಅಧ್ಯಾಯ–ಏಳು

# ಆಶಾದೇವಿ ಚಿಂತನೆ; ಸ್ತ್ರೀ ಅಭಿವ್ಯಕ್ತಿಯ ಆಯಾಮಗಳು

### ೭.೧.ಪ್ರವೇಶ

ಸೃಜನಶೀಲತೆ ಎಂಬುದು ಮೌಲ್ಯಯುತವಾದ ಮಾನವನ ಗುಣಗಳಲ್ಲೊಂದು. ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಸೃಜನಶೀಲ ಗುಣವನ್ನು ಹೊಂದಿರುತ್ತಾನೆ. ಆದರೆ ಸೃಜನಶೀಲತೆಯ ಪ್ರಮಾಣ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ಸೃಜನಶೀಲ ಶಕ್ತಿಯು ವ್ಯಕ್ತಿಗಳ ಮೇಲೆ ಅವಲಂಭಿಸಿರುತ್ತದೆ. ಇದು ಕೇವಲ ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರದೆ ವಿಜ್ಞಾನ, ಸಂಗೀತ, ಸಾಹಿತ್ಯ, ನೃತ್ಯ, ಕಲೆ ಮತ್ತು ವ್ಯವಸಾಯ ಮೊದಲಾದ ಕ್ಷೇತ್ರಗಳಲ್ಲಿ ಕಂಡುಬರುತ್ತದೆ. ಇನ್ನು ಮುಖ್ಯವಾಗಿ ಯಾವುದೇ ಒಂದು ಹೊಸದೊಂದನ್ನು ಭಿನ್ನವಾಗಿ ಸೃಷ್ಟಿಸಲು ಇರುವ ಅಭಿವ್ಯಕ್ತಿಯನ್ನು ಸೃಜನಶೀಲತೆ ನೆಲೆಯಲ್ಲಿ ನೋಡಬಹುದು.

ಮಹಿಳೆ ತನ್ನ ಬುದ್ಧಿಶಕ್ತಿಯಿಂದ ಹಲವಾರು ಚಟುವಟಿಕೆಗಳಲ್ಲಿ ತನ್ನನ್ನು ಮೊದಲಿನಿಂದಲೂ ತೊಡಗಿಸಿಕೊಂಡಿದ್ದಾಳೆ. ಅಂದರೆ ಕಾವ್ಯ ರಚನೆ, ಸಂಗೀತ, ದೃಶ್ಯಕಲೆಯ ರಚನೆ, ನೃತ್ಯ ಮಾಡುವುದು ಇವೆಲ್ಲಾ ಸೃಜನಶೀಲತೆಯ ಮಾಧ್ಯಮಗಳಾಗಿವೆ. ಇದರಿಂದ ಪ್ರಸ್ತುತ ಅಧ್ಯಾಯದಲ್ಲಿ ಮಹಿಳಾ ಸೃಜನಶೀಲತೆಯು ಯಾವೆಲ್ಲಾ ಮಾಧ್ಯಮಗಳಲ್ಲಿ ಪ್ರಕಟವಾಗಿವೆ ಎಂಬುದನ್ನು ಆಶಾದೇವಿ ಅವರು ಗುರುತಿಸುತ್ತಾರೆ. ನಂತರ ಮಹಿಳೆಯರು ತಮ್ಮ ಸೃಜನಶೀಲತೆಯನ್ನು ಜಾಗೃತ ಸ್ಥಿತಿಯಿಂದ ರೂಪಸಿಕೊಂಡ ವಿವಿಧ ಆಯಾಮಗಳನ್ನು ಚರ್ಚೆಗೆ ಒಳಪಡಿಸುತ್ತಾ, ಆ ಮೂಲಕ ಮಹಿಳಾ ಸೃಜನಶೀಲತೆಯ ಶಕ್ತಿಯನ್ನು ಗುರುತಿಸುತ್ತಾರೆ.

### ೭.೨. ಸೃಜನಶೀಲತೆ ಮತ್ತು ಮಹಿಳಾ ಪರಿಕಲ್ಪನೆ

ಮನುಕುಲದ ಸಂಗತಿಯಾಗಿ ಸೃಜನಶೀಲತೆಯನ್ನು ಗುರುತಿಸುವುದಕ್ಕೂ ಮಹಿಳಾ ಸೃಜನಶೀಲತೆಯನ್ನು ಗುರುತಿಸುವುದಕ್ಕೂ ಭಿನ್ನತೆ ಇದೆ. ಪುರುಷ ಪ್ರಧಾನ ಸಮಾಜವು ಮಹಿಳೆಯನ್ನು ಎಲ್ಲಾ ಕಾರ್ಯ ಕ್ಷೇತ್ರಗಳಲ್ಲಿಯೂ ಎರಡನೆ ದರ್ಜೆಯಲ್ಲಿಯೇ ಇಟ್ಟಿದೆ. ಮುಖ್ಯವಾಗಿ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಹಿತ್ಯಿಕವಾಗಿ ಎಲ್ಲಾ ನೆಲೆಗಳಲ್ಲಿಯೂ ಮಹಿಳೆಯನ್ನು ಹತ್ತಿಕ್ಕುತ್ತಾ, ಆಕೆಯ ವ್ಯಕ್ತಿತ್ವ ಚೈತನ್ಯವನ್ನು ನಿರಂತರವಾಗಿ ದಮನಗೊಳಿಸುತ್ತಾ ಬಂದಿದೆ. ಆದರೂ ಮಹಿಳೆಯ ಸೃಜನಶೀಲ ಶಕ್ತಿಯು ಎಲ್ಲಾ ಕಾಲದಲ್ಲಿಯೂ ಜಾಗೃತ ಸ್ಥಿತಿಯಲ್ಲಿಯೇ ಇದೆ. ಅಂದರೆ ಮೊದಲು ಕೃಷಿಯನ್ನು ಆವಿಷ್ಕಾರ ಮಾಡಿದ್ದು ಮಹಿಳೆಯೆ. ಇದಕ್ಕೆ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಕೃಷಿಯಲ್ಲಿ ಹೆಚ್ಚಿನ ಶ್ರಮವಹಿಸಿ ಮುಂದಾಳತ್ವದಲ್ಲಿ ಬಿತ್ತುವುದು, ಕಳೆಕೀಳುವುದು, ಎಲ್ಲಾ ಕೆಲಸಗಳನ್ನು ಮಹಿಳೆಯೆ ಮಾಡುತ್ತಿದ್ದಳು. ಆದರೆ ಅದರಿಂದ ಬಂದ ಬೆಳೆಯನ್ನು ಮಾರುಕಟ್ಟೆಗೆ ಸಾಗಿಸಿ ಲಾಭವನ್ನು ಪಡೆಯುವ ಮೂಲಕ ಪುರುಷನು ಕೃಷಿಯಲ್ಲಿ ಮಹಿಳೆಯ ಪಾತ್ರವನ್ನು ಗೌಣವಾಗಿಸಿ ತನ್ನ ಹಿಡಿತಕ್ಕೆ ತೆಗೆದುಕೊಂಡನು. ಮಹಿಳೆಯನ್ನು ಹೆರಿಗೆ, ಮಕ್ಕಳ ಪಾಲನೆ, ಪೋಷಣೆಯ ನೆಪದಲ್ಲಿ ಕುಟುಂಬದ

ವ್ಯಾಪ್ತಿಯಲ್ಲಿ ಬಂಧಿಸಿ, ಆಕೆಯೇ ಆವಿಷ್ಕಾರ ಮಾಡಿದ ಕೃಷಿಯಿಂದ ದೂರವಿರಿಸಿದನು. ಈ ಮೂಲಕ ಮಹಿಳೆಯ ಸೃಜನಶೀಲತೆಯನ್ನು ಆಕೆಗೆ ಗೊತ್ತಿಲ್ಲದಂತೆ ಉಪಾಯಗಾರಿಕೆಯಿಂದ ಮುಚ್ಚಿಹಾಕಿದನು. ಇದೇ ರೀತಿ ಎಲ್ಲಾ ಕ್ಷೇತ್ರಗಳಲ್ಲಿಯೂ ಮಹಿಳೆಯ ಪಾತ್ರವನ್ನು ಇಲ್ಲವಾಗಿಸಿ ತಾನೆ ಮೇಲುಗೈ ಪಡೆಯುತ್ತಾ ಬಂದಿದ್ದಾನೆ. ಹೀಗೆ ಆರ್ಥಿಕ ಗಳಿಕೆಯಲ್ಲಿ ಆಕೆಯ ಪಾತ್ರವೇ ಇಲ್ಲದಂತೆ ತನ್ನ ನಿಯಂತ್ರಣಕ್ಕೆ ಒಳಪಡಿಸಿಕೊಂಡಿದ್ದಾನೆ.

ಮುಖ್ಯವಾಗಿ ಸೃಜನಶೀಲ ಕ್ಷೇತ್ರದಲ್ಲಿ ನೋಡುವುದಾದರೆ ಮಹಿಳೆಗೆ ಅಭಿವ್ಯಕ್ತಿ, ಕ್ರಿಯಾಶೀಲತೆ ಇಲ್ಲವೆನ್ನುವಷ್ಟರ ಮಟ್ಟಿಗೆ ಆಕೆಯನ್ನು ಸಂಕುಚಿತ ವ್ಯಾಪ್ತಿಗೆ ತಳ್ಳಲಾಗಿದೆ. ಮಹಿಳೆಯರು ಮೊದಲಿನಿಂದಲೂ ಸಾಹಿತ್ಯಕವಾಗಿ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿದ್ದಾರೆ. ಆದರೆ ಪುರುಷ ಸಮಾಜವು ಮಹಿಳೆಯರು ಸೃಜನಶೀಲವಾಗಿ ಸಾಹಿತ್ಯದಲ್ಲಿ ಕೆಲಸ ಮಾಡಿಲ್ಲ, ತೊಡಗಿಸಿಕೊಂಡಿಲ್ಲ ಎನ್ನುವಷ್ಟು ಅವಗಣನೆ ಮಾಡಿದ್ದಾರೆ. ಇದು ಮಹಿಳೆಯ ಕಲಾ ಶಕ್ತಿಯನ್ನು, ಚೈತನ್ಯವನ್ನು ಕುಗ್ಗಿಸುವ ತಂತ್ರವಾಗಿದೆ. ಹಾಗಾಗಿ ಮಹಿಳೆಯರು ಬರೆದ ಸಾಹಿತ್ಯವನ್ನು ಕೆಳದರ್ಜೆಯದೆಂದು, ಅಡುಗೆ ಮನೆ ಸಾಹಿತ್ಯ ಎಂದು ಬಿಂಬಿಸುತ್ತಾ ಬರಲಾಗಿದೆ.

ಈ ಮೂಲಕ ಮಹಿಳಾ ಸಾಹಿತ್ಯಕ್ಕೆ ನೆಲೆ-ಬೆಲೆ ಬರದಂತೆ ಮೊದಲಿನಿಂದಲೂ ವ್ಯವಸ್ಥಿತ ಕುತಂತ್ರ ರೂಪಿಸಲಾಗಿದೆ. ಇದೇ ರೀತಿ ಇಂದು ಮಹಿಳೆಯರು ಸಾಹಿತ್ಯ ಕ್ಷೇತ್ರಕ್ಕೆ ಬರದಂತೆ ತಡೆಯಲು ಅವರ ಆತ್ಮವಿಶ್ವಾಸ ಮತ್ತು ಅಭಿವ್ಯಕ್ತಿಯನ್ನು ಕುಗ್ಗಿಸಲು ಹಲವಾರು ಹುನ್ನಾರಗಳು ಕಾಲದಿಂದ ಕಾಲಕ್ಕೆ ಹುಟ್ಟಿಕೊಳ್ಳುತ್ತಲೇ ಇವೆ. ಮಹಿಳೆಯರು ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡೇ ಇಲ್ಲ ಎನ್ನುವಷ್ಟು ಅವರ ಸಾಹಿತ್ಯ ಚರಿತ್ರೆಯನ್ನು ಮರೆಮಾಚಲಾಗಿದೆ. ಮಹಿಳೆಯರಿಗೆ ಚರಿತ್ರೆಯೇ ಇಲ್ಲ ಎನ್ನುವಷ್ಟು ಆಕೆಯ ಅಸ್ತಿತ್ವವನ್ನು ನಾಶಗೊಳಿಸಲಾಗಿದೆ. ಏಕೆಂದರೆ ಸಾಹಿತ್ಯಿಕವಾಗಿ ಚರಿತ್ರೆಯನ್ನು ನಾಶಗೊಳಿಸುವ ಮೂಲಕ ಸಾಮಾಜಿಕವಾಗಿ ಅಸ್ತಿತ್ವವನ್ನು ನಿಯಂತ್ರಿಸುವ ಉದ್ದೇಶ ಇದಾಗಿದೆ. ಸೃಜನಶೀಲತೆಯಲ್ಲಿ ಮಹಿಳೆಯು ಪುರುಷನಿಗಿಂತ ಮೇಲ್‌ಸ್ತರದಲ್ಲಿ ಗುರುತಿಸಿಕೊಂಡರೆ, ಆನಂತರದ ಎಲ್ಲಾ ಕ್ಷೇತ್ರಗಳಲ್ಲಿ ದಿನೇ ದಿನೇ ತನ್ನ ಛಾಪನ್ನು ಮೂಡಿಸುತ್ತಾ ಹೋಗುತ್ತಾಳೆ. ಇದರಿಂದ ಪುರುಷ ಸಮಾಜವು ತನ್ನ ಅಸ್ತಿತ್ವವನ್ನು, ಅಧಿಕಾರವನ್ನು ಕಳೆದುಕೊಳ್ಳಬೇಕಾಗುತ್ತದೆ ಎಂಬ ಭಯ ಪಿತೃ ಪ್ರಧಾನ ಸಮಾಜವನ್ನು ಆವರಿಸಿದೆ. ಹಾಗಾಗಿ ಮಹಿಳೆಯನ್ನು ಮಾನಸಿಕವಾಗಿ, ಬೌದ್ಧಿಕವಾಗಿ ನಿಯಂತ್ರಿಸುತ್ತಾ ಎಲ್ಲಾ ಮಾಧ್ಯಮಗಳಲ್ಲಿಯೂ ಕೆಳದರ್ಜೆಗೆ ತಳ್ಳಲಾಗಿದೆ. ಆಕೆಗಿರುವ ನೈಜ ಶಕ್ತಿಯನ್ನು, ಸಾಮರ್ಥ್ಯವನ್ನು ನಿರಾಕರಿಸಲಾಗಿದೆ. ಆದರೂ ಮಹಿಳೆಯರು ಅನೇಕ ನಿಯಂತ್ರಣಗಳ ನಡುವೆ ಅಡೆ ತಡೆಗಳ ನಡುವೆ ಸಾಹಿತ್ಯಕವಾಗಿ ತೊಡಗಿಸಿಕೊಂಡಿದ್ದಾರೆ. ಇದಕ್ಕೆ ಮುಖ್ಯ ಉದಾಹರಣೆಯೆಂದರೆ ವಚನ ಸಾಹಿತ್ಯ. ಹನ್ನೆರಡನೆಯ ಶತಮಾನದಲ್ಲಿ ಮಹಿಳಾ ಅಭಿವ್ಯಕ್ತಿಯು ಮುಕ್ತವಾಗಿ ಪ್ರಕಟಗೊಂಡಿದೆ. ಇಲ್ಲಿ ಪುರುಷನಿಗೆ ಸಮಾನವಾಗಿ ಮಹಿಳೆಯು ಸಾಹಿತ್ಯಿಕವಾಗಿ ತೊಡಗಿಸಿಕೊಂಡಿದ್ದಾಳೆ. ಅನಂತರದ ಕಾಲಘಟ್ಟದಲ್ಲಿ ಮಹಿಳೆಯು ಸಾಹಿತ್ಯಿಕವಾಗಿ ತೊಡಗಿಸಿಕೊಳ್ಳದಂತೆ ಹಲವಾರು ತಂತ್ರಗಳನ್ನು ಪುರುಷ ಪ್ರಧಾನ ಸಮಾಜ ನಿರ್ಮಿಸುತ್ತಾ ಬಂದಿದೆ. ಆಕೆಯನ್ನು ಕುಟುಂಬದಲ್ಲಿ ಅಡುಗೆ ಮನೆಗೆ ಸೀಮಿತಗೊಳಿಸಲಾಗಿದೆ. ಶಿಕ್ಷಣವನ್ನು ಕೂಡ ನಿರ್ಬಂಧಿಸಲಾಗಿದೆ. ಇದರಿಂದ ಮಹಿಳಾ ಅಭಿವ್ಯಕ್ತಿಯೇ ಇಲ್ಲದಂತೆ ನಿಯಂತ್ರಿಸಲಾಗಿದೆ.

ಈ ಮೂಲಕ ಮಹಿಳೆಗೆ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಬದುಕನ್ನು ಸ್ವಾತಂತ್ರ್ಯವನ್ನು ನಿರಾಕರಿಸಲಾಗಿದೆ ಮತ್ತು ದಮನಗೊಳಿಸಲಾಗಿದೆ. ಹೀಗಾಗಿ ಮಹಿಳೆಗೆ ಸೃಜನಶೀಲ ಶಕ್ತಿಯೇ ಇಲ್ಲವೆನ್ನುವಷ್ಟು ದಾಖಲೆಗಳನ್ನು ಅಸಾಧ್ಯವಾಗಿಸುತ್ತಾ ಬಂದಿದೆ. ಆದರೆ ಇವೆಲ್ಲದರ ನಡುವೆ ಮಹಿಳೆಯು ಎಲ್ಲೋ ಒಂದು ಕಡೆ ಪುರುಷ ಸಮಾಜದ ಕುತಂತ್ರವನ್ನು ತಿಳಿದು ದಿನೇ ದಿನೇ ಜಾಗೃತಗೊಳ್ಳುತ್ತಿದ್ದಾಳೆ. ಆಕೆಯ ತನಗೆ ಇರುವ ಈ ಸೃಜನಶೀಲ ಶಕ್ತಿಯನ್ನು ಬಳಸಿಯೇ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುತ್ತಿದ್ದಾಳೆ. ಇದರ ಭಾಗವಾಗಿಯೇ ಇಂದು ಪುರಷನಿಗೆ ಸಮಾನವಾಗಿ ಎಲ್ಲಾ ಕ್ಷೇತ್ರಗಳಲ್ಲಿ ಭಾಗವಹಿಸುತ್ತಿದ್ದಾಳೆ. ತಮ್ಮ ಸಮುದಾಯದ ದಾಖಲೆಗಳನ್ನು, ಪುರಾವೆಗಳನ್ನು ನಿರ್ಮಿಸಿಕೊಳ್ಳುತ್ತಾ, ಪುನರ್ ರಚಿಸುತ್ತಾ ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು, ಅಸ್ತಿತ್ವವನ್ನು, ಬೌದ್ಧಿಕತೆಯನ್ನು ಜಾಗೃತಗೊಳಿಸಿಕೊಳ್ಳುತ್ತಿದ್ದಾಳೆ. ಪುರುಷ ಸಮಾಜ ಮಹಿಳೆಗೆ ಯಾವ ಸೃಜನಶೀಲ ಶಕ್ತಿಯನ್ನು ನಿರಾಕರಿಸಿತ್ತೋ, ಮರೆಮಾಚಲಾಗಿತ್ತೋ ಅದೇ ಮಾಧ್ಯಮದ ಮೂಲಕ ತಮ್ಮ ಚರಿತ್ರೆಯನ್ನು ಪುನರ್ ನಿರ್ಮಿಸಿಕೊಳ್ಳುತ್ತಿದ್ದಾರೆ.

ಮುಖ್ಯವಾಗಿ ಜನಪದ ಸಾಹಿತ್ಯದಲ್ಲಿ ಮಹಿಳಾ ಅಭಿವ್ಯಕ್ತಿಯ ನೈಜ ನೆಲೆಗಳನ್ನು ಗುರುತಿಸಬಹುದಾಗಿದೆ. ಗಾದೆ, ಒಡಪು, ನುಡಿಗಟ್ಟುಗಳಲ್ಲಿ ಮಹಿಳಾ ಸೃಜನಶೀಲತೆಯ ಶಕ್ತಿ ಎದ್ದು ಕಾಣುತ್ತದೆ. ಆದರೆ ಪುರುಷ ಸಮಾಜವು ಮಹಿಳೆಯನ್ನು ಸಾಮಾಜಿಕವಾಗಿ ನಿರ್ಬಂಧಕ್ಕೊಳಪಡಿಸುತ್ತಾ ಬಂದಿದೆ. ಇದರಿಂದ ಆಕೆಯ ಲೋಕಗ್ರಹಿಕೆಯು ಜಾಗೃತವಾಗದಂತೆ ಸಾಮರ್ಥ್ಯವನ್ನು ಹತ್ತಿಕ್ಕಲಾಗಿದೆ. ಮಹಿಳೆಯಂತೆ ಪುರುಷನಿಗೆ ಸಾಮಾಜಿಕವಾಗಿ ಯಾವುದೇ ನಿರ್ಬಂಧಗಳಿಲ್ಲ. ಆತನಿಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಮುಕ್ತ ಅವಕಾಶಗಳಿವೆ. ಆತನು ಸಾಹಿತ್ಯವನ್ನು ರಚಿಸಲು ಹಲವಾರು ಪೂರ್ವಭಾವಿ ತಯಾರಿಗಳನ್ನು ಪೂರಕವಾಗಿ ನಿರ್ಮಿಸಿಕೊಳ್ಳುತ್ತಾನೆ. ಪ್ರವಾಸಗಳನ್ನು, ಕ್ಷೇತ್ರಕಾರ್ಯಗಳನ್ನು ಮಾಡಿ ಕೃತಿಯನ್ನು ಹೊರತರುತ್ತಾನೆ. ಆದರೆ ಮಹಿಳೆಗೆ ಕುಟುಂಬದ ಪರಿಧಿಯಿಂದ ಹೊರ ಜಗತ್ತಿನ ಅವಕಾಶಗಳು ಸಿಗದಂತೆ ಮಾಡಲಾಗಿದೆ. ಇದರಿಂದ ಆಕೆಯು ಕುಟುಂಬದ ವ್ಯಾಪ್ತಿಯಲ್ಲಿಯೇ ತನ್ನ ಕೃತಿಗೆ ವಸ್ತುವನ್ನು ಆಯ್ಕೆ ಮಾಡಿಕೊಳ್ಳುವಂತಹ ಪರಿಸ್ಥಿತಿ ಇದೆ. ಹಾಗಾಗಿ ಪುರುಷನಿಗೆ ಸಿಕ್ಕಂತಹ, ದೊರೆತಂತ ಲೋಕ ಗ್ರಹಿಕೆಯು ಮಹಿಳೆಗೆ ದೊರೆಯದೆ ಹೋಗುತ್ತದೆ. ಆದರೂ ಮಹಿಳೆಯು ತನಗೆ ನಿಲುಕುವ ಬುದ್ಧಿವಂತಿಕೆಯಿಂದ ಸೀಮಿತ ಲೋಕಗ್ರಹಿಕೆಯಿಂದ ಹೇಗೋ ಕತೆ, ಕಾದಂಬರಿಗಳನ್ನು ಬರೆದಳೆಂದರು ಕೂಡ ಅದನ್ನು ಕೃತಿ ರಚನೆಯ ಮೊದಲ ಹಂತದಲ್ಲಿಯೆ ಹತ್ತಿಕ್ಕಲಾಗುತ್ತದೆ. ಆಕೆಯ ಕುಟುಂಬ, ವಿವಾಹಕ್ಕೆ ಸೀಮಿತವಾದ ವಸ್ತುಗಳನ್ನು ತೆಗೆದುಕೊಂಡಿದ್ದಾಳೆ ಎಂದು, ಅದು ಕೆಳದರ್ಜೆಯ ಕೃತಿ ಎಂದು ಪೂರ್ವ ನಿರ್ಧರಿತ ಪಟ್ಟವನ್ನು ಕೊಡಲಾಗುತ್ತದೆ. ಇದರಲ್ಲಿ ವಿಮರ್ಶೆಯ ಕಾರ್ಯ ಬಹಳ ಪ್ರಮುಖವಾಗಿ ಪಾತ್ರವಹಿಸಿದೆ. ಈ ವಿಮರ್ಶೆಯ ಎಲ್ಲಾ ಮಾನದಂಡಗಳು ಪುರುಷ ಪ್ರಧಾನ ಸಮಾಜದ ಪರವಾಗಿದೆ. ಮಹಿಳೆಯ ಕೃತಿ ರಚನೆಗೆ ತೆಗೆದುಕೊಂಡ ವಸ್ತು, ಭಾಷೆ, ತಂತ್ರಗಳನ್ನು ಹಲವಾರು ಹುನ್ನಾರಗಳ ಮೂಲಕ ಕೆಳದರ್ಜೆಯದೆಂದು ಸೀಮಿತ ವ್ಯಾಪ್ತಿಯುಳ್ಳದ್ದೆಂದು ನಿರ್ಧರಿಸಿ ಅಡುಗೆ ಮನೆ ಸಾಹಿತ್ಯವೆಂಬ ಪಟ್ಟವನ್ನು ಕೊಡಲಾಗಿದೆ. ಇದರಿಂದ ಓದುಗರಲ್ಲಿ ಮಹಿಳಾ ಸಾಹಿತ್ಯದ ಓದಿನ ಅಭಿರುಚಿಯನ್ನು ನಿಯಂತ್ರಿಸುತ್ತದೆ. ಇದೆಲ್ಲದರ ಹಿಂದೆ ದೊಡ್ಡ ಸಾಂಸ್ಕೃತಿಕ ರಾಜಕಾರಣವೇ ಇದೆ. ಈ ಎಲ್ಲಾ ಉದ್ದೇಶಗಳಿಂದ ಮಹಿಳಾ ಸಾಹಿತ್ಯ ಕೆಳದರ್ಜೆಯದು ಎಂಬ ಬಿರುದನ್ನು ಮುಂಚಿತವಾಗಿಯೇ

ಕೊಡಲಾಗಿದೆ. ಆದ್ದರಿಂದ ಮಹಿಳಾ ಸಾಹಿತ್ಯಕ್ಕೆ ಇಂದು ಸೂಕ್ತ ಸ್ಥಾನವನ್ನು ದೊರಕಿಸಿಕೊಡಬೇಕು ಎಂಬ ಉದ್ದೇಶದಿಂದಲೇ ಸ್ತ್ರೀವಾದಿ ವಿಮರ್ಶಾ ಸಿದ್ಧಾಂತವು ಹುಟ್ಟಿಕೊಂಡಿದೆ. ಸ್ತ್ರೀವಾದಿ ವಿಮರ್ಶೆಯು ಮಹಿಳಾ ಸೃಜನಶೀಲತೆಯ ಮುಂದುವರಿದ ಭಾಗವೇ ಆಗಿದೆ. ಮಹಿಳೆಗೆ ಈ ಶಕ್ತಿ ಸಾಮರ್ಥ್ಯ ಇರುವುದರಿಂದಲೇ ಸಮಾಜದಲ್ಲಿ ಸಮಾನಸ್ಥಾನ ಮಾನಕ್ಕೆ ಹೋರಾಡುತ್ತಲೇ ಇದ್ದಾಳೆ. ಮಹಿಳಾ ಸಾಹಿತ್ಯವು ಮಹಿಳಾ ಸೃಜನಶೀಲತೆಗೆ ಒಂದು ನೆಲೆ ಬೆಲೆಯನ್ನು ತಂದು ಕೊಡುವ ಉದ್ದೇಶವನ್ನು ಹೊಂದಿದೆ.

ಮಹಿಳಾ ಸಾಹಿತ್ಯಕ್ಕೆ ಇರುವ 'ಅಡುಗೆ ಮನೆ ಸಾಹಿತ್ಯ' ಎಂಬ ಸೀಮಿತ ಗ್ರಹಿಕೆಯನ್ನು ಹೋಗಲಾಡಿಸುವುದು ಈ ಸ್ತ್ರೀವಾದಿ ವಿಮರ್ಶೆಯ ಪ್ರಧಾನ ಧ್ಯೇಯವಾಗಿದೆ. ಮಹಿಳಾ ಸಾಹಿತ್ಯದ ವಿಶಿಷ್ಟತೆಯನ್ನು ಗುರುತಿಸುವುದು, ಮಹಿಳಾ ಸಾಹಿತ್ಯದ ಬಗ್ಗೆ ಇರುವ ಇಂದಿನ ಪುರುಷ ಗ್ರಹಿಕೆಯನ್ನು ಒಡೆಯುವುದು, ಮಹಿಳಾ ಸಾಹಿತ್ಯಕ್ಕೆ ಸಾಮಾಜಿಕ, ರಾಜಕೀಯ, ಸಾಹಿತ್ಯಕ ಆಯಾಮವನ್ನು ದೊರಕಿಸಿಕೊಡುವುದು ಇದರ ಉದ್ದೇಶವಾಗಿದೆ. ಈ ಭಾಗವಾಗಿಯೇ ಮಹಿಳಾ ಸೃಜನಶೀಲತೆಯ ಶಕ್ತಿಯನ್ನು ಗುರುತಿಸುತ್ತದೆ. ಇದರಿಂದ ಈಗಿರುವ ವಿಮರ್ಶಾ ಮಾನದಂಡಕ್ಕೆ ವಿಭಿನ್ನವಾಗಿ ಮಹಿಳಾ ಸಿದ್ಧಾಂತವನ್ನು ರೂಪಿಸುತ್ತಿದೆ. ಇನ್ನು ಮುಖ್ಯವಾಗಿ ಮಹಿಳಾ ಸೃಜನಶೀಲತೆಯ ಪರಂಪರೆಯನ್ನು ಕಟ್ಟುವ ಸಲುವಾಗಿಯೇ ಮಹಿಳಾ ಸಾಹಿತ್ಯ ಚರಿತ್ರೆಯನ್ನು ನಿರ್ಮಿಸಲಾಗಿದೆ. ಕಳೆದುಹೋದ, ಕಾಣೆಯಾದ, ಉದ್ದೇಶ ಪೂರ್ವಕವಾಗಿ ಹೂಳಲ್ಪಟ್ಟ ಮಹಿಳಾ ಲೇಖಕಿಯರನ್ನು ಇಲ್ಲಿ ಗುರುತಿಸಲಾಗಿದೆ. ಈ ಮೂಲಕ ದಮನಿತರಿಗೂ ಚರಿತ್ರೆ ಇದೆ ಎಂಬುದನ್ನು ಸಾಬೀತುಪಡಿಸಲಾಗಿದೆ. ಮಹಿಳೆಯರು ಇದೇ ಸೃಜನಶೀಲತೆಯನ್ನು ಸಾಧನವಾಗಿಸಿಕೊಂಡು ಮೊದಲಿನಿಂದಲೂ ಸಾಮಾಜಿಕ ಸ್ಥಾನಮಾನಕ್ಕೆ ಹೋರಾಡುತ್ತಾ ಬಂದಿದ್ದಾರೆ. ಇದರ ಭಾಗವಾಗಿ ತಮ್ಮದೇ ಆದ ಭಾಷೆಯನ್ನು ಕೂಡ ಸಾಹಿತ್ಯದ ಮೂಲಕ ಕಟ್ಟಿಕೊಳ್ಳುತ್ತಿದ್ದಾರೆ. ಕಾವ್ಯದ ಮೂಲಕ ತಮ್ಮ ರಚನೆಯನ್ನು ಮರು ರಚಿಸಿಕೊಳ್ಳುತ್ತಿದ್ದಾರೆ. ಹೀಗಾಗಿ ಇಂದಿನ ಮಹಿಳಾ ವಿಮರ್ಶಕಿಯರು, ಸ್ತ್ರೀವಾದಿ ಚಿಂತಕಿಯರು ತಮ್ಮ ಸೃಜನಶೀಲತೆಯ ಮೂಲಕ ಕಟ್ಟಿಕೊಂಡ ಮಹಿಳಾ ಹೋರಾಟವನ್ನು, ಮಹಿಳಾ ಸಂಕಥನವನ್ನು ಮಹಿಳಾ ಭಾಷೆಯ ನಿರ್ಮಾಣದ ನೆಲೆಗಳನ್ನು ಗುರುತಿಸುತ್ತಿದ್ದಾರೆ. ಆ ಮೂಲಕ ಇದನ್ನು ವ್ಯಾಪಕವಾದ ಚರ್ಚೆಗೆ ಒಳಪಡಿಸಿದ್ದಾರೆ. ಹೀಗೆ ಮಹಿಳೆಯು ತನ್ನ ಕಾವ್ಯದ ಮೂಲಕ ಕಟ್ಟಿಕೊಂಡ ಹೋರಾಟದ ಭಿನ್ನ ಬಿನ್ನ ಆಯಾಮಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೭.೩. ಭಾಷಾ ಅಭಿವ್ಯಕ್ತಿಯ ನೆಲೆಗಳು

ಅನಾದಿಕಾಲದಿಂದಲೂ ಮಹಿಳೆಯರು ಸಾಹಿತ್ಯದಲ್ಲಿ ತೊಡಗಿಸಿಕೊಳ್ಳಲು ಹಲವಾರು ಸಾಮಾಜಿಕ, ರಾಜಕೀಯ ಕಾರಣಗಳಿವೆ. ನೇರವಾಗಿ ಹೇಳಲಾಗದ್ದನ್ನು ಕಾವ್ಯವನ್ನು ಪರ್ಯಾಯ ಸಾಧನವನ್ನಾಗಿಸಿಕೊಂಡು ಪ್ರತಿಕ್ರಿಯೆ ನೀಡಿದ್ದಾರೆ. ಆದ್ದರಿಂದಲೇ ಆಶಾದೇವಿಯವರು ಕಾವ್ಯ ಮತ್ತು ಮಹಿಳೆ ಈ ಇಬ್ಬರ ಸಂಬಂಧವನ್ನು 'ಜೀವ ಕೊರಳ ಸಖ್ಯ' ಎಂದು ಹೇಳುತ್ತಾರೆ. ಮೊದಲಿನಿಂದಲೂ ಮಹಿಳೆಯರು ಕಾವ್ಯ ರಚನೆಯ ಮೂಲಕ ಹಲವಾರು ಕಾರ್ಯಗಳನ್ನು ಸಾಧಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಹಿಂದಿನ ಹಾಗೂ ಸಮಕಾಲೀನ ಮಹಿಳಾ ಕಾವ್ಯವನ್ನು ನೋಡಿದಾಗ ಹೆಚ್ಚಿನವರಿಗೆ ಕವಿತೆಯು ಒಂದು

ಸಾಹಿತ್ಯಿಕ ಹವ್ಯಾಸಕ್ಕಿಂತ ಹೆಚ್ಚಾಗಿ ತಮ್ಮ ಮನಸ್ಥಿತಿಯನ್ನು ಪ್ರಕಟಪಡಿಸುವ ಅನಿವಾರ್ಯ ಮಾಧ್ಯಮವಾಗಿದೆ ಎಂಬುದಾಗಿ ತಿಳಿದು ಬರುತ್ತದೆ. ಇಂದಿನ ಸ್ತ್ರೀವಾದಿಗಳು ಸಮಾಜದಲ್ಲಿ ಬಳಕೆಯಲ್ಲಿರುವ ಭಾಷೆಯು ಕೂಡ ಪುರುಷನ ನಿಯಂತ್ರಣಕ್ಕೆ ಒಳಪಟ್ಟಿದೆ ಎಂದು ಹೇಳುತ್ತಾರೆ. ಇದನ್ನು ಹಲವಾರು ಪುರಾವೆಗಳ ಮೂಲಕ ಸಾಬೀತು ಪಡಿಸುತ್ತಾರೆ. ಇದರಿಂದ ಸಾಹಿತ್ಯದ ಮೂಲಕ ಭಾಷೆಯನ್ನು ಮರು ರಚಿಸಿಕೊಳ್ಳುವ ಭಾಗವಾಗಿ ಇಂದಿನ ಮಹಿಳಾ ಕಾವ್ಯದ ಉಗಮವನ್ನು ಗುರುತಿಸಬಹುದು.

ಇಂದು ಸಮಾಜದಲ್ಲಿ ಬಳಕೆಯಾಗುತ್ತಿರುವ ಪುರುಷ ಭಾಷೆಯಲ್ಲಿ ಗಂಡಿನ ಅಸ್ತಿತ್ವವಿದ್ದರೆ, ಮಹಿಳೆಯು ಅದೃಶ್ಯ ಸ್ಥಿತಿಯಲ್ಲಿರುತ್ತಾಳೆ. ಭಾಷೆಯಲ್ಲಿ ಮಹಿಳೆಯನ್ನು ಪ್ರತಿನಿಧಿಸುವ ನೇರವಾದ ಸಂಜ್ಞೆ-ಸಂಕೇತಗಳೇ ಕಡಿಮೆ. ಭಾಷೆಯ ರಚನೆಯಲ್ಲಿ ಪ್ರತಿ ಪದವು ಪುರುಷನನ್ನು ಪ್ರತಿನಿಧಿಸುವಂತಹವು. ಅಲ್ಲಿ ಮಹಿಳೆಯ ಸ್ಥಾನ ಗೌಣನೆಲೆಯಲ್ಲಿ ಇದೆ. ಇದರಿಂದ ಮಹಿಳೆಯ ಅಸ್ತಿತ್ವವನ್ನು ಭಾಷೆಯ ನೆಲೆಯಲ್ಲಿ ನಿರಾಕರಿಸಲಾಗಿದೆ. ಹಾಗಾಗಿ ಪುರುಷನು ಬಳಸುವ ಭಾಷೆ ಅಧಿಕಾರದಿಂದ ಕೂಡಿದ್ದರೆ, ಸ್ತ್ರೀಗೆ ಸಂಬಂಧಿಸಿದ ಪದಗಳು ಅಧೀನತೆಯಿಂದ ಕೂಡಿರುತ್ತವೆ. ಈ ಮೂಲಕ ಭಾಷಿಕವಾಗಿಯೂ ಮಹಿಳೆಯು ಶೋಷಣೆಗೆ ಒಳಪಟ್ಟಿರುವುದನ್ನು ಈ ನೆಲೆಯಲ್ಲಿ ಗುರುತಿಸಬಹುದು. ಈಗಿರುವ ಭಾಷೆಯು ಪುರುಷನ ಶ್ರೇಷ್ಠತೆಯನ್ನು ಸೂಚಿಸುತ್ತದೆ. ಹೀಗಾಗಿ ಮಹಿಳೆಯು ಏನೇ ಮಾತನಾಡಿದರೂ ಅಧಿಕೃತತೆ ದೊರೆಯುವುದಿಲ್ಲ. ಆದ್ದರಿಂದಲೇ ಸ್ತ್ರೀಯ ಭಾಷೆಯನ್ನು, ಪುರುಷ ಭಾಷೆಯನ್ನು ಮುರಿದು ಕಟ್ಟುವ ಭಾಗವಾಗಿ, ಅಥವಾ ಪುರುಷ ಭಾಷೆಯನ್ನು ನಿರಾಕರಿಸುವ ಬಗೆಯಲ್ಲಿ ರಚಿಸಿಕೊಳ್ಳಬೇಕಾಗಿದೆ. ಹಾಗಾಗಿ ಇಂದು ಹಲವಾರು ಮಹಿಳಾ ಚಿಂತಕಿಯರು, ಮಹಿಳಾಪರ ಕಾಳಜಿ ಉಳ್ಳವರು ಪುರುಷ ಭಾಷೆಯನ್ನು ಮುರಿದು ಕಟ್ಟುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಇದಕ್ಕೆ ಮಹಿಳಾ ಕಾವ್ಯವು ಪ್ರಧಾನ ಮಾಧ್ಯಮವಾಗಿ ಬಳಕೆಯಾಗುತ್ತಿದೆ. ಹೀಗೆ ಸೃಜನಶೀಲತೆಯ ನೆಲೆಯಲ್ಲಿ ಇಂದು ಮಹಿಳೆಯು ತನ್ನ ಅಸ್ಮಿತೆಯ ಗ್ರಹಿಕೆಯನ್ನು ಭಾಷೆಯನ್ನು ಮರುಕಟ್ಟಿಕೊಳ್ಳುತ್ತಿದ್ದಾಳೆ.

ಪ್ರಸ್ತುತ ಸಮಾಜದಲ್ಲಿ ಪುರುಷನಿಗೆ ಸಮಾನವಾಗಿ ಮಹಿಳೆಗೂ ಸ್ಥಾನಮಾನಗಳು ಬೇಕು ಎಂದು ಇಂದಿನ ಸ್ತ್ರೀವಾದಿಗಳು ಹೋರಾಟ ಮಾಡುತ್ತಿದ್ದಾರೆ. ಈ ಹೋರಾಟ ಭಾಷೆಯನ್ನು ಕುರಿತು ಹೊರತಾಗಿಲ್ಲ. ಆದ್ದರಿಂದ ಆಶಾದೇವಿಯವರು ಕಾವ್ಯದ ಮೂಲಕ ಮಹಿಳೆ ತನ್ನ ಸ್ತ್ರೀ ಭಾಷೆಯನ್ನು ರಚಿಸಿಕೊಳ್ಳುವುದನ್ನು ಇಂದಿನ ಮಹಿಳಾ ಕಾವ್ಯವನ್ನು ಆಳವಾದ ಚರ್ಚೆಗೆ ಒಳಪಡಿಸುವ ಮೂಲಕ ಸಾಬೀತುಪಡಿಸುತ್ತಾರೆ. ಹೀಗೆ ಭಾಷೆಯಲ್ಲಿನ ಲಿಂಗ ತಾರತಮ್ಯವನ್ನು, ದಬ್ಬಾಳಿಕೆಯನ್ನು ಕುರಿತು, ಭಾಷೆಯಲ್ಲಿನ ಪುರುಷ ನಿಯಂತ್ರಣವನ್ನು ಕುರಿತು ಆಶಾದೇವಿಯವರು ಹೀಗೆ ಹೇಳುತ್ತಾರೆ.

"ಅವಳು ಬಳಸುವ ಭಾಷೆಯಾದರೂ ಅವಳು ಮಾತನಾಡಲು ಸೃಷ್ಟಿಯಾಗಿರುವ ಅವಳದೆಲ್ಲವನ್ನು ಸಂವಹಿಸಬಲ್ಲ ಭಾಷೆ ಎನ್ನುವುದಕ್ಕಿಂತ, ಹೆಣ್ಣಿಗೆ ಗಂಡು ಹೇಳಬೇಕಾದ್ದನ್ನು ಹೇಳಲು ಶಕ್ತವಾದ ಭಾಷೆ ಎನ್ನಬಹುದು. ಹೀಗಾಗಿ ಹೆಣ್ಣು ಸಾಮಾನ್ಯವಾಗಿ ಮಾತನಾಡುವುದು ತನಗೆ ಕೊಡಮಾಡಲಾಗಿರುವ ಭಾಷೆಯಲ್ಲಿ"[7]

ಈ ಮೇಲ್ಕಂಡ ಹೇಳಿಕೆಯಲ್ಲಿ ಎರಡು ಅಂಶಗಳನ್ನು ಗುರುತಿಸಬಹುದು. ಒಂದು ಭಾಷೆಯ ಮೇಲಿನ ಪುರಷನ ನಿಯಂತ್ರಣವನ್ನು ಕುರಿತು ಹೇಳುತ್ತಾರೆ. ಎರಡು ಮಹಿಳೆಗೂ ಭಾಷೆಗೂ ಇರುವ ಸಂಬಂಧವನ್ನು ಗುರುತಿಸುತ್ತಾರೆ. ಭಾಷೆಯಲ್ಲಿ ಹೆಣ್ಣಿಗೆ ಅಸ್ತಿತ್ವವೇ ಇಲ್ಲ ಎಂಬುದನ್ನು ಈ ಎಲ್ಲವುಗಳಿಂದ ಸಾಬೀತುಪಡಿಸುತ್ತಾರೆ. ಇಂದು ಮಹಿಳೆಯು ಸಮಾಜದಲ್ಲಿ ಪುರುಷ ಭಾಷೆಯನ್ನು ಬಳಸುತ್ತಾಳೆ ಎಂಬ ವಾದ ಚಿಂತಕಿಯದು. ಇದರಿಂದ ಮಹಿಳೆಯು ಹೊಸ ಭಾಷೆಯನ್ನು ಸೃಷ್ಟಿಸಿಕೊಳ್ಳಲು ಹಿಂದಿರುವ ಅಗತ್ಯವನ್ನು ಈ ಮೂಲಕ ಚರ್ಚಿಸುತ್ತಾರೆ.

ಗಂಡು ಭಾಷೆಯ ಮೇಲೆ ತನ್ನ ನಿಯಂತ್ರಣವನ್ನು ಸಾಧಿಸಿಕೊಂಡಿರುವುದರಿಂದಲೇ ಮಹಿಳೆಯರು ಬರೆದ ಸಾಹಿತ್ಯವನ್ನಾಗಲಿ, ಕಾವ್ಯವನ್ನಾಗಲಿ, ಆಕೆ ಮಾತನಾಡಿದ ಮಾತುಗಳನ್ನಾಗಲಿ ಪುರುಷ ತನ್ನ ನೆಲೆಯಲ್ಲಿಯೇ, ತನ್ನ ಭಾಷೆಯ ನೆಲೆಯಲ್ಲಿಯೇ ಗ್ರಹಿಸುತ್ತಾನೆ. ಇದರಿಂದ ಮಹಿಳೆಗಿರುವ ಸ್ವಂತ ಅಭಿವ್ಯಕ್ತಿಯನ್ನು, ಸಂವೇದನೆಯನ್ನು ಇಲ್ಲದಂತೆ ಮಾಡಲಾಗಿದೆ. ಈ ಮೂಲಕ ಮಹಿಳೆಯನ್ನು ಎಲ್ಲಾ ವಿಧಾನಗಳಲ್ಲಿ, ಎಲ್ಲಾ ಮಾಧ್ಯಮಗಳಲ್ಲಿ ಅದೃಶ್ಯಗಳನ್ನಾಗಿಸುತ್ತದೆ. ಈ ಅಂಶವನ್ನು ಈ ಕೆಳಗಿನ ಕವನದ ಮೂಲಕ ಆಶಾ ಅವರು ಚರ್ಚೆಗೆ ಒಳಪಡಿಸುತ್ತಾರೆ.

> ಅವಳೆಂದದ್ದು–ಹಸಿವೆ ಮತ್ತು ಬಾಯಾರಿಕೆ
>
> ಆತನೆಂದ–ಚೆನ್ನಾಗಿ ಉಣ್ಣು ಕುಡಿ
>
> ಅಕೆ ಅತ್ತಳು ಆಗ
>
> ಆತ ನಕ್ಕ (‘ಆತ ಆಕೆ ಭಾಷೆ’)

ಈ ಮೇಲ್ಕಂಡ ಪದ್ಯದಲ್ಲಿ ಮಹಿಳೆ ಮಾತನಾಡಿದರೆ ಪುರುಷ ತನ್ನ ವ್ಯಾಪ್ತಿಯಲ್ಲಿಯೇ ಗ್ರಹಿಸುತ್ತಿದ್ದಾನೆ. ತನಗೆ ಅನಿಸಿದ ಅರ್ಥಗಳಲ್ಲಿ ಅರ್ಥೈಸಿಕೊಳ್ಳುತ್ತಿದ್ದಾನೆ. ಈ ಮೂಲಕ ಪುರುಷ ತನ್ನ ಗ್ರಹಿಕೆಯಲ್ಲಿಯೇ ಮಹಿಳೆಗೆ ಪ್ರತಿಕ್ರಿಯಿಸುತ್ತಾನೆ. ಆದ್ದರಿಂದ ಮಹಿಳೆ ಒಂದು ಅರ್ಥದಲ್ಲಿ ಮಾತನಾಡಿದರೆ ತಾನು ಒಂದು ಅರ್ಥದಲ್ಲಿ ಉತ್ತರ ಕೊಡುತ್ತಾನೆ. ಹಾಗಾಗಿ ಮಹಿಳೆಯ ಅಭಿವ್ಯಕ್ತಿ, ಹೋರಾಟ ಪುರುಷ ಭಾಷೆಯನ್ನು ಮೀರಿ ಬರಲು ಸಾಧ್ಯವಾಗಿಲ್ಲ. ಇದರಿಂದ ಆಶಾ ಅವರು ಈ ಪುರುಷ ಭಾಷೆಯ ಗ್ರಹಿಕೆಯನ್ನು ಒಡೆಯುತ್ತಾ, ಕಾವ್ಯದಲ್ಲಿ ಮಹಿಳೆಯರು ಕಟ್ಟಿಕೊಂಡ ಭಾಷೆಯನ್ನು ಗುರುತಿಸುತ್ತಾರೆ. ಮಹಿಳೆಯು ಪುರುಷ ಭಾಷೆಯನ್ನು ಒಡೆಯುತ್ತಾ ತನ್ನ ಭಾಷೆಯನ್ನು ಕಾವ್ಯದ ಮೂಲಕ ಮರು ರಚಿಸಿಕೊಳ್ಳುತ್ತಿದ್ದಾಳೆ ಎಂಬುದನ್ನು ಈ ಎಲ್ಲಾವುಗಳಿಂದ ಲೇಖಕಿ ಶೋಧಿಸುತ್ತಾರೆ. ಹೀಗೆ ಭಾಷೆಯನ್ನು ರಚಿಸಿಕೊಳ್ಳುವ ಭಾಗವಾಗಿ ಕಾವ್ಯದ ಹುಟ್ಟನ್ನು ನೋಡಬಹುದು. ಹೀಗಾಗಿ ಹೆಣ್ಣು ಕಾವ್ಯವನ್ನು ತನ್ನ ಪ್ರತಿಭೆಯನ್ನು ತೋರಿಸಿಕೊಳ್ಳುವುದಕ್ಕಾಗಿ, ಪ್ರತಿಷ್ಠೆಗಾಗಿ ಬರೆಯುವುದಿಲ್ಲ. ಕಾವ್ಯದ ರಚನೆಯ ಹಿಂದೆ ತನ್ನನ್ನು ರಚಿಸಿಕೊಳ್ಳುವ, ಭಾಷೆಯನ್ನು ರಚಿಸಿಕೊಳ್ಳುವ ಉದ್ದೇಶವಿದೆ. ಹೀಗೆ ಭಾಷೆಯನ್ನು ಮರು ಸೃಷ್ಟಿಸಿಕೊಳ್ಳಬೇಕೆಂಬುದನ್ನು ಆಶಾ ಅವರು ಒತ್ತಾಯಿಸುತ್ತಾರೆ.

ಮಹಿಳೆಯ ಭಾಷಾ ಗ್ರಹಿಕೆಯನ್ನು ಕುರಿತಂತೆ ಆಶಾದೇವಿಯರು ಈ ರೀತಿ ಹೇಳುತ್ತಾರೆ. "ಕಾವ್ಯದಲ್ಲಿ ಹೆಣ್ಣು ನಡೆಸುವ ಮಹಾ ಪ್ರಯತ್ನವು ಪರಕೀಯವಾದ ಭಾಷೆಯನ್ನು 'ಸ್ವಂತ' ಭಾಷೆಯಾಗಿಸಿಕೊಳ್ಳುವ ಅಥವಾ ಕೊಟ್ಟ ಭಾಷೆಯನ್ನು ತನ್ನ ಭಾಷೆಯಾಗಿಸಿಕೊಳ್ಳುವ ಪ್ರಯತ್ನ"[೨] ಮಹಿಳೆಯು ಪುರುಷ ಭಾಷೆಯನ್ನು ಬಳಸಿದರೂ ತನ್ನ ಗ್ರಹಿಕೆಯ ನೆಲೆಯಲ್ಲಿಯೇ ಬಳಸುತ್ತಾಳೆ. ಏಕೆಂದರೆ ಆಕೆಗೆ ಬೇರೆ ಆಯ್ಕೆಗಳಿಲ್ಲ ಎಂಬುದನ್ನು ಈ ಮೂಲಕ ಆಶಾ ಅವರು ತಿಳಿಸುತ್ತಾರೆ. ಮಹಿಳೆಗೂ ಸ್ವಂತ ಭಾಷೆ ಇದೆ ಎಂಬುದನ್ನು ಕಾವ್ಯವನ್ನು ಆಳವಾದ ಚರ್ಚೆಗೆ ಒಳಪಡಿಸುವ ಮೂಲಕ ತಿಳಿಸುತ್ತಾರೆ. ಇದರಿಂದ ಹೆಣ್ಣು ತನ್ನ ಭಾಷೆಯನ್ನು ಕಟ್ಟಿಕೊಳ್ಳಲು ಉಂಟಾಗಿರುವ ಪರಿಸ್ಥಿತಿಯ ಹಿಂದಿರುವ ಸಾಮಾಜಿಕ ಒತ್ತಡವನ್ನು ಗುರುತಿಸುತ್ತಾ, ಈ ಮೂಲಕ ಮಹಿಳಾ ಕಾವ್ಯದ ಮರು ಓದಿಗೆ ಒತ್ತಾಯಿಸುತ್ತಾರೆ. ಮಹಿಳಾ ಕಾವ್ಯದ ಮರು ಓದಿನ ಮೂಲಕ, ಮರು ವ್ಯಾಖ್ಯಾನದ ಮೂಲಕ, ಮಹಿಳೆಯ ಭಾಷಾ ನೆಲೆಯ ಹುಡುಕಾಟ, ಸೃಜನಶೀಲತೆಯ ಹುಡುಕಾಟ, ಅಸ್ಮಿತೆಯ ಹುಡುಕಾಟ ಸಾಧ್ಯ ಎಂಬ ಚಿಂತನೆಯನ್ನು ವ್ಯಕ್ತಪಡಿಸುತ್ತಾರೆ. ಇದರ ಭಾಗವಾಗಿಯೇ ಮಹಿಳಾ ಸಾಹಿತ್ಯ ಮಿಮಾಂಸೆಯನ್ನು, ಕಾವ್ಯ ರಚನೆಯ ಹಿಂದಿರುವ ಪುರುಷ ಸಮಾಜದ ದಬ್ಬಾಳಿಕೆಯನ್ನು, ಮಹಿಳಾ ಹೋರಾಟದ ಹುಟ್ಟನ್ನು ಗುರುತಿಸುತ್ತಾರೆ. ಹೀಗಾಗಿ ಕಾವ್ಯವನ್ನು ಕಲೆಯ ನೆಲೆಯಲ್ಲಿ ಮಾತ್ರ ಗ್ರಹಿಸದೆ ಅದಕ್ಕೆ ಸಾಮಾಜಿಕ ಆಯಾಮ ಇರುವುದನ್ನು ತಿಳಿಸುತ್ತಾರೆ. ಭಾಷೆಯಲ್ಲಿ ಕೂಡ ಪುರುಷನ ದಬ್ಬಾಳಿಕೆಯನ್ನು ಓದಿನ ಗ್ರಹಿಕೆಯ ಭಿನ್ನತೆಗಳನ್ನು ಗುರುತಿಸುತ್ತಾ, ಪುರುಷ ಭಾಷೆಯು ಮಹಿಳೆಯ ಅಭಿವ್ಯಕ್ತಿಯನ್ನು, ರಚನೆಯನ್ನು, ಹತ್ತಿಕ್ಕುತ್ತಿರುವ ಹಿಂದಿನ ಉಪಾಯಗಾರಿಕೆಯನ್ನು ಗಮನಕ್ಕೆ ತರುತ್ತಾರೆ.

ಹೀಗಾಗಿ ಮಹಿಳೆಯು ತನ್ನ ಆಲೋಚನೆ, ಅಭಿವ್ಯಕ್ತಿಗೆ ಸೂಕ್ತವಾದ ಭಾಷೆಯನ್ನು ಹಿಡಿದಿಟ್ಟುಕೊಳ್ಳುವ, ರಚಿಸಿಕೊಳ್ಳುವ ಕೆಲಸವನ್ನು ಕೇವಲ ಸಾಹಿತ್ಯಿಕವಾಗಿ ಮಾಡಿಕೊಳ್ಳಲು ಸಾಧ್ಯವಿಲ್ಲ. ಸಾಮಾಜಿಕವಾಗಿ ಬದುಕುವುದಕ್ಕೆ, ಸ್ಥಾನಮಾನವನ್ನು ಸೃಷ್ಟಿಸಿಕೊಳ್ಳುವ ಹೋರಾಟದ ಭಾಗವಾಗಿಯೇ ಭಾಷೆಯನ್ನು ರಚಿಸಿಕೊಳ್ಳುವ ಅನಿವಾರ್ಯತೆ ಇದೆ. ಹೆಣ್ಣಿಗೆ ಘನತೆ ಸಿಗುವಂತಹ ಸಮಾಜ ನಿರ್ಮಾಣ ಆಗಬೇಕು ಎಂದರೆ ಅದಕ್ಕಾಗಿ ಹೋರಾಟ ಮಾಡಬೇಕು. ಈ ಹೋರಾಟಕ್ಕೆ ಹಲವಾರು ಆಯಾಮಗಳು ಇವೆ. ಈ ಹೋರಾಟ ಮಾಡುವ ಭಾಗವಾಗಿಯೇ ಭಾಷೆಯ ನಿರ್ಮಾಣ ಆಗಬೇಕು. ಭಾಷೆಯನ್ನು ನಿರ್ಮಾಣ ಮಾಡಿಕೊಂಡೆ ಹೋರಾಟ ಮಾಡಬೇಕು. ಈ ಎರಡು ಕಾರ್ಯಗಳನ್ನು ಇಂದಿನ ಮಹಿಳಾ ಚಿಂತಕಿಯರು, ಮಹಿಳಾ ಲೇಖಕಿಯರು ಒಟ್ಟೊಟ್ಟಿಗೆ ಸಾಧಿಸುತ್ತಿದ್ದಾರೆ. ಇದರಿಂದ ಭಾಷೆಯನ್ನು ಕಾವ್ಯದ ಮೂಲಕ ರಚಿಸಿಕೊಂಡು ಹೋರಾಟ ಮಾಡುತ್ತಾರೆ. ಹೋರಾಟ ಮಾಡುವ ಮೂಲಕ ಭಾಷೆಯನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಈ ಎರಡು ಅಂಶಗಳನ್ನು ಆಶಾದೇವಿಯವರು ಮಹಿಳಾ ಸಾಹಿತ್ಯ ಪರಂಪರೆಯ ಮೂಲಕ ಗುರುತಿಸುತ್ತಾರೆ. ಆದ್ದರಿಂದಲೇ ಸ್ತ್ರೀವಾದಿಗಳು ಇಂದು ಮಹಿಳೆಯದೇ ಆದ ಭಾಷೆಯು ಸೃಷ್ಟಿಯಾಗಬೇಕೆಂದು ಒತ್ತಾಯಿಸುತ್ತಾರೆ. ಮಹಿಳಾ ಕಾವ್ಯದ ಮೂಲಕ ಮಹಿಳೆಯು ರಚಿಸಿಕೊಂಡ ಹೊಸ ಭಾಷೆಯ ರಚನೆಯನ್ನು ಗುರುತಿಸುತ್ತಾ ಮಹಿಳಾ ಸೃಜನಶೀಲತೆಯ ಸ್ವರೂಪವನ್ನು ಶೋಧಿಸುತ್ತಾರೆ.

ಈ ಎಲ್ಲವುಗಳನ್ನು ಗಮನಿಸಿದರೆ ಮಹಿಳಾ ಕಾವ್ಯದ ರಚನೆಯ ಹಿಂದೆ ಸಾಮಾಜಿಕ, ರಾಜಕೀಯ ಕಾರಣಗಳು ಇವೆ. ಪ್ರತಿಭಟನೆಯು ದ್ಯೋತಕವಾಗಿ, ಭಾಷೆಯ ಮರು ರಚನೆಯ

ಭಾಗವಾಗಿ, ಮಹಿಳಾ ಚಹರೆಯನ್ನು ರಚಿಸಿಕೊಳ್ಳುವ ಭಾಗವಾಗಿ, ಮಹಿಳಾ ಸಂಕಥನವನ್ನು ಕಟ್ಟಿಕೊಳ್ಳುವ ಭಾಗವಾಗಿ, ಹೆಣ್ಣಿನ ಹೊಸ ಸ್ವರೂಪವನ್ನು ಹೇಳುವ, ಶೋಧಿಸುವ ಭಾಗವಾಗಿ ಇಂದು ಮಹಿಳಾ ಕಾವ್ಯವು ಹುಟ್ಟಿಕೊಂಡಿದೆ ಎಂದು ಆಶಾದೇವಿಯವರು ಗುರುತಿಸುತ್ತಾರೆ.

ಮಹಿಳೆಯ ಸೃಜನಶೀಲತೆಯನ್ನು ಕುರಿತು ಆಶಾ ಅವರು ಹೀಗೆ ಪ್ರತಿಕ್ರಿಯಿಸುತ್ತಾರೆ, "ಅವಳು ಭಾಷೆಯನ್ನು ಮಾತ್ರ ರಚಿಸಿಕೊಳ್ಳುತ್ತಿಲ್ಲ. ಅದರೊಂದಿಗೆ ತನ್ನನ್ನು ರಚಿಸಿಕೊಳ್ಳುತ್ತಿದ್ದಾಳೆ ಎಂಬುದಾಗಿ ತಿಳಿಸುತ್ತಾರೆ."[೩] ಇಲ್ಲಿ ಮಹಿಳೆಯು ಕಾವ್ಯದ ಮೂಲಕ ಭಾಷೆಯನ್ನು ರಚಿಸಿಕೊಂಡು, ಆ ಭಾಷೆಯ ಮೂಲಕವೇ ತನ್ನ ಚಹರೆಯನ್ನು ಹೇಳುತ್ತಿದ್ದಾಳೆ. ಭಾಷೆಯ ಮೂಲಕ ತನ್ನನ್ನು ರಚಿಸಿಕೊಳ್ಳುವುದು ಮತ್ತು ತನ್ನನ್ನು ರಚಿಸಿಕೊಳುವ ಭಾಗವಾಗಿ ಭಾಷೆಯನ್ನು ರಚಿಸಿಕೊಳ್ಳುವುದು, ಹೀಗೆ ಈ ಎರಡು ಕೆಲಸಗಳನ್ನು ಏಕಕಾಲದಲ್ಲಿ ಸಾಧಿಸುತ್ತಿದ್ದಾಳೆ ಎಂದು ಆಶಾ ಈ ಮೂಲಕ ತಿಳಿಸುತ್ತಾರೆ. ತಾನು ಏನು ಅಲ್ಲ ಎಂಬುದನ್ನು ಹೇಳುತ್ತಾ, ತನ್ನ ರಚನೆ ಏನು ಎಂಬುದನ್ನು ಈ ಕಾವ್ಯದ ಮೂಲಕ, ಭಾಷೆಯ ಮೂಲಕ ಸಾಧಿಸುತ್ತಾಳೆ.

ಮುಂದುವರಿದು ಮಹಿಳಾ ಭಾಷೆಯ ರಚನೆಯ ಹಿಂದಿರುವ ಕಾರಣವನ್ನು ಕುರಿತು ಆಶಾ ಅವರು ಹೀಗೆ ಗ್ರಹಿಸುತ್ತಾರೆ. "ಹೆಣ್ಣಿನ ಅಂತರಂಗದ ಒತ್ತಡ ಮತ್ತು ತುರ್ತು ಭಾಷೆಯದೆಷ್ಟೋ, ಅಷ್ಟೆ ಅವಳ ಅಸ್ಮಿತೆಯ ಹುಡುಕಾಟ ಮತ್ತು ರಚನೆಯದ್ದೂ ಹೌದು. ಆದ್ದರಿಂದಲೇ ಹೆಣ್ಣಿನ ಕಾವ್ಯ ಭಾಷೆ ಮತ್ತು ಅಸ್ಮಿತೆಗಳ ನಡುವಿನದ್ದು ಬಿಡಿಸಲಾರದ ಅಖಂಡ ಸಂಬಂಧ. ಬೇಕಾದರೆ ಇದನ್ನು 'ತ್ರಿವೇಣಿ ಸಂಗಮ' ಎಂದೂ ಕರೆಯೋಣಾ."[೪] ಈ ಹೇಳಿಕೆಯಲ್ಲಿ ಮಹಿಳೆಗೂ ಕಾವ್ಯಕ್ಕೂ, ಮಹಿಳಾ ಅಸ್ಮಿತೆಗೂ, ಮಹಿಳಾ ಭಾಷೆಗೂ ಇರುವ ಅಂತರ್ ಸಂಬಂಧವನ್ನು ಆಶಾ ಅವರು ಹೇಳುತ್ತಾರೆ. ಅಂದರೆ ಮಹಿಳೆಗೆ ಅಸ್ಮಿತೆಯ ಹುಡುಕಾಟ, ಭಾಷೆಯ ರಚನೆ ಕಾವ್ಯದ ಮೂಲಕ ಸಾಧ್ಯ ಎಂದೂ ಈ ಮೂಲಕ ಹೇಳುತ್ತಾರೆ. ಈ ಎರಡು ಕೆಲಸಗಳನ್ನು ಕಾವ್ಯದ ಮೂಲಕ ಸಾಧಿಸಲು ಮಹಿಳೆಗೆ ಇರುವ ಒತ್ತಡವನ್ನು ಗುರುತಿಸುತ್ತಾರೆ. ಹೀಗೆ ಕಾವ್ಯದ ರಚನೆಯ ಮೂಲಕವಾಗಿ ಅಸ್ಮಿತೆಯನ್ನು, ಅಸ್ಮಿತೆಯ ಹುಡುಕಾಟದ ಮೂಲಕವಾಗಿ ಕಾವ್ಯವನ್ನು ಬಳಸಿಕೊಳ್ಳುತ್ತಾಳೆ. ಈ ಮೂರು ಕೆಲಸಗಳನ್ನು ಒಟ್ಟೊಟ್ಟಾಗೆ ಸಾಧಿಸಿದ್ದಾರೆ ಎಂದು ಆಶಾ ಅವರ ನಿಲುವಾಗಿದೆ. ಅಂದರೆ ಮಹಿಳೆಯು ತನ್ನ ಸೃಜನಶೀಲತೆಯ ಶಕ್ತಿಯ ಮೂಲಕವೇ ತನ್ನ ಇಡೀ ಕಾರ್ಯವನ್ನು ಸಾಧಿಸಿಕೊಳ್ಳುತ್ತಾಳೆ. ಹೆಣ್ಣಿಗೆ ಈ ಸೃಜನಶೀಲತೆ ಇರುವುದರಿಂದಲೇ ಒಂದು ಕಡೆ ಕುಟುಂಬ, ಇನ್ನೊಂದು ಕಡೆ ಹೊರಗಿನ ಎಲ್ಲ ಕೆಲಸಗಳನ್ನು ಎಲ್ಲಾ ಜವಾಬ್ದಾರಿಗಳನ್ನು ಸಮದೂಗಿಸಿಕೊಂಡು ಹೋಗುತ್ತಿದ್ದಾಳೆ.

### ೭.೪. ಕಾವ್ಯ ಸೃಷ್ಟಿಯ ನೆಲೆಗಳು

ಮಹಿಳೆಯು ಪುರುಷನಂತೆ ಅನಾದಿಕಾಲದಿಂದಲೂ ಸಾಹಿತ್ಯ ಕ್ಷೇತ್ರದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಾಳೆ. ಇನ್ನು ಹನ್ನೆರಡನೆ ಶತಮಾನದ ವಚನ ಸಾಹಿತ್ಯದಲ್ಲಿ ಅಗಾಧ ಪ್ರಮಾಣದಲ್ಲಿ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ಕೊಟ್ಟು ಸಾಮಾಜಿಕ ಬದಲಾವಣೆಗೆ ಶ್ರಮಿಸಿದ್ದಾಳೆ. ಮಹಿಳೆಯ ಸಾಹಿತ್ಯದ ರಚನೆಯ ಹಿಂದೆ ಹಲವಾರು ಒತ್ತಡಗಳು, ಕಾರಣಗಳು ಇದ್ದೇ ಇರುತ್ತವೆ. ಮಹಿಳೆಯು ಸಾಹಿತ್ಯವನ್ನು ತೋರಿಕೆಗೆ ಬರೆಯುವುದಿಲ್ಲ, ಮಾನಸಿಕ ತೊಳಲಾಟಗಳನ್ನು ಹೊರಹಾಕಲು

ಬರೆಯುತ್ತಾಳೆ. ಹೀಗಾಗಿ ಸಮಕಾಲೀನ ಮಹಿಳಾ ಕಾವ್ಯನ್ನು ನೋಡಿದರೆ ಕಾವ್ಯವನ್ನು ಒಂದು ಸಾಹಿತ್ಯಿಕ ಹವ್ಯಾಸಕ್ಕಿಂತ ಹೆಚ್ಚಾಗಿ ಮನಸ್ಥಿತಿಯನ್ನು ಪ್ರಕಟಪಡಿಸುವ ಅನಿವಾರ್ಯ ಮಾಧ್ಯಮವಾಗಿದೆ ಎಂಬುದು ಗಮನಕ್ಕೆ ಬರುತ್ತದೆ. ಆದರೂ ಇವೆಲ್ಲದರ ಮಧ್ಯೆ ಮಹಿಳೆಯು ಹಿಂದೆಂದಿಗಿಂತ ಸಾಹಿತ್ಯದಲ್ಲಿ ಹೆಚ್ಚು ಕೃಷಿ ಮಾಡುತ್ತಿದ್ದಾಳೆ. ಮಹಿಳೆ ತನ್ನ ಕಾವ್ಯದ ರಚನೆಯ ಮೂಲಕ ಪುರುಷ ಸಂಸ್ಕೃತಿಯ ದಬ್ಬಾಳಿಕೆಯನ್ನು ವಿರೋಧಿಸುತ್ತಾಳೆ. ಹೀಗಾಗಿ ಮಹಿಳೆಯು ನೇರವಾಗಿ ಅಭಿವ್ಯಕ್ತಿಸಲು ಸಾಧ್ಯವಾಗದ ಸಮಯದಲ್ಲಿ ಪುರುಷ ಸಮಾಜವನ್ನು ಕುರಿತು ಟೀಕೆ ಮಾತ್ರವಲ್ಲ, ಪ್ರೀತಿ, ಪ್ರೇಮ, ಪ್ರಣಯದಂತಹ ಸಂಗತಿಗಳನ್ನು ಸಹ ಕಾವ್ಯದ ಮೂಲಕ ವ್ಯಕ್ತಪಡಿಸುತ್ತಾಳೆ. ಮೊದಲಿನಿಂದಲೂ ಮಹಿಳೆಯರು ತಾನು ಹೇಳಿಕೊಳ್ಳಲಾಗದಂತಹ ಸಂಗತಿಗಳನ್ನು ಕಾವ್ಯದ ಮೂಲಕ, ತಮ್ಮ ಸೃಜನಶೀಲ ಶಕ್ತಿಯ ಮೂಲಕ ಹೊರಗೆಡವಿದ್ದಾರೆ. ಮುಖ್ಯವಾಗಿ ಮೀರಾ, ರಾಧೆ, ಅಕ್ಕಮಹಾದೇವಿ, ಆಂಡಾಳ್ ಮುಂತಾದವರು ತಮ್ಮ ಪ್ರಿಯತಮನ ಮೇಲಿನ ಪ್ರೀತಿಯನ್ನು ನೇರವಾಗಿ ಹೇಳಲಾಗದ ಸಂದರ್ಭದಲ್ಲಿ ಭಕ್ತಿಯ ಮೂಲಕ ಕಾವ್ಯವನ್ನು ಮಾಧ್ಯಮವನ್ನಾಗಿಸಿಕೊಂಡು ತಮ್ಮ ವೇದನೆಯನ್ನು, ನಿವೇದನೆಯನ್ನು ಹೇಳಿಕೊಂಡಿದ್ದಾರೆ. ಈ ಎಲ್ಲಾ ಅಂಶಗಳನ್ನು ಆಶಾದೇವಿಯವರು ಮಹಿಳಾ ಸಾಹಿತ್ಯದ, ಮಹಿಳಾ ಕಾವ್ಯದ, ಮರು ಓದಿನ ಮೂಲಕ ಚರ್ಚೆಗೆ ಒಳಪಡಿಸುತ್ತಾರೆ.

ಆದ್ದರಿಂದ ಆಶಾ ಅವರು ಕಾವ್ಯವನ್ನು ರಸಿಕತೆಗಾಗಿ ಮನೋರಂಜನೆಗಾಗಿ ಓದುವುದಿಲ್ಲ. ಮಹಿಳಾ ಪ್ರತಿರೋಧವನ್ನು ತಿಳಿಯಲು, ಮಹಿಳೆಯು ಲೋಕವನ್ನು ನೋಡುವ ದೃಷ್ಟಿಕೋನವನ್ನು ತಿಳಿಯಲು ಓದುತ್ತಾರೆ. ಇದರಿಂದ ಕಾವ್ಯದ ಓದನ್ನು ಸಾಹಿತ್ಯದ ಶೈಕ್ಷಣಿಕ ಓದು ಅಲ್ಲ. ಮಹಿಳೆಯರು ಮಾಡಿದ ಹೋರಾಟವನ್ನು ತಿಳಿಯುವ, ಅವರ ಸಂವೇದನೆಯನ್ನು ತಿಳಿಯುವ ಓದು ಎನ್ನುತ್ತಾರೆ. ಈ ಮೂಲಕ ಮಹಿಳಾ ಸಾಹಿತ್ಯದ ಓದಿನ ಗ್ರಹಿಕೆಯನ್ನು ತಿಳಿಸುತ್ತಾ, ಇದುವರೆಗೆ ಮಹಿಳಾ ಕಾವ್ಯವನ್ನು ವ್ಯಾಖ್ಯಾನ ಮಾಡಲಾದ ರೀತಿಗಿಂತ ಭಿನ್ನವಾಗಿ ವ್ಯಾಖ್ಯಾನಿಸುತ್ತಾರೆ.

ದಿನನಿತ್ಯ ಕೆಲಸ ಕಾರ್ಯಗಳನ್ನು ಮಾಡುತ್ತಲೇ ಮಹಿಳೆಯು ಸಾಹಿತ್ಯ ರಚಿಸಿದ್ದಾಳೆ. ಅದೇ ಜಾನಪದ ಮೌಖಿಕ ಸಾಹಿತ್ಯ. ಆದ್ದರಿಂದಲೇ ಮಹಿಳಾ ಸೃಜನಶೀಲತೆಗೆ ಈ ಸಾಹಿತ್ಯ ಪ್ರಕಾರ ಕನ್ನಡಿಯಂತಿದೆ. ಈ ಜಾನಪದ ಸಾಹಿತ್ಯದಲ್ಲಿ ಮಹಿಳಾ ಸೃಜನಶೀಲತೆಯು ಇನ್ನೂ ಹೆಚ್ಚಾಗಿ ಅನಾವರಣಗೊಂಡಿದೆ ಎಂದು ಆಶಾ ದೇವಿಯವರು ಗುರುತಿಸುತ್ತಾರೆ. ಈ ಜಾನಪದ ಕವಯಿತ್ರಿಯರಿಗು ಕೂಡ ಕಾವ್ಯ ರಚಿಸಲು ಅನೇಕ ಒತ್ತಡಗಳೇ ಕಾರಣವಾಗಿವೆ. ಇವರು ಕೂಡ ತಮ್ಮ ಕಾವ್ಯದ ಮೂಲಕ ಪುರುಷ ದಬ್ಬಾಳಿಕೆ ಮತ್ತು ನಿಯಂತ್ರಣಕ್ಕೆ ಉತ್ತರ ಕೊಟ್ಟಿದ್ದಾರೆ. ಇದನ್ನು ಆಶಾದೇವಿಯರು ಈ ಕೆಳಗಿನ ಪದ್ಯದ ಮೂಲಕ ಗುರುತಿಸುತ್ತಾರೆ ಮತ್ತು ಚರ್ಚೆಗೆ ಒಳಪಡಿಸುತ್ತಾರೆ.

ಉಪ್ಪಿಲ್ದ ಊಟವ ಒಪ್ಪೊತ್ತಿಗುಣಲಾರೆ

ಒಪ್ಪದ ಸೀರಿ ಉಡಲಾರೆ ಬಾವಯ್ಯ

ತಪ್ಪಿಲ್ದೆ ಪಾದವ ಹಿಡಿಲಾರೆ ('ಕಾವ್ಯ ಬಿಡುಗಡೆಯ ಬಾಗಿಲು')

ಈ ಮೇಲ್ಕಂಡ ಪದ್ಯದಲ್ಲಿ ಮಹಿಳೆಯು ತನ್ನ ನಿಜ ಸ್ವರೂಪವನ್ನು ನೈಜ ವ್ಯಕ್ತಿತ್ವವನ್ನು ಸಮಾಜಕ್ಕೆ ಪ್ರಕಟಪಡಿಸಿದ್ದಾಳೆ. ಜೀವನದಲ್ಲಿ ತಪ್ಪಿಲ್ಲದೆ ರಾಜಿ ಮಾಡಿಕೊಳ್ಳುವುದಿಲ್ಲ ಎಂದು ಮಹಿಳೆಯು ಇಲ್ಲಿ ತಿಳಿಸುತ್ತಾಳೆ. ಇದರಿಂದ ಪುರುಷ ಹಾಕಿದ ನಿರ್ಬಂಧಗಳನ್ನು ಮೀರಲು ಕಲೆಯೇ ಅತ್ಯಂತ ಶಕ್ತವಾದ ಮಾಧ್ಯಮ ಎಂದು ಹೇಳಬಹುದು. ಈ ಎಲ್ಲಾ ಕಾವ್ಯದ ಒಳ ವಿನ್ಯಾಸಗಳನ್ನು ಆಶಾ ಅವರು ಗುರುತಿಸುತ್ತಾರೆ. ಜಾನಪದ ಕವಯಿತ್ರಿ ತನಗನಿಸಿದ್ದನ್ನು ಮುಲಾಜಿಗೆ ಒಳಗಾಗದೆ ನೇರವಾದ ಮಾತುಗಳಲ್ಲಿಯೇ ಪ್ರತಿಕ್ರಿಯೆ ನೀಡಿದ್ದಾಳೆ. ಹೀಗೆ ತನ್ನ ಸೃಜನಶೀಲತೆಯ ಮೂಲಕ ತನ್ನನ್ನು ತಾನು ತೋರ್ಪಡಿಸಿಕೊಳ್ಳುತ್ತಿರುವ ಅಂಶಗಳನ್ನು ಆಶಾದೇವಿಯವರು ಚರ್ಚೆಗೆ ಒಳಪಡಿಸುತ್ತಾರೆ. ಈ ಜಾನಪದ ಕವಯಿತ್ರಿಯರಿಗೆ ಮತ್ತು ಕಾವ್ಯಕ್ಕೂ ಇರುವ ಸಂಬಂಧವನ್ನು ಕುರಿತು ಆಶಾ ಅವರು ಹೀಗೆ ಹೇಳುತ್ತಾರೆ, "ಜಾನಪದ ಕಾವ್ಯದ ಅನಾಮಿಕ ಕವಯಿತ್ರಿಯರನ್ನು, ಮೌಖಿಕ ಪರಂಪರೆಯ ನೂರಾರು ಕವಯಿತ್ರಿಯರನ್ನು ಕಂಡಾಗ ಕಾವ್ಯವು ಹೆಣ್ಣಿನ ನಿಡುಗಾಲದ, ಅಂತರಂಗದ ಗೆಳತಿ ಎನ್ನುವ ಸಂಗತಿ ತಾನೇ ತಾನಾಗಿ ತಿಳಿಯುತ್ತದೆ. ಕಾವ್ಯ ಗಂಡಿನ ವ್ಯಕ್ತಿತ್ವಕ್ಕೊಂದು ಅಲಂಕಾರ ಕಿರೀಟ, ಪತಾಕೆ... ಹೀಗೆ ಕಾವ್ಯ ಅವನಿಗೊಂದು ಏಣಿ... ಹೆಣ್ಣಿಗಾದರೋ ಕಾವ್ಯ ಅವಳ ಬದುಕು.. ವ್ಯಕ್ತಿತ್ವದ ದೋಣಿಯ ಹುಟ್ಟು"[೫]

ಮೇಲ್ಕಂಡ ಹೇಳಿಕೆಯಲ್ಲಿ ಆಶಾ ಅವರು ಗಂಡಿಗೂ ಕಾವ್ಯಕ್ಕೆ ಇರುವ ಸಂಬಂಧವನ್ನು, ಹೆಣ್ಣಿಗೂ ಕಾವ್ಯಕ್ಕೂ ಇರುವ ಅಂತರ್ ಸಂಬಂಧವನ್ನು ತಿಳಿಸುತ್ತಾರೆ. ಕಾವ್ಯ ಮಹಿಳೆಯ ಬದುಕಿನಲ್ಲಿ ಎಂತಹ ಅಗಾಧವಾದ ಸ್ಥಾನವನ್ನು ಪಡೆದಿದೆ ಎಂಬುದನ್ನು ಶೋಧಿಸುತ್ತಾರೆ. ಮಹಿಳೆಯು ತನ್ನ ಎಲ್ಲಾ ಸಂವೇದನೆಗಳನ್ನು ಮುಖ್ಯವಾಗಿ ಕಾವ್ಯದ ಮೂಲಕವೇ ಹೊರಗೆಡವಿದ್ದಾಳೆ. ಕಾವ್ಯ ಎನ್ನುವುದು ಮಹಿಳೆಗೆ ಮತ್ತು ಪುರುಷನಿಗೆ ಎರಡು ಭಿನ್ನ ರೀತಿಯಲ್ಲಿ ಬಳಕೆಯಾಗುತ್ತಿದೆ ಎಂದು ಆಶಾ ಅವರು ತಿಳಿಸುತ್ತಾರೆ. ಇಲ್ಲಿ ಪುರುಷನಿಗೆ ಕಾವ್ಯ ರಚನೆ ಅನಿವಾರ್ಯ ಅಲ್ಲ ಎಂದು ಹೇಳುತ್ತಾ, ಮಹಿಳೆಗೆ ಕಾವ್ಯ ರಚನೆ ಎಷ್ಟು ಒತ್ತಡಗಳಿಂದ ಅನಿವಾರ್ಯತೆಯಿಂದ ಕೂಡಿದೆ ಎಂಬುದನ್ನು ಚಿಂತಕಿ ತಿಳಿಸುತ್ತಾರೆ. ಮಹಿಳೆಯು ತನ್ನ ಕಾವ್ಯ ರಚನೆಯ ಮೂಲಕವೇ ಸ್ತ್ರೀವಾದವನ್ನು ಹುಟ್ಟುಹಾಕಿದ್ದಾರೆ. ಬೆಳೆಸಿಕೊಂಡು ಬಂದಿದ್ದಾರೆ. ಇದನ್ನು ಆಶಾದೇವಿಯವರು ಗುರುತಿಸುತ್ತಾರೆ. ಈ ಅಂಶವನ್ನು ಮಹಿಳಾ ಕಾವ್ಯದ ಮೂಲಕ ಲಲಿತಾ ಸಿದ್ಧಬಸವಯ್ಯ ಅವರ ಕಾವ್ಯದ ಮೂಲಕ ಸಾಬೀತುಪಡಿಸುತ್ತಾರೆ. ಲಲಿತಾ ಅವರು ಈ ಕೆಳಗಿನ ತಮ್ಮ ಪದ್ಯದ ಮೂಲಕ ಬಸವಣ್ಣನ 'ಕೂಸೂಳ್ಳ ಸೂಳೆ' ವಚನಕ್ಕೆ ಉತ್ತರವನ್ನು ನೇರವಾಗಿ ಕೊಡುತ್ತಾರೆ.

ಇತ್ತಿತ್ತ ಜರುಗಬ್ಯಾಡ, ಮಗು ಮಲಗೈತೆ

ಅತ್ತೂ, ಅತ್ತೂ ಈಗಿನ್ನ ಹಂಗೆ ಕಣ್ಣು ಮುಚ್ಚೈತೆ

ತೋ, ಬಿಡು ಎದೆ, ನಂದಿನ್ನಾ ಕುಡಿಯೋ ಮಗು

ಕಿರುಚಬ್ಯಾಡ, ಬೇಕಾದ್ರಿರು ಬ್ಯಾಡದಿದ್ರೆ ಎದ್ದೋಗು

ಈ ಮೇಲ್ಕಂಡ ಪದ್ಯದಲ್ಲಿ ಮಹಿಳೆಯನ್ನು ಪುರುಷ ಕಾಣುತ್ತಿರುವ, ಗ್ರಹಿಸಿರುವ ನೆಲೆಯನ್ನು ಒಡೆಯುವ ಭಾಗವಾಗಿ ಈ ಕಾವ್ಯದ ರಚನೆ ಇದೆ. ಇಲ್ಲಿ ಮಹಿಳೆಯ ನೈಜ ವ್ಯಕ್ತಿತ್ವವನ್ನು, ಹೊಸ ಹೆಣ್ಣಿನ ಚಹರೆಯನ್ನು ಲಲಿತಾ ಅವರು ಕಾವ್ಯದ ಮೂಲಕ ಪ್ರಕಟಪಡಿಸಿರುವುದನ್ನು ಆಶಾ ಅವರು ಚರ್ಚೆಗೆ

ಒಳಪಡಿಸಿದ್ದಾರೆ. ಈ ಮೂಲಕ ಮಹಿಳೆಯು ಈ ವೃತ್ತಿಗೆ ಬರಲು ಪುರುಷರೇ ಕಾರಣ ಎಂಬ ಅಂಶವನ್ನು ಇಲ್ಲಿ ತಿಳಿಸುತ್ತಾರೆ. ಸೂಳೆ ಎಂಬ ಪಟ್ಟವನ್ನು ಕೊಟ್ಟು ಆಕೆಯ ಸಾಮಾಜಿಕ ಬದುಕನ್ನು ನಿರಾಕರಿಸಲಾಗಿದೆ. ಆಕೆಯ ವ್ಯಕ್ತಿತ್ವಕ್ಕೆ ಕೆಟ್ಟ ಹೆಸರನ್ನು ತರಲಾಗಿದೆ. ಈ ಮೂಲಕ ಹಣದ ಗಳಿಕೆಯ ನೆಲೆಯಲ್ಲಿಯೇ ಮಹಿಳೆಯನ್ನು ಗ್ರಹಿಸಲಾಗಿದೆ. ಇದು ಪುರುಷ ಸಮಾಜದ ವ್ಯವಸ್ಥಿತ ಹುನ್ನಾರ ಎಂದು ಲಲಿತಾ ಅವರ ಕವನದ ಮೂಲಕ ಮಹಿಳೆಗಿರುವ ನಿಜ ಚಹರೆಯನ್ನು ಆಶಾ ಅವರು ಶೋಧಿಸುತ್ತಾರೆ.

ಸಮಾಜದಲ್ಲಿ ಇದುವರೆಗೆ ಸೂಳೆಯನ್ನು ಗ್ರಹಿಸಿರುವ ಮಾದರಿಯನ್ನು ವಿರೋಧಿಸುವ ನೆಲೆಯಲ್ಲಿ ಈ ಕಾವ್ಯದ ರಚನೆಯನ್ನು ಚಿಂತಕಿ ಚರ್ಚಿಸುತ್ತಾರೆ. ಈ ಮೂಲಕ ಮಹಿಳೆಗಿರುವ ಅನನ್ಯ ವ್ಯಕ್ತಿತ್ವವನ್ನು ಗುರುತಿಸುತ್ತಾರೆ. ಈ ಕವಿತೆಗೆ ಆಶಾ ಅವರು ಪ್ರತಿಕ್ರಿಯಿಸುತ್ತಾ "ಕೂಸುಳ್ಳ ಸೂಳೆಯದು ಧನದಾಸೆಯಲ್ಲ ಹೆಣ್ಣಿನ ಬದುಕುವ ದುರ್ದಮ್ಯ ಒತ್ತಡದಲ್ಲಿ ಎದುರಾಗಿರುವ ದುರಂತ ಸನ್ನಿವೇಶ ಎನ್ನುವುದನ್ನು ಸಾದರಪಡಿಸುವ ಈ ಕವಿತೆ ಬಸವಣ್ಣನಿಗೆ ಕೊಟ್ಟ ಉತ್ತರವಲ್ಲ, ತನ್ನನ್ನು ತಾನೇ ಅರಿಯುವ ಪ್ರಯತ್ನ."[೬] ಇಲ್ಲಿ ಆಶಾ ಅವರು ಮಹಿಳೆಗಿರುವ ಜೀವನದ ಅನಿವಾರ್ಯತೆಯನ್ನು, ಅಸಹಾಯಕತೆಯನ್ನು ಕುರಿತು ಹೇಳುತ್ತಾರೆ. ಯಾವುದೇ ಮಹಿಳೆಯು ತಾನೇ ತಾನಾಗಿ ಈ ವೃತ್ತಿಗೆ ಹೋಗುವುದಿಲ್ಲ. ಅದಕ್ಕೊಂದು ಸಾಮಾಜಿಕ ಬದುಕಿನ ಅನಿವಾರ್ಯತೆಯ ಒತ್ತಡ ಇರುತ್ತದೆ ಎಂದು ಗುರುತಿಸುತ್ತಾರೆ. ಮಹಿಳೆಯು ಹಣವನ್ನು ಗಳಿಕೆಯ ಮಾರ್ಗವಾಗಿಸಿಕೊಂಡು ಈ ವೃತ್ತಿಗೆ ಬರುವುದಿಲ್ಲ ಎಂದು ಹೇಳುತ್ತಾ, ತನ್ನ ಚಹರೆಯನ್ನು ತನಗೆ ತಾನೇ ಹೇಳಿಕೊಳ್ಳುತ್ತಿದ್ದಾಳೆ ಎಂಬ ಅಂಶಗಳನ್ನು ಆಶಾ ಅವರು ಚರ್ಚಿಸುತ್ತಾರೆ. ಈ ಮೂಲಕ ಮಹಿಳಾ ಕಾವ್ಯವನ್ನು ಓದಿನ ಗ್ರಹಿಕೆಯನ್ನು ನಿರ್ಮಿಸುತ್ತಾರೆ. ಮಹಿಳಾ ಕಾವ್ಯಕ್ಕೆ, ಅನನ್ಯತೆಯನ್ನು, ವಿಶಿಷ್ಟತೆಯನ್ನು, ಮಹತ್ವವನ್ನು ತಂದು ಕೊಡುವ ಸಲುವಾಗಿ ಕಾವ್ಯದ ಮರು ಓದಿಗೆ ಒತ್ತಾಯಿಸುತ್ತಾರೆ. ಹೀಗೆ ಮಹಿಳಾ ಕಾವ್ಯ ಮೀಮಾಂಸೆಯನ್ನು ಆಶಾ ಅವರು ಗುರುತಿಸುತ್ತಾರೆ. ಈ ಮಹಿಳಾ ಕಾವ್ಯ ಮೀಮಾಂಸೆಯನ್ನು ಕುರಿತಂತೆ "ಮಹಿಳಾ ಕಾವ್ಯ ಮಿಮಾಂಸೆ ಎಂದರೆ, ಹೆಣ್ಣು ತನ್ನನ್ನು ತಾನು ರಚಿಸಿಕೊಳ್ಳಲು ನಿರೂಪಿಸಿಕೊಳ್ಳಲು ನಡೆಸಿದ ಪ್ರಯತ್ನಗಳು ಎಂದೂ ಅರ್ಥ ಎಂದು ಹೇಳುತ್ತಾರೆ."[೭] ಅಂದರೆ ಇಲ್ಲಿ ಮಹಿಳೆಯು ಕಾವ್ಯವನ್ನು ಬರೆಯುವುದು ತನ್ನ ಹೊಸ ಚಹರೆಯನ್ನು ಹೇಳಲು ತಾನು ಏನು, ತನ್ನ ಸ್ವರೂಪ ಏನು ಎಂಬುದನ್ನು ಸಮಾಜಕ್ಕೆ ತಿಳಿಸಲು ಕಾವ್ಯದ ಮೂಲಕ ಸಂವಹನ ನಡೆಸಿದ್ದಾರೆ. ಈ ಮೂಲಕ ಮಹಿಳಾ ಕಾವ್ಯ ಮೀಮಾಂಸೆಯನ್ನು ಕಟ್ಟಿದ್ದಾರೆ ಎಂಬುದನ್ನು ಶೋಧಿಸುತ್ತಾರೆ. ಹೀಗೆ ಆಶಾ ಅವರು ಮಹಿಳೆಯು ಕಾವ್ಯ ರಚನೆಯ ಮೂಲಕ ಹೆಣ್ಣು ತನ್ನ ಅಸ್ಮಿತೆಯನ್ನು, ತನ್ನ ಹೋರಾಟ ಪ್ರತಿರೋಧಗಳ ಪರಂಪರೆಯನ್ನು, ಮಹಿಳಾ ಸಂಕಥನವನ್ನು ಕಟ್ಟುತ್ತಾಳೆ ಎಂದು ಹೇಳುತ್ತಾರೆ.

ಒಟ್ಟಾರೆ ಮಹಿಳಾ ಕಾವ್ಯದ ರಚನೆಯ ಹಿಂದೆ ಒಂದು ದೊಡ್ಡ ಪರಂಪರೆ, ಇತಿಹಾಸವನ್ನು ಗುರುತಿಸಬಹುದು. ಇಂದಿನ ವರ್ತಮಾನದ ಮಹಿಳಾ ಕವಯಿತ್ರಿಯರು ಮತ್ತು ಮೌಖಿಕ ಸಾಹಿತ್ಯದ ಕವಯಿತ್ರಿಯರು ಕಾವ್ಯ ರಚನೆ ಮಾಡಲು ಇದೇ ಸಾಮಾಜಿಕ ಒತ್ತಡವೇ ಕಾರಣ. ಇಂದಿನ ಲಿಂಗ ಅಸಮಾನತೆಯೇ ಕಾರಣ, ಪುರುಷ ದೌರ್ಜನ್ಯದ ನಿಯಂತ್ರಣವೇ ಇದಕ್ಕೆ ಮುಖ್ಯ ಕಾರಣವಾಗಿದೆ ಎಂಬುದನ್ನು ತಿಳಿಯಬಹುದಾಗಿದೆ.

## ೭.೫. ಕಲಾ ಮಾಧ್ಯಮ

ಕಲಾ ಮಾಧ್ಯಮವು ಅದು ರೂಪಿಸಿದ ಗುರುತುಗಳಲ್ಲಿ ಪುರುಷತನವನ್ನು ಢಾಳಾಗಿ ಬಿಂಬಿಸುತ್ತಾ ಬಂದಿದೆ. ಈ ಮಾಧ್ಯಮದಲ್ಲಿಯೂ ಕಾಲ ಕಾಲಕ್ಕೆ ಮಹಿಳೆ ತನ್ನದೇ ಆದ ಛಾಪನ್ನು ಮೂಡಿಸುತ್ತಾ ಬಂದಿದ್ದಾಳೆ. ಆದರೆ ಚರಿತ್ರೆಯಲ್ಲಿ ಮುಖ್ಯ ನೆಲೆಯ ಚರ್ಚೆಗೆ ಬರದೆ ಹಿಂದೆ ಸರಿದಿದೆ. ಹೀಗೆ ಹಿಂದೆ ಸರಿದ ಸಂಗತಿಗಳನ್ನು ಮುನ್ನಲೆಗೆ ತರುವ ಕಾರಣಕ್ಕೆ ಈ ಕಲಾ ಮಾಧ್ಯಮಗಳಲ್ಲಿ ಮಹಿಳಾ ಅಭಿವ್ಯಕ್ತಿಯ ನೆಲೆಗಳನ್ನು ಶೋಧಿಸಬೇಕಾಗಿದೆ. ಮುಖ್ಯವಾಗಿ ದೃಶ್ಯಕಲೆ ಮತ್ತು ಸಂಗೀತ ಮಾಧ್ಯಮಗಳ ಮೂಲಕ ಎಂ.ಎಸ್.ಆಶಾದೇವಿ ಅವರು ತಮ್ಮ ವಿಮರ್ಶೆಯಲ್ಲಿ ಮಹಿಳೆಯ ಅಭಿವ್ಯಕ್ತಿ ನೆಲೆಗಳನ್ನು ಶೋಧಿಸಲು ಪ್ರಯತ್ನಿಸಿದ್ದಾರೆ.

ಭಾರತೀಯ ಮಹಿಳೆಯರು ಎಲ್ಲಾ ಕ್ಷೇತ್ರದಲ್ಲಿಯೂ ತಮ್ಮ ಛಾಪನ್ನು ಮೂಡಿಸಿದ್ದಾರೆ. ಸಂಗೀತ, ಚಿತ್ರಕಲೆ, ಸಿನಿಮಾ, ಸಾಹಿತ್ಯ ಇನ್ನು ಮುಂತಾದ ಎಲ್ಲಾ ಕ್ಷೇತ್ರಗಳಲ್ಲಿಯೂ ಹೆಸರನ್ನು ಮಾಡಿದ್ದಾರೆ. ತಮ್ಮ ಕಲೆ ಹಾಗೂ ಸೃಜನಶೀಲತೆಯ ಮೂಲಕ ತಮ್ಮ ಅಸ್ತಿತ್ವವನ್ನು ಕಂಡುಕೊಂಡಿದ್ದಾರೆ. ನೇರವಾಗಿ ಹೋರಾಟ ಮಾಡಲು ಸಾಧ್ಯವಾಗದೇ ಇದ್ದಾಗ, ಜೀವನವನ್ನು ಸಾಗಿಸಲು ಕಷ್ಟವಾದಾಗ ಕಲೆಯ ಮೂಲಕವೇ ಪರಿಹಾರ ಕಂಡುಕೊಂಡಿದ್ದಾರೆ. ಇದೇ ಕಲೆಯ ಮೂಲಕವೇ ತಮ್ಮ ಜೀವನವನ್ನು ಕೂಡ ರೂಪಿಸಿಕೊಂಡಿದ್ದಾರೆ. ಕಲೆಯ ಮೂಲಕವೇ ಮಹಿಳೆಯರು ಸ್ತ್ರೀವಾದವನ್ನು ಹುಟ್ಟಿಹಾಕಿದ್ದಾರೆ. ಹೀಗಾಗಿ ಆಶಾ ಅವರು ಮಹಿಳೆಯರು ಹುಟ್ಟುಹಾಕಿದ ಈ ಸ್ತ್ರೀವಾದವನ್ನು ಕಟ್ಟಿ ಬೆಳೆಸುವ ಉದ್ದೇಶ ಹೊಂದಿದ್ದಾರೆ. ಇದರಿಂದ ಕಲೆಯಲ್ಲಿ ಸಾಧನೆ ಮಾಡಿದ ಮಹಾನ್ ಮಹಿಳಾ ಕಲಾವಿದೆಯರನ್ನು ಕುರಿತು ಶೋಧಿಸುತ್ತಾರೆ, ಚರ್ಚೆಗೆ ಒಳಪಡಿಸುತ್ತಾರೆ. ಅವರಲ್ಲಿ ಮುಖ್ಯವಾಗಿ 'ಮುಕ್ತ ಛಂದದ ಮುಕ್ತಲಯದ ಅಮೃತ ಪತಾಕೆಗಳು' ಎಂಬ ಲೇಖನದಲ್ಲಿ ಚಿತ್ರಕಲೆಯಲ್ಲಿ ಪ್ರಸಿದ್ಧ ಹೆಸರು ಪಡೆದ 'ಅಮೃತಾ ಷೇರ್‌ಗಿಲ್' ಅವರು ರಚಿಸಿದ ಮಹಿಳಾ ಪಾತ್ರಗಳನ್ನು ಕುರಿತು ಚರ್ಚಿಸುತ್ತಾರೆ. ಅಮೃತಾ ಚಿತ್ರಕಲೆಯಲ್ಲಿ ರಚಿಸಿದ 'ಯಂಗ್‌ಗರ್ಲ್ಸ್' ಕೃತಿಯಲ್ಲಿನ ಮಹಿಳಾ ಪಾತ್ರಗಳ ಮೂಲಕ ಆಶಾ ಅವರು ಮಹಿಳೆ ಕಾಲಕಾಲಕ್ಕೆ ಬದಲಾಗುತ್ತಾ ಹೋದ ಮಹಿಳೆಯ ಚಹರೆಯನ್ನು ಗುರುತಿಸುತ್ತಾರೆ. ಈ ಮೂಲಕ ಮಹಿಳೆ ಚಹರೆಯನ್ನು ಶೋಧಿಸುವ ಭಾಗವಾಗಿ ಸ್ತ್ರೀವಾದಿ ಎಳೆಗಳನ್ನು ಗುರುತಿಸುತ್ತಾರೆ. ಈ ರೀತಿ ಸ್ತ್ರೀವಾದವನ್ನು ಕಟ್ಟುತ್ತಾರೆ. ಅಮೃತಾ ಚಿತ್ರಕಲೆಯನ್ನು ಕುರಿತಂತೆ ಆಶಾ ಅವರು ಪ್ರತಿಕ್ರಿಯಿಸುತ್ತಾ "ಅಮೃತಾರ ಚಿತ್ರಗಳನ್ನು ಕಾಲಾನುಕ್ರಮದಲ್ಲಿ ನೋಡುತ್ತಾ ಹೋದರೆ ಇವರ ಬದಲಾಗುತ್ತಾ ಹೋದ ಅಥವಾ ಬೆಳೆಯುತ್ತಾ ಹೋದ ಹೆಣ್ಣಿನ ಚಹರೆಯ ಚಿತ್ರ ನಮಗೆ ಕಾಣಿಸುತ್ತದೆ. ಎಂದು ಹೇಳುತ್ತಾರೆ."[೮] ಅಂದರೆ ಅಮೃತಾ ತನ್ನ ಕಲೆಯ ಮೂಲಕ ಕಟ್ಟಿಕೊಟ್ಟ ಮಹಿಳೆಯ ಚಹರೆಯನ್ನು ಆಶಾ ಗುರುತಿಸುತ್ತಾರೆ.

ಮಹಿಳಾ ಚಹರೆಯ ವ್ಯಕ್ತಿತ್ವವು ಕಾಲದಿಂದ ಕಾಲಕ್ಕೆ ನಿರಂತರ ಬದಲಾಗುತ್ತಾ ಬಂದಿದೆ. ಈ ಒಂದು ಬದಲಾದ ಮಹಿಳಾ ಚಹರೆಗಳನ್ನು, ಮಹಿಳಾ ಪಾತ್ರಗಳ ವೈಶಿಷ್ಟತೆಯ ಮೂಲಕ ಮಹಿಳೆಯ ಸಾರ್ವಕಾಲಿಕ ವ್ಯಕ್ತಿತ್ವದ ಸ್ವರೂಪವನ್ನು ತಿಳಿಸುತ್ತಾರೆ. ಅಮೃತಾ ಕಲೆಯ ಮೂಲಕ ಮಹಿಳೆಯ ಮುಕ್ಕಾಗದ ಆತ್ಮವಿಶ್ವಾಸ, ಆತ್ಮ ಸ್ಥೈರ್ಯವನ್ನು, ಆತ್ಮ ಘನತೆಯನ್ನು ತಿಳಿಸುತ್ತಾ ಮಹಿಳೆಯನ್ನು ಸೀಮಿತವಾಗಿ ಗ್ರಹಿಸದೆ ಆಕೆಯ ವ್ಯಕ್ತಿತ್ವವನ್ನು ನಿಜ ಸ್ವರೂಪದಲ್ಲಿ ಕಟ್ಟಿಕೊಟ್ಟಿರುವುದನ್ನು ಶೋಧಿಸುವುದು

ಆಶಾ ಅವರ ಸ್ತ್ರೀವಾದಿ ಚಿಂತನೆಯ ಮುಖ್ಯ ಉದ್ದೇಶವಾಗಿದೆ. ಅಮೃತಾ ಅವರು ರಚಿಸಿದ ಮಹಿಳಾ ಪಾತ್ರಗಳನ್ನು ಕುರಿತಂತೆ ಚಿಂತಕಿ ಅವರು ಹೀಗೆ ಹೇಳುತ್ತಾರೆ. "ಇವರ ಕಲಾಕೃತಿಗಳು ಹೆಣ್ಣಿನ ಸ್ವಂತಿಕೆಯ ಪತಾಕೆಗಳ ಹಾಗೆ ಕಾಣಿಸುತ್ತವೆ. ಕುಂದದ ಆತ್ಮಸ್ಥೈರ್ಯ ಮತ್ತು ಅಂತರಂಗದ ಚೆಲುವಿನ ಪ್ರತಿಮೆಗಳ ಹಾಗೆ ಇವರ ಹೆಣ್ಣುಗಳಿದ್ದಾರೆ"[೯] ಎಂಬ ಇವರ ಈ ಹೇಳಿಕೆಯ ಪ್ರಕಾರ ಆತ್ಮಸ್ಥೈರ್ಯ, ಮಾನಸಿಕವಾಗಿ ಗಟ್ಟಿತನ, ಕುಂದದೆ ಇರುವ ಮಾನಸಿಕ ಧೃಡತೆ, ಮಾನಸಿಕ ಬದ್ಧತೆ ಇವೆಲ್ಲವು ಮಹಿಳೆಗೆ ಹುಟ್ಟಿನಿಂದಲೂ ಬಂದಿದೆ ಎಂಬುದನ್ನು ಅಮೃತಾ ಕಲೆಯ ಮೂಲಕ ಗುರುತಿಸುತ್ತಾರೆ. ಈ ಮೂಲಕ ಮಹಿಳೆಗಿರುವ ಎಲ್ಲಾ ವ್ಯಕ್ತಿತ್ವದ ಸ್ವರೂಪವನ್ನು ಪುರುಷ ಸಮಾಜಕ್ಕೆ ತೋರಿಸುವುದು, ಮಹಿಳೆಯ ನಿಜ ಗುಣವನ್ನು ಗುರುತಿಸುವುದು ಆಶಾ ಅವರ ಧ್ಯೇಯವಾಗಿದೆ. ಹೀಗೆ ಮಹಿಳಾ ಕಲಾ ಪಾತ್ರಗಳ ಮೂಲಕ ಸ್ತ್ರೀವಾದಿ ಎಳೆಗಳನ್ನು ಕಲೆಗಿರುವ ನೈಜ ಶಕ್ತಿಯನ್ನು ಶೋಧಿಸುತ್ತಾ ಕಲೆಯ ಮೂಲಕ ಮಹಿಳೆ ಸಾಧಿಸಿದ ಮಹಾನ್ ಸಾಧನೆಯನ್ನು ಲೇಖಕಿ ಚರ್ಚಿಸುತ್ತಾರೆ.

ಲೇಖಕಿಯು 'ರಾಗ ಆತ್ಮಶ್ರೀ' ಎಂಬ ಇನ್ನೊಂದು ಅಂಕಣದಲ್ಲಿ ಎಂ.ಎಸ್.ಸುಬ್ಬಲಕ್ಷ್ಮೀ ಅವರ ವ್ಯಕ್ತಿತ್ವವನ್ನು ಕುರಿತು ಚರ್ಚಿಸಿದ್ದಾರೆ. ಸಂಗೀತದ ಮೂಲಕ ಹೆಸರು ಪಡೆದ ಸುಬ್ಬಲಕ್ಷ್ಮೀ ಅವರು ಕಲೆಯ ಮೂಲಕ ಎಲ್ಲ ಸಾಮಾಜಿಕ ನಿರ್ಬಂಧಗಳನ್ನು ಮೀರಿ ಬೆಳೆಯುತ್ತಾರೆ. ತನ್ನ ಕಲೆಯ ಮೂಲಕವೇ ಹೋರಾಟವನ್ನು ಮಾಡುತ್ತಾರೆ. ಸುಬ್ಬಲಕ್ಷ್ಮೀ ಅವರು ಮೂಲತಃ ದೇವದಾಸಿ ಕುಟುಂಬದಿಂದ ಬಂದವರು. ಇದರಿಂದ ಇವರ ವ್ಯಕ್ತಿತ್ವವನ್ನು ಹಾಗೂ ಇವರ ಬದುಕನ್ನು ಹಾಳು ಮಾಡಬೇಕೆಂಬ ಉದ್ದೇಶ ಹಲವರಿಗೆ ಇತ್ತು. ಆದರೂ ಈ ಎಲ್ಲಾ ಕಷ್ಟಗಳನ್ನು ಎದುರಿಸಿ ಎಲ್ಲದರ ನಡುವೆಯೇ ಸುಬ್ಬಲಕ್ಷ್ಮೀ ಕಲೆಯ ಮೂಲಕ ಆತ್ಯಂತಿಕ ಸ್ಥಾನಕ್ಕೆ ಹೇರುತ್ತಾರೆ. ಹೀಗೆ ಕಲೆಯ ಮೂಲಕ ಸಾಧನೆ ಮಾಡಿದ ಸುಬ್ಬಲಕ್ಷ್ಮೀಯ ವ್ಯಕ್ತಿತ್ವವನ್ನು ಕುರಿತು ಆಶಾದೇವಿಯವರು ಹೀಗೆ ಹೇಳುತ್ತಾರೆ. "ಹೆಣ್ಣಿಗೆ ನಿರ್ಧಿಷ್ಟವಾದ ಎಲ್ಲಾ ಬಗೆಯ ಬಂಧನಗಳನ್ನು ನಿರ್ಬಂಧಗಳನ್ನು ಕಲೆಯ ಪರಿವೇಷದಲ್ಲೂ ಆತ್ಮದ ಪರಿಪೇಕ್ಷ್ಯದಲ್ಲೂ ನೀಗಿಕೊಳ್ಳುತ್ತಲೇ ಹೋದವರು ಎಂ.ಎಸ್.ಸುಬ್ಬಲಕ್ಷ್ಮೀ ಅದೆಷ್ಟೋ ಅಪಮಾನಗಳನ್ನು ನೋವುಗಳನ್ನು ಸಖನ ಮತ್ತು ಸಂಗೀತದ ಸಖ್ಯದಲ್ಲಿ ಮೀರಿಕೊಳ್ಳುತ್ತಲೇ ಅನಿಕೇತನವಾದವರು"[೧೦] ಎಂಬುದಾಗಿ ಆಶಾ ಅವರು ಕಲೆಗಿರುವ ಅಸಾಧಾರಣ ಶಕ್ತಿಯನ್ನು ಕುರಿತು ಹೇಳುತ್ತಾರೆ. ಸಾಮಾನ್ಯ ಮಹಿಳೆಗೆ ಇಂದು ಪುರುಷ ಸಮಾಜವು ಹಲವಾರು ನಿರ್ಬಂಧಗಳನ್ನು ಹೇರಿದೆ. ಆದರೆ ಇನ್ನು ದೇವದಾಸಿ ಕುಟುಂಬದ ಹಿನ್ನೆಲೆಯಿಂದ ಬಂದ ಮಹಿಳೆಗೆ ಸಾರ್ವಜನಿಕವಾಗಿ ನೋಡುವ ದೃಷ್ಟಿಕೋನವೇ ಬೇರೆ ಆಗಿರುತ್ತದೆ. ಈ ಎಲ್ಲಾ ಕಷ್ಟಗಳನ್ನು ಸುಬ್ಬಲಕ್ಷ್ಮೀ ಕಲೆಯ ಮೂಲಕ ಎದುರಿಸುತ್ತಾರೆ. ಮಹಿಳೆಗೆ ಎಲ್ಲಾ ಪುರುಷ ಪ್ರಧಾನ ಸಮಾಜದಲ್ಲಿ ಒಂದಲ್ಲ ಒಂದು ರೀತಿ ಬಂಧನ ನಿರ್ಬಂಧಗಳು ಇರುತ್ತವೆ. ಆದರೆ ಈ ಎಲ್ಲಾ ನಿರ್ಬಂಧನಗಳನ್ನು ಮೀರುವುದು ಸುಲಭ ಸಾಧ್ಯವಲ್ಲ. ಆದರೆ ಎಂ.ಎಸ್.ಸುಬ್ಬಲಕ್ಷ್ಮೀ ಅವರು ಕಲೆಯ ಮೂಲಕ ಸಾಧಿಸಿತೋರಿಸುತ್ತಾರೆ. ಕಲೆಯ ಮೂಲಕವೇ ಹೋರಾಟ ಮಾಡುತ್ತಾರೆ. ಈ ಕಲೆಯೇ ಇವರಿಗೆ ಆತ್ಮಸ್ಥೈರ್ಯವನ್ನು, ಆತ್ಮವಿಶ್ವಾಸವನ್ನು ತಂದುಕೊಟ್ಟಿತು ಎಂದು ಆಶಾ ಅವರ ಈ ಹಿಂದಿನ ಅಭಿಪ್ರಾಯವಾಗಿದೆ.

ಆಶಾದೇವಿಯವರು ಎಂ.ಎಸ್.ಎಸ್ ಅವರ ಸಂಗೀತವನ್ನು ಕುರಿತು "ಹೆಣ್ಣು ಪಡೆಯಲು ಸಾಧ್ಯವಾಗುವ ಒಳ ಮತ್ತು ಹೊರ ಬಿಡುಗಡೆಗಳೆರಡನ್ನು ಈಕೆ ಸಂಗೀತದ ಆತ್ಮ ಸಖ್ಯದಲ್ಲಿ

ಪಡೆದುಕೊಂಡವರು ಎಂದು ಹೇಳುತ್ತಾರೆ."[೧೧] ಅಂದರೆ ಸಂಗೀತಕ್ಕಿರುವ ಆತ್ಯಂತಿಕ ಶಕ್ತಿಯನ್ನು ಅವರು ಗುರುತಿಸುತ್ತಾರೆ. ಮಹಿಳೆ ಪುರುಷ ಸಮಾಜದಿಂದ ಬಿಡುಗಡೆ ಪಡೆಯಲು ಕಲೆಯೇ ಮುಖ್ಯ ಸಾಧನ ಎಂದು ಈ ಮೂಲಕ ತಿಳಿಸುತ್ತಾರೆ. ಎಲ್ಲಾ ರೀತಿಯ ಬಂಧನಗಳಿಂದ ಹೊರಬರಲು ಕಲೆಯೇ ದಾರಿಯಾಗುತ್ತದೆ. ಮಹಿಳೆಗೆ ಆತ್ಮಸ್ಥೈರ್ಯ, ಮಾನಸಿಕ ಗಟ್ಟಿತನವನ್ನು ಕಲೆ ದೊರಕಿಸಿಕೊಡುತ್ತದೆ ಎಂದು ಹೇಳುತ್ತಾರೆ. ಇದರಂತಯೇ ಎಂ.ಎಸ್.ಎಸ್. ಕೂಡ ಸಂಗೀತದ ಮೂಲಕ ಎಲ್ಲಾ ದುಃಖಗಳನ್ನು ಮೀರಿ ಬೆಳೆದರು ಎಂಬುದನ್ನು ತಿಳಿಸುತ್ತಾರೆ. ಹೀಗಾಗಿ ಕಲೆಯೇ ಮಹಿಳೆಗೆ ಬಿಡುಗಡೆಯ ಮುಕ್ತ ಹಾದಿಯಾಗಿದೆ ಎಂಬುದನ್ನು ತಿಳಿಸುತ್ತಾ, ಹೀಗೆ ಕಲೆಯನ್ನು ಸಾಧನವಾಗಿಸಿಕೊಂಡ ಜೀವನದಲ್ಲಿ ಯಶಸ್ಸನ್ನು ಗಳಿಸಿದ ಮಹಿಳಾ ಮಣಿಗಳ ಶೋಧವನ್ನು ಮಾಡುತ್ತಾ ಮಹಿಳಾ ಕಲೆಗಿರುವ ನೆಲೆ ಬೆಲೆಯನ್ನು ಗುರುತಿಸುತ್ತಾರೆ.

ಹೀಗೆ ಮಹಿಳೆಗಿರುವ ಶಕ್ತಿಯನ್ನು, ವಿಶಿಷ್ಟವಾದ ವ್ಯಕ್ತಿತ್ವವನ್ನು, ಚೈತನ್ಯವನ್ನು, ನೈಪುಣ್ಯತೆಯನ್ನು, ಬುದ್ಧಿವಂತಿಕೆಯನ್ನು, ಸೃಜನಶೀಲತೆಯ ಮೂಲಕ ಗುರುತಿಸುತ್ತಾರೆ. ಆದರೂ ಪುರುಷ ಸಮಾಜ ಮಹಿಳೆಯ ಸೃಜನಶೀಲತೆಯನ್ನು ಕಾಲಕಾಲಕ್ಕೆ ಹಲವಾರು ತಂತ್ರಗಳಿಂದ ಹತ್ತಿಕ್ಕುತ್ತಾ ಬಂದಿದೆ. ಆದರೂ ಮಹಿಳೆ ಈ ಎಲ್ಲವುಗಳ ಮಧ್ಯೆ ತನ್ನ ನೆಲೆಯನ್ನು ಸಾಮಾಜಿಕವಾಗಿ ರಾಜಕೀಯವಾಗಿ ಭದ್ರಪಡಿಸಿಕೊಳ್ಳುತ್ತಲೇ ಬಂದಿದ್ದಾರೆ. ಇದಕ್ಕೆ ಅವಳಿಗಿರುವ ಸೃಜನಶೀಲ ಶಕ್ತಿಯೇ ಕಾರಣ ಎಂದು ಹೇಳಬಹುದು.

ಒಟ್ಟಾರೆ ಮಹಿಳೆಗಿರುವ ಸೃಜನಶೀಲ ಶಕ್ತಿಯನ್ನು ಆ ಮೂಲಕ ಅವಳ ಸಾಧಿಸಿದ ಎಲ್ಲಾ ಸಾಧನೆಗಳನ್ನು ಹಾಗೂ ಮಹಿಳೆಯ ಕಲಾ ನಿಪುಣತೆಯನ್ನು ಶೋಧಿಸುತ್ತಾರೆ. ಮಹಿಳೆಯ ಸೃಜನಶೀಲತೆಯು ಎಲ್ಲಾ ಕಾಲದಲ್ಲಿ ಜಾಗೃತ ಸ್ಥಿತಿಯಲ್ಲಿರುವುದನ್ನು ಮಹಿಳಾ ಕಾವ್ಯವನ್ನು ಮರು ಓದಿಗೆ ಒಳಪಡಿಸುವ ಮೂಲಕ ಆಳವಾದ ಚರ್ಚೆಗೆ ಒಯ್ಯುತ್ತಾರೆ. ಪುರುಷ ಸಮಾಜವು ಮಹಿಳಾ ಸೃಜನಶೀಲತೆಯು ಇಲ್ಲವೆನ್ನುವಷ್ಟು ಮಹಿಳಾ ಸಾಹಿತ್ಯವನ್ನು ಅಂಚಿಗೆ ತಳ್ಳಿತ್ತು, ಆದ್ದರಿಂದ ಮಹಿಳಾ ಸಾಹಿತ್ಯ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತ್ತು. ಹೀಗಾಗಿ ಆಶಾ ಅವರು ಸೇರಿದಂತೆ ಇಂದಿನ ಬಹುತೇಕ ಸ್ತ್ರೀವಾದಿಗಳು ಮಹಿಳಾ ಕಾವ್ಯದ ಸಾಹಿತ್ಯದ ಮರು ಸೃಷ್ಟಿಯಲ್ಲಿ ತೊಡಗಿದ್ದಾರೆ. ಇದರ ಭಾಗವಾಗಿಯೇ ಆಶಾ ಅವರು ಮಹಿಳಾ ಸೃಜನಶೀಲತೆಯನ್ನು ತಮ್ಮ ಚಿಂತನೆಯ ಮೂಲಕ ಚರ್ಚೆಗೆ ಒಳಪಡಿಸುತ್ತಾರೆ. ಈ ಮೂಲಕ ಮಹಿಳಾ ಸಾಹಿತ್ಯದ ವಿಶಿಷ್ಟತೆಯನ್ನು ಮುನ್ನೆಲೆಗೆ ತಂದಿದ್ದಾರೆ. ಹೀಗೆ ಸಮಕಾಲೀನ ಸ್ತ್ರೀವಾದವನ್ನು ಬೆಳೆಸುವ ಮೂಲಕ ಮಹಿಳಾ ಸಾಹಿತ್ಯಕ್ಕೆ ಹೆಚ್ಚಿನ ಓದುಗ ಬಳಗವನ್ನು ಸೃಷ್ಟಿಸಬೇಕೆಂಬುದು ಆಶಾ ಅವರ ಸ್ತ್ರೀವಾದಿ ಚಿಂತನೆಯ ಮುಖ್ಯ ಉದ್ದೇಶವಾಗಿದೆ.

**ಕೊನೆ ಟಿಪ್ಪಣಿಗಳು**

೧. ಆಶಾದೇವಿ ಎಂ.ಎಸ್., ಅವಳ ಕಾವ್ಯ ಅವಳ ಭಾಷೆ, ಪು. ೨

೨. ಅದೇ, ಪು. ೨

೩. ಅದೇ, ಪು. ೨

೪. ಅದೇ, ಪು. ೨

೫. ಅದೇ, ಪು. ೨

೬. ಆಶಾದೇವಿ ಎಂ.ಎಸ್., ಕಾವ್ಯ ಬಿಡುಗಡೆಯ ಬಾಗಿಲು, ಪು. ೨

೭. ಅದೇ, ಪು. ೨

೮. ಆಶಾದೇವಿ ಎಂ.ಎಸ್., ಮುಕ್ತ ಛಂದದ ಮುಕ್ತ ಲಯದ ಅಮೃತ ಪತಾಕೆಗಳು, ಪು. ೨

೯. ಅದೇ, ಪು. ೨

೧೦. ಆಶಾದೇವಿ ಎಂ.ಎಸ್., ರಾಗ–ಆತ್ಮಶ್ರೀ, ಪು. ೨

೧೧. ಅದೇ, ಪು. ೨

*****

# ಅಧ್ಯಾಯ–ಎಂಟು

# ಆಶಾದೇವಿಯವರ ಚಿಂತನೆ: ಅಭಿವ್ಯಕ್ತಿ ವಿಧಾನ

## ೮.೧.ಪ್ರವೇಶ

ಆಶಾದೇವಿಯವರ ಸ್ತ್ರೀವಾದಿ ವಿಶ್ಲೇಷಣೆಯ ವಿಧಾನವನ್ನು ಗಮನಿಸಿದರೆ, ಅಧ್ಯಯನದ ವಿಸ್ತಾರ ಮತ್ತು ಆಳವಾದ ವಿಷಯಸಾಮರ್ಥ್ಯ ಪ್ರವೇಶವೇ, ಅವರ ಅಭಿವ್ಯಕ್ತಿ ವಿಧಾನದ ವಿಶಿಷ್ಟತೆಯನ್ನು ರೂಪಿಸಿರುವುದು ತಿಳಿಯುತ್ತದೆ. ಅವರು ಪುರಾಣ, ಚರಿತ್ರೆ, ಸಾಹಿತ್ಯ, ಸಂಗೀತ, ಸಿನಿಮಾ, ಚಿತ್ರಕಲೆ ಮುಂತಾದ ಕಡೆಗಳಿಂದ ವಿಷಯಗಳನ್ನು ಹೆಕ್ಕಿ ತಾನು ಹೇಳಬೇಕೆಂದಿರುವ ವಿಷಯಕ್ಕೆ ಪೂರಕವಾದ ಅಂಶಗಳನ್ನು ತೆಗೆದುಕೊಳ್ಳುತ್ತಾರೆ. ಈ ಮೂಲಕ ಆಳವಾದ ಚರ್ಚೆಗೆ ವಿಷಯವನ್ನು ವಿಸ್ತರಿಸುತ್ತಾರೆ. ಇದರಿಂದ ಆಶಾ ಅವರ ವಿಷಯ ಮಂಡನೆಯು ಅಥವಾ ಅಭಿವ್ಯಕ್ತಿ ವಿಧಾನವು ಸಂಕೀರ್ಣ ಚಿಂತನೆಗೆ ಅವಕಾಶವನ್ನು ಕಲ್ಪಿಸಿಕೊಳ್ಳುತ್ತದೆ. ಯಾವುದೇ ವಿಷಯವನ್ನಾಗಲಿ ಬಿಡಿ–ಬಿಡಿಯಾಗಿ ಹೇಳುತ್ತಾ ಕೊನೆಯಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ಇಡಿಯಾದ ಭಿತ್ತಿಗೆ ಹೋಗಿ ಅವರ ಚಿಂತನೆ ಮುಗಿಯುತ್ತದೆ. ಈ ಇಡಿ ಮತ್ತು ಬಿಡಿವಿಧಾನವು ಬಿಡಿಯಾದ ಮಹಿಳೆ, ಇಡಿಯಾದ ಚಳುವಳಿಯ ಭಾಗವಾಗಬೇಕೆಂಬ ಅವರ ಆಲೋಚನೆಗೆ ಪೂರಕವಾಗಿದೆ.

## ೮.೨. ಅಭಿವ್ಯಕ್ತಿ ವಿಧಾನ

ಅಭಿವ್ಯಕ್ತಿ ವಿಧಾನವನ್ನು ಕುರಿತಂತೆ "ತನ್ನ ಅನುಭವ ಇತ್ಯಾದಿಗಳನ್ನು ಸಮಾಜದ ಇತರರೊಂದಿಗೆ ಹಂಚಿಕೊಳ್ಳುವುದು ಮತ್ತು ಆಲೋಚನೆ, ಚಿಂತನೆಗಳತ್ತ ಅವರನ್ನು ಒಲಿಸಿಕೊಳ್ಳುವುದು ಅಭಿವ್ಯಕ್ತಿಯ ಹಿಂದಿರುವ ಉದ್ದೇಶಗಳು ಎಂದು ಓ.ಎಲ್.ನಾಗಭೂಷಣ್ ಹೇಳುತ್ತಾರೆ."[೧] ಇದೇ ಉದ್ದೇಶದಿಂದ ಆಶಾದೇವಿಯವರು ಸ್ತ್ರೀವಾದವನ್ನು ಕುರಿತ ತಮ್ಮ ಗ್ರಹಿಕೆಗಳನ್ನು ನೇರವಾಗಿ ಹೇಳಲು, ಸ್ತ್ರೀವಾದವನ್ನು ವಿಸ್ತರಿಸಲು, ಅರ್ಥವ್ಯಾಪ್ತಿ ಮತ್ತು ತಾತ್ವಿಕತೆಯನ್ನು ತಂದುಕೊಡಲು, ಸಮಕಾಲೀನ ಸ್ತ್ರೀವಾದವನ್ನು ಬೆಳೆಸಲು ಹಲವಾರು ತಂತ್ರಗಳನ್ನು ಅಭಿವ್ಯಕ್ತಿ ಮಾಧ್ಯಮವಾಗಿ ಬಳಸುತ್ತಾರೆ. ಇದೇ ಉದ್ದೇಶದಿಂದ ಹಲವಾರು ರೂಪಕ, ಪರಿಭಾಷೆ ಹಾಗೂ ಪರಿಕಲ್ಪನೆಗಳನ್ನು ಬಳಸುತ್ತಾರೆ. ತಮ್ಮ ಚರ್ಚೆಯನ್ನು ವಿಸ್ತರಿಸಲು ಕಲೆ, ಪುರಾಣ, ಆಧುನಿಕ ಚಿಂತಕರ ಹೇಳಿಕೆಗಳನ್ನು ಹಾಗೂ ಘಟನೆಗಳನ್ನು ಸಮಕಾಲೀನ ನೆಲೆಯಲ್ಲಿ ಮುಖಾಮುಖಿಯಾಗಿಸುತ್ತಾರೆ. ಈ ಮೂಲಕ ಓದುಗರನ್ನು ಬಹುಮುಖಿ ಆಯಾಮದ ಚಿಂತನೆಗಳಿಗೆ ಒಡ್ಡುತ್ತಾರೆ. ಆಶಾದೇವಿಯವರ ಸ್ತ್ರೀವಾದಿ ಚಿಂತನಾ ಅಭಿವ್ಯಕ್ತಿಯ ಪ್ರಮುಖ ವಿನ್ಯಾಸಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

ಆಶಾ ಅವರ ಅಭಿವ್ಯಕ್ತಿ ವಿಧಾನದ ಮುಖ್ಯವಾದ ಗುಣ ಎಂದರೆ ತೌಲನಿಕತೆ. ಪುರಾಣ ಪಾತ್ರಗಳನ್ನು, ಅದರಲ್ಲೂ ಸ್ತ್ರೀ ಪಾತ್ರಗಳನ್ನು ವರ್ತಮಾನದ ಕಲಾ ಪಠ್ಯಗಳ ಪಾತ್ರಗಳಿಗೆ, ವರ್ತಮಾನದ ಘಟನೆಗಳಿಗೆ ಹೋಲಿಕೆ ಮಾಡಿ, ಅವುಗಳ ನಡುವಿನ ಸಾಮ್ಯತೆ ಮತ್ತು ವೈರುಧ್ಯವನ್ನು ಅವರು ಗುರುತಿಸುತ್ತಾರೆ. ಅಂದರೆ ಮಹಿಳೆಯ ಹೋರಾಟವು ಯಾವ ಕಾಲಕ್ಕೂ ಇದೆ. ಆಕೆ ತನ್ನ ಅಸ್ತಿತ್ವಕ್ಕಾಗಿ

ಮೊದಲಿನಿಂದಲೂ ಹೋರಾಡುತ್ತಲೇ ಇದ್ದಾಳೆ. ಈ ಹೋರಾಟದ ಭಿನ್ನ ಆಯಾಮಗಳನ್ನು ಅವರು ಪ್ರತಿಯೊಂದು ಪಾತ್ರದ ಮೂಲಕ ಗುರುತಿಸುತ್ತಾರೆ. ಈ ಮೂಲಕ ಮಹಿಳೆಯು ಪ್ರತಿ ಕಾಲದಲ್ಲಿ ಮಾಡಿದ, ಅವಳು ಒಡ್ಡಿದ ಪ್ರತಿರೋಧವು ಸಾಮ್ಯತೆಯಿಂದ ಕೂಡಿದೆ ಎಂದು ಹೇಳಬಹುದು. ಇದರ ಭಾಗವಾಗಿಯೇ ಸೀತೆ, ದ್ರೌಪದಿ, ಅಹಲ್ಯೆ, ಅಕ್ಕ ಇನ್ನು ಮುಂತಾದ ಪಾತ್ರಗಳು ಪ್ರಾಚೀನ ಕಾಲದಿಂದಲೂ ತಮ್ಮ ಸ್ವಂತಿಕೆಯ ಹುಡುಕಾಟದ ಭಾಗವಾಗಿ ಹೋರಾಟ ಮಾಡಿರುವುದನ್ನು ತೌಲನಿಕತೆಗೆ ಒಳಪಡಿಸುತ್ತಾರೆ. ಆ ಹೋರಾಟಗಳ ಪ್ರತಿರೋಧದಲ್ಲಿನ ಆಯಾಮಗಳ ಸಾಮ್ಯತೆಯನ್ನು, ವಿಶಿಷ್ಟತೆಗಳನ್ನು, ಸ್ತ್ರೀವಾದಿ ಚಿಂತನೆಗಳನ್ನು ಶೋಧಿಸುತ್ತಾರೆ. ಆ ಹೋರಾಟವು ಯಾವ ಯಾವ ಮಾದರಿಗಳಲ್ಲಿ ಇದೆ ಎಂಬುದನ್ನು ತಿಳಿಯಲು ತೌಲನಿಕತೆಗೆ ಒಳಪಡಿಸುತ್ತಾರೆ. ಈ ಮೂಲಕ ಭಾರತೀಯ ಮಹಿಳೆಯ ಹೋರಾಟದ ಹಾದಿಯಲ್ಲಿ ಏಕರೂಪತೆಯನ್ನು ಗುರುತಿಸುತ್ತಾರೆ. ಮಹಿಳೆಯು ತನ್ನ ಹೋರಾಟಕ್ಕೆ ವಿಭಿನ್ನ ಆಯಾಮಗಳನ್ನು ಹುಟ್ಟಿಹಾಕಿಕೊಂಡಿದ್ದಾಳೆ; ಆ ಹೋರಾಟದ ಉದ್ದೇಶ ಒಂದೇ ಆಗಿದೆ ಎಂಬುದನ್ನು ತೌಲನಿಕತೆಯಿಂದ ಶೋಧಿಸುತ್ತಾರೆ.

ಸೃಜನಶೀಲ ಸಾಹಿತ್ಯದಲ್ಲಿ ಮಹಿಳೆಯರಿಂದ ರಚಿತವಾದ ಸಾಹಿತ್ಯ, ಮಹಿಳಾವಾದಿಯಾದ ಸಾಹಿತ್ಯ, ಮಹಿಳೆಯನ್ನು ಕೇಂದ್ರವಾಗುಳ್ಳ ಸಾಹಿತ್ಯ ಹೀಗೆ ವಿಭಿನ್ನ ಮಾದರಿಗಳನ್ನು ಗುರುತಿಸಬಹುದು. ಆಶಾ ಅವರು ತಮ್ಮ ಮಹಿಳಾ ವಾದವನ್ನು ಮಂಡಿಸಲು ಸಾಹಿತ್ಯವನ್ನು ಒಂದು ಸಮರ್ಥ ಸಾಧನವನ್ನಾಗಿ, ವಸ್ತುವನ್ನಾಗಿ ಬಳಸುತ್ತಾರಷ್ಟೆ. ಸಾಹಿತ್ಯದಲ್ಲಿ ಸ್ತ್ರೀವಾದವನ್ನು ಹುಡುಕುವುದು ಅವರ ಆಸಕ್ತಿ ಅಲ್ಲ. ಏಕೆಂದರೆ ಸಾಹಿತ್ಯದಲ್ಲಿ ಮಹಿಳಾ ವಾದವನ್ನು ಮಂಡಿಸಿದಾಕ್ಷಣ, ಮಹಿಳಾ ಚಹರೆಯನ್ನು ಗುರುತಿಸಿದಾಕ್ಷಣ, ಮಹಿಳಾ ಸಮಾನತೆಗೆ ಬೇಕಾದ ಅವಕಾಶಸೃಷ್ಟಿ ಮಾಡಿಕೊಂಡಾಕ್ಷಣ ಸಾಮಾಜಿಕವಾಗಿ ಮಹಿಳೆಗೆ ಸಮಾನತೆ ದೊರೆಯುತ್ತದೆ ಎಂದು ನಿರ್ಧರಿಸಲು ಸಾಧ್ಯವಿಲ್ಲ. ಆದ್ದರಿಂದ ಸಾಹಿತ್ಯ ಚಿಂತನೆಯ ಮೂಲಕ ಸಾಮಾಜಿಕ ಸಮಾನತೆಗೆ ಬೇಕಾದ ಮನೋಭಾವ ರೂಪಿಸುವುದು, ಸಾಮಾಜಿಕವಾಗಿ ಸ್ಥಾನವನ್ನು ಪಡೆಯುವ ಮೂಲಕ ಸಾಹಿತ್ಯದಲ್ಲಿ ಸಮಾನತೆ ಪಡೆಯುವುದು ಆಶಾ ಅವರ ಪ್ರಧಾನ ಧ್ಯೇಯವಾಗಿದೆ.

ಆಶಾದೇವಿ ಅವರು ಗಾಂಧೀ, ಅಂಬೇಡ್ಕರ್, ಲೋಹಿಯಾ, ಪೆರಿಯಾರ್, ವಿವೇಕಾನಂದ, ಷೇಕ್ಸ್‌ಪಿಯಾರ್ ಮುಂತಾದ ಚಿಂತಕರ ವಿಚಾರಧಾರೆಗಳನ್ನು ಒಪ್ಪುವ ಆಥವಾ ವಿರೋಧಿಸುವ ಮೂಲಕ ತಮ್ಮ ಸ್ತ್ರೀವಾದಿ ಚಿಂತನೆಯನ್ನು ಕಟ್ಟುತ್ತಾರೆ. ಈ ಚಿಂತಕರ ಹೇಳಿಕೆಗಳ ಮೂಲಕ ಮಹಿಳಾಪರ ಚಿಂತನೆಗಳನ್ನು ಗುರುತಿಸುತ್ತಾರೆ. ಆ ಮೂಲಕ ಪುರುಷ ಲೇಖಕರಲ್ಲಿ ಮಹಿಳೆಯನ್ನು ಕುರಿತು ಇದ್ದಂತಹ ಸಮಾನತೆಯ ಚಿಂತನೆಗಳನ್ನು ಗುರುತಿಸುವ ಮೂಲಕ ಸ್ತ್ರೀವಾದದ ವ್ಯಾಪ್ತಿಯನ್ನು ವಿಸ್ತರಿಸುತ್ತಾರೆ. ಇದರಿಂದ ಪುರುಷರೆಲ್ಲ ಸ್ತ್ರೀ ವಿರೋಧಿಗಳಲ್ಲ. ಅವರಲ್ಲಿಯೂ ಸ್ತ್ರೀ ಸಮಾನ ಚಿಂತನೆಗಳು ಇವೆ ಎಂಬುದನ್ನು ಗುರುತಿಸುತ್ತಾರೆ. ಈ ಮೂಲಕ ಸ್ತ್ರೀ ಪುರುಷರು ಇಬ್ಬರು ಸಮಾನವಾಗಿ ಲಿಂಗ ಸಮಾನತೆಗೆ ಹೋರಾಟ ಮಾಡಿದಾಗ ಮಾತ್ರ ಯಶಸ್ಸು ಸಾಧ್ಯ ಎಂಬುದನ್ನು ಗುರುತಿಸುತ್ತಾರೆ. ಅಂದರೆ ಇವರು ಕೇವಲ ವಿರೋಧದ ನೆಲೆಯಲ್ಲಿ ಸಮಾಜವನ್ನು-ಸ್ತ್ರೀ ಪುರುಷರನ್ನು ಗ್ರಹಿಸುವುದಿಲ್ಲ. ಸಮಾನತೆಯ ನೆಲೆಯಲ್ಲಿಯೂ ಗ್ರಹಿಸುತ್ತಾರೆ. ಹೀಗೆ ಎರಡು ವಿಭಿನ್ನ ಮಾದರಿಗಳ ಮೂಲಕ ತಮ್ಮ ಸ್ತ್ರೀವಾದಿ ಚಿಂತನೆಗಳನ್ನು ಅಭಿವ್ಯಕ್ತಿಸುತ್ತಾರೆ.

ಆಶಾದೇವಿಯವರು ತಮ್ಮ ಚಿಂತನೆಯನ್ನು ವಿಸ್ತರಿಸಲು ಮತ್ತು ಅಭಿವ್ಯಕ್ತಿಸಲು ಒಂದು ತಾತ್ವಿಕ ಚೌಕಟ್ಟನ್ನು ರೂಪಿಸಿಕೊಳ್ಳುತ್ತಾರೆ. ಒಂದು ವಿಷಯವನ್ನು ಹೇಳಲು ವಿಸ್ತೃತವಾದ ಪೀಠಿಕೆಯನ್ನು ಹಾಕುತ್ತಾರೆ. ಇದಕ್ಕೆ ಅವರ ಆಳವಾದ ಅಧ್ಯಯನ, ಸೂಕ್ಷ್ಮಗ್ರಹಿಕೆಯ ಸಾಮರ್ಥ್ಯವೇ ಕಾರಣವಾಗಿದೆ. ಸ್ತ್ರೀವಾದವನ್ನು ಕಟ್ಟಲು ಎರಡು ಮಾದರಿಗಳನ್ನು ಗುರುತಿಸಬಹುದು. ಒಂದು– ಸಾಹಿತ್ಯದ ಮೂಲಕ ಸ್ತ್ರೀವಾದವನ್ನು ಹುಡುಕುವುದು. ಎರಡು– ಸ್ತ್ರೀವಾದವನ್ನು ಬೆಳಸಲು ಅಥವಾ ಹೇಳಲು ಸಾಹಿತ್ಯವನ್ನು ಬಳಸಿಕೊಳ್ಳುವುದು. ಆದರೆ ಆಶಾ ಅವರ ವಿಮರ್ಶೆಯ ಅಭಿವ್ಯಕ್ತಿ ವಿಧಾನವು ಎರಡನೆಯ ಮಾದರಿಗೆ ಸೇರುತ್ತವೆ.

ಒಂದು ತಾತ್ವಿಕ ಚೌಕಟ್ಟನ್ನು ಗುರುತಿಸಿಕೊಂಡು ಆ ಮೂಲಕ ವಚನ ಸಾಹಿತ್ಯವನ್ನು, ಕಲಾಪಠ್ಯಗಳನ್ನು, ಸಮಕಾಲೀನ ಪುರಾಣ, ಚಾರಿತ್ರಿಕ ಘಟನೆಗಳನ್ನು ನೋಡುತ್ತಾರೆ. ಒಂದು ಘಟನೆಯನ್ನು ಚರ್ಚಿಸಲು ಅಂತಸ್ತಿನ ಕಲ್ಪನೆಯನ್ನು ಇಟ್ಟುಕೊಂಡು ಹೊಸ ಚೌಕಟ್ಟನ್ನು ರೂಪಿಸುತ್ತಾರೆ. ಮುಖ್ಯವಾಗಿ ಒಂದು ಘಟನೆಯನ್ನೊ, ಸಾಹಿತ್ಯ ಪಠ್ಯಗಳನ್ನೊ, ಹಲವು ಚಿಂತಕರ ಹೇಳಿಕೆಗಳನ್ನೊ ತೆಗೆದುಕೊಂಡು ಒಂದು ನಿರ್ದಿಷ್ಟವಾದ ತಾತ್ವಿಕ ಚೌಕಟ್ಟನ್ನು ಕಟ್ಟುತ್ತಾರೆ. ಇನ್ನೊಂದು, ಇರುವ ವಚನಗಳನ್ನು, ನಡೆದ ಘಟನೆಗಳನ್ನು, ಸಾಹಿತ್ಯ ಕೃತಿಗಳನ್ನು ವಿಶ್ಲೇಷಣೆ ಮಾಡುತ್ತಾ, ಹೊಸನೋಟಗಳುಳ್ಳ ಮಹಿಳಾವಾದವನ್ನು ರೂಪಿಸುತ್ತಾರೆ. ಹೀಗೆ ಎರಡು ವಿಭಿನ್ನ ವಿಧಾನಗಳ ಮೂಲಕ ತಮ್ಮ ವಾದವನ್ನು ಅಭಿವ್ಯಕ್ತಿಸುತ್ತಾರೆ.

ಆಶಾದೇವಿಯವರು ಸ್ತ್ರೀವಾದದ ವ್ಯಾಪ್ತಿಯನ್ನು ವಿಸ್ತರಿಸಲು ಬಹುಶಿಸ್ತೀಯ ನೆಲೆಯನ್ನು ಅನುಸರಿಸುತ್ತಾರೆ. ಅಂದರೆ ಸಮಾಜಶಾಸ್ತ್ರ, ಮಾರ್ಕ್ಸ್‌ವಾದ, ಮಾನವಶಾಸ್ತ್ರ, ವಾಸ್ತವವಾದದ ನೆಲೆಯಲ್ಲಿ ಸ್ತ್ರೀವಾದವನ್ನು ಕಟ್ಟುತ್ತಾರೆ. ಅಲ್ಲಿನ ಚಿಂತನೆಗಳನ್ನು ಸ್ತ್ರೀವಾದಕ್ಕೆ ಅನ್ವಯಿಸಿ ಬಹುಮುಖಿ ನೆಲೆಯಲ್ಲಿ ತಮ್ಮ ಚಿಂತನೆಯನ್ನು ಅಭಿವ್ಯಕ್ತಿಸುತ್ತಾರೆ. ಹೀಗೆ ಎಲ್ಲಾ ಅನ್ಯಶಿಸ್ತುಗಳಲ್ಲಿನ ವಾದವನ್ನು ಸ್ತ್ರೀವಾದಕ್ಕೆ ಪೂರಕವಾಗಿ ತೆಗೆದುಕೊಳ್ಳುತ್ತಾರೆ. ಏಕೆಂದರೆ ಸ್ತ್ರೀವಾದವು ಸಮಾಜಶಾಸ್ತ್ರದಂತೆ, ಮಾರ್ಕ್ಸ್‌ವಾದದಂತೆ ಸಮಾನತೆಯ ನೆಲೆಗಾಗಿ ಹೋರಾಟಮಾಡುತ್ತದೆ. ಇದರಿಂದ ಅಲ್ಲಿನ ಹೋರಾಟವು ಸ್ತ್ರೀವಾದದ ಹೋರಾಟವನ್ನು ವಿಸ್ತರಿಸುತ್ತದೆ. ಹೀಗಾಗಿ ಈ ಎಲ್ಲಾ ಬಹುವಿಧಾನಗಳನ್ನು ಅನುಸರಿಸುವ ಮೂಲಕ ವಾಸ್ತವದಲ್ಲಿ ಸ್ತ್ರೀವಾದವನ್ನು ಕುರಿತು ಚಿಂತಿಸುತ್ತಾರೆ. ಇದು ಆಶಾ ಅವರ ಅಭಿವ್ಯಕ್ತಿ ವಿಧಾನದ ಇನ್ನೊಂದು ವೈಶಿಷ್ಟ್ಯ ಎಂದು ಹೇಳಬಹುದು. ಅಂತರ್ ಶಿಸ್ತಿನ ಚಿಂತನೆಗೆ ವಿಷಯವನ್ನು ಒಳಪಡಿಸಲು ಆಳವಾದ ಓದು ಅವಶ್ಯಕ. ಈ ಎಲ್ಲಾ ಶಿಸ್ತುಗಳಿಗೆ ಸ್ತ್ರೀವಾದವನ್ನು ಅನ್ವಯಿಸಿ ಹೇಳುವುದು ಆಶಾ ಅವರ ವಿದ್ವತ್ತಿನ ವಿಸ್ತಾರವನ್ನು ಸೂಚಿಸುತ್ತದೆ.

ಆಶಾದೇವಿಯವರ ಆಳವಾದ ಓದು ಬರವಣಿಗೆಯಲ್ಲಿ ಎದ್ದು ಕಾಣುತ್ತದೆ. ಅಂದರೆ ವಿಷಯವನ್ನು ಬಹುಶಿಸ್ತಿಯ ನೆಲೆಗೆ ಒಳಪಡಿಸುವುದರಿಂದ ಬಹಳ ಸಂಕೀರ್ಣ ನೆಲೆಯಲ್ಲಿ ತಮ್ಮ ಚಿಂತನೆ ಪ್ರಕಟಿಸುತ್ತಾರೆ. ಈ ಸಂಕೀರ್ಣತೆಗೆ ಕಾರಣ ಅವರು ಚರ್ಚಿಸುತ್ತಿರುವ ಮಹಿಳೆಯ ವಿಷಯವೂ ಸಂಕೀರ್ಣವಾಗಿರುವುದು. ಅವರು ಚರ್ಚಿಸುವ ವಸ್ತುವಿಷಯವೇ ಅವರ ಚಿಂತನೆಯ ಸಂಕೀರ್ಣತೆಗೂ ವಿಶಿಷ್ಟತೆಗೂ ಕಾರಣವಾಗಿದೆ. ಆದರೆ ಚಿಂತನೆಯನ್ನು ಕೆಲವೊಮ್ಮೆ ಅನಗತ್ಯವಾದ ಸಂಕೀರ್ಣತೆಗೆ

ಒಳಪಡಿಸುವುದು ಆಶಾ ಅವರ ಮಿತಿ ಕೂಡ ಆಗಿದೆ. ಆಳವಾದ ಅಧ್ಯಯನ ಮಾಡಿದಂತೆಲ್ಲಾ ಅನುಭವ, ತಿಳುವಳಿಕೆ ತೀವ್ರವಾದಂತೆಲ್ಲಾ ಅಭಿವ್ಯಕ್ತಿಯ ಸಾಧನಗಳು ವ್ಯಾಪಕವಾಗುತ್ತಾ ಹೋಗುತ್ತವೆ. ಈ ಒಂದು ಗುಣವನ್ನು ಆಶಾ ಅವರ ವಿಮರ್ಶೆಯಲ್ಲಿ ಗುರುತಿಸಬಹುದು.

ಅನೇಕ ಮಹಿಳಾವಾದಿಗಳು ಲಿಂಗ ಸಮಾನತೆಗಾಗಿ, ಸಮಾಜದಲ್ಲಿ ತಮಗಾಗಿ ಒಂದು ಸ್ಥಾನವನ್ನು ಪಡೆಯುವುದಕ್ಕಾಗಿ ಹಿಂದಿನಿಂದಲೂ ಹೋರಾಡುತ್ತ ಬಂದಿದ್ದಾರೆ. ಅವರು ಇದರ ಭಾಗವಾಗಿಯೇ ಸ್ತ್ರೀವಾದಿ ಸಿದ್ಧಾಂತಕ್ಕೆ ತಮ್ಮ ಚರ್ಚೆಯನ್ನು ವಿಸ್ತರಿಸುತ್ತಾರೆ. ಇದರ ಜೊತೆಗೆ ಸಮಕಾಲೀನ ಘಟನೆಗಳಿಗೂ ಪ್ರತಿಕ್ರಿಯಿಸುತ್ತಾರೆ. ತಮ್ಮ ಪರಿಸರದಲ್ಲಿ ಮಹಿಳೆಯ ಮೇಲೆ ಪ್ರತಿದಿನವೂ, ಅನೇಕ ರೀತಿಯಲ್ಲಿ ದೌರ್ಜನ್ಯ ಶೋಷಣೆ ಅತ್ಯಾಚಾರ, ಕೌಟುಂಬಿಕ ಕಿರುಕುಳ ಅನೇಕ ರೂಪದಲ್ಲಿ ನಡೆಯುತ್ತಿರುತ್ತದೆ. ಆ ಘಟನೆಗಳನ್ನು ಖಂಡಿಸುತ್ತ ತಮ್ಮ ಚಿಂತನೆಯನ್ನು ಅವರು ಮಂಡಿಸುತ್ತಾರೆ. ಅಂದರೆ ಲಿಂಗ ಅಸಮಾನತೆಯು ಎಲ್ಲಾ ಸಮಾಜಗಳಲ್ಲಿ ಕಾಲಾತೀತವಾಗಿ, ದೇಶಾತೀತವಾಗಿ ಒಂದೇ ಮಾದರಿಯಲ್ಲಿದೆ. ಅದನ್ನು ವಿರೋಧಿಸಿ ಹಲವಾರು ಲೇಖಕಿಯರು ತಮ್ಮ ಸಾಹಿತ್ಯದ ಮೂಲಕ ಪ್ರತಿರೋಧ ವ್ಯಕ್ತಪಡಿಸುತ್ತ ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಆಶಾದೇವಿಯವರು ಓಲ್ಗಾ, ಕಮಲಾದಾಸ್, ಚಿತ್ರಾ ಮುದ್ಗಲ್, ಮಹಾಶ್ವೇತಾದೇವಿ ಹೀಗೆ ಇತರ ಭಾಷೆಗಳ ಲೇಖಕರ ಪಠ್ಯಗಳನ್ನು ಚರ್ಚೆಗೆ ಒಳಪಡಿಸುವ ಮೂಲಕ ಸ್ತ್ರೀವಾದಿ ಚಿಂತನೆಗಳನ್ನು ಶೋಧಿಸುವುದನ್ನು ಗಮನಿಸಬಹುದು. ಅವರು ಮಹಿಳಾ ದೌರ್ಜನ್ಯದ ವಿರುದ್ಧ ಪ್ರತಿಭಟನೆಗೆ ಹೊಸಹೊಸ ಹಾದಿಗಳನ್ನು ತಮ್ಮ ಚಿಂತನೆಯಲ್ಲಿ ಹುಡುಕುತ್ತಾರೆ. ತಮ್ಮ ಹೋರಾಟಕ್ಕೆ ಬೇಕಾಗಿರುವ ಆತ್ಮಸ್ಥೈರ್ಯದ ಉಪಾಯದ ದಾರಿಗಳನ್ನು ಕಟ್ಟಿಕೊಡುತ್ತಾರೆ. ಈ ಮೂಲಕ ಮಹಿಳಾ ಸೃಜನಶೀಲತೆಯನ್ನು ಗುರುತಿಸುತ್ತಾರೆ. ಸಾಹಿತ್ಯಿಕವಾಗಿ ಮಹಿಳೆ ಮಾಡಿದ ಹೋರಾಟವನ್ನು ಸಮಕಾಲೀನಗೊಳಿಸುತ್ತಾರೆ. ಅವರು ಮಹಿಳೆಯರ ಇಂದಿನ ಹಾಗೂ ಪರಂಪರೆಯ ಸ್ಥಿತಿಗತಿಗಳನ್ನು, ಸ್ಥಾನಮಾನಗಳನ್ನು ಬರಹದ ಮೂಲಕ ಆಳವಾದ ಚರ್ಚೆಗೆ ಎಳೆದೊಯ್ಯುತ್ತಾರೆ. ಹೀಗೆ ಇವರ ವಿಮರ್ಶಾ ಬರಹಗಳು ಮಹಿಳಾ ಅಸ್ಮಿತೆಯ, ಪ್ರತಿಭಟನೆಯ, ಜೀವಂತಿಕೆಯ ಭಾಗವೇ ಆಗಿವೆ.

ಕನ್ನಡ ಸಾಹಿತ್ಯದಲ್ಲಿ ಪುರುಷ ಗ್ರಹಿಕೆಯ ಓದು ಚಾಲ್ತಿಯಲ್ಲಿದೆ. ಪುರುಷನ ನೆಲೆಯಲ್ಲಿಯೇ ಮಹಿಳೆಯನ್ನು ಗ್ರಹಿಸುವ ಹಾಗೂ ಅರ್ಥೈಸುವ ಕೆಲಸ ಮಾಡಿಕೊಂಡು ಬರಲಾಗಿದೆ. ಈ ಮೂಲಕ ಮಹಿಳೆಯ ಸಂಪೂರ್ಣ ವ್ಯಕ್ತಿತ್ವವನ್ನು ಮರೆಮಾಚಲಾಗಿದೆ. ಈ ಮರೆಮಾಚಿದ ಮಹಿಳಾ ಅಸ್ತಿತ್ವವನ್ನು, ಚಹರೆಯನ್ನು ಗುರುತಿಸುವ ಭಾಗವಾಗಿ ಇಡೀ ಸಾಹಿತ್ಯವನ್ನು ತಮ್ಮ ಬರವಣಿಗೆಯ ಮೂಲಕ, ಚಿಂತನೆಯ ಮೂಲಕ ಮರುಓದಿಗೆ ಆಶಾದೇವಿ ಒಳಪಡಿಸುತ್ತಾರೆ. ಈ ಮೂಲಕ ಪುರುಷ ಗ್ರಹಿಕೆಯ ಮಹಿಳೆಯ ಚಹರೆಯನ್ನು ವಿರೋಧಿಸುತ್ತಾರೆ.

ಮಹಿಳಾ ಓದಿನ ಮೂಲಕ ಮಹಿಳಾ ಸಾಹಿತ್ಯವನ್ನು, ಮಹಿಳೆಯ ಅಭಿವ್ಯಕ್ತಿಯನ್ನು, ಮಹಿಳೆಯ ಬದುಕನ್ನು ಅರ್ಥೈಸಲು ಸಾಧ್ಯ ಎಂಬುದು ಆಶಾ ಅವರ ಗ್ರಹಿಕೆ. ಇದುವರೆಗೆ ಮಹಿಳಾ ಸಾಹಿತ್ಯದ ಬಗ್ಗೆ ಇದ್ದ ತಪ್ಪು ಗ್ರಹಿಕೆಗಳನ್ನು ಒಡೆಯುವುದು ಮತ್ತು ಮಹಿಳಾ ಸೃಜನಶೀಲತೆಯ ಶಕ್ತಿಯನ್ನು ತಿಳಿಸುವುದು ಆಶಾ ಅವರ ಉದ್ದೇಶ. ಮಹಿಳಾ ಕಾವ್ಯಕ್ಕೆ ಸಾಮಾಜಿಕ, ರಾಜಕೀಯ ಹೋರಾಟದ ಆಯಾಮವನ್ನು

ತಂದು ಕೊಡುವುದು ಇವರ ಕಳಕಳಿ. ಈ ಮೂಲಕ ಮಹಿಳಾ ಚಳುವಳಿ ಕಟ್ಟುವುದು, ವಿಸ್ತರಿಸುವುದು ಅವರ ಆಶೋತ್ತರವಾಗಿದೆ. ಆಶಾದೇವಿಯವರ ಅಭಿವ್ಯಕ್ತಿ ವಿಧಾನ ಮತ್ತು ಬರವಣಿಗೆಯನ್ನು ಕುರಿತಂತೆ ಚರ್ಚಿಸುತ್ತ "ಸಮಕಾಲೀನ ಕನ್ನಡ ವಿಮರ್ಶೆಗೆ ಅನನ್ಯ ರೀತಿಯ ಅರ್ಥ ವಿನ್ಯಾಸವನ್ನು ಒದಗಿಸುತ್ತಿರುವ ವಿಶಿಷ್ಟ ಸ್ತ್ರೀಧ್ವನಿ ಎಂದು, ಅಪರೂಪದ ಧೀಶಕ್ತಿ, ಅಧ್ಯಯನದಿಂದ ಕೂಡಿದ ಅರಿವು, ಸ್ಪಷ್ಟ ಚಿಂತನೆ, ಆಳವಾದ ವಿಷಯ ಪ್ರವೇಶ ಸಾಮರ್ಥ್ಯ, ಕರಾರುವಕ್ಕಾದ ಪರಿಭಾಷೆಯ ಬಳಕೆ ಮತ್ತು ತರ್ಕಬದ್ಧತೆಗಳು ಆಶಾದೇವಿಯವರ ವಿಮರ್ಶೆಯ ವಿಶಿಷ್ಟ ಲಕ್ಷಣಗಳು" ಎಂದು 'ನಡುವೆ ಸುಳಿವ ಆತ್ಮ' ಕೃತಿಯ ಬೆನ್ನುಡಿಯಲ್ಲಿ ಬಿ.ಎನ್.ಸುಮಿತ್ರಾಬಾಯಿ ಅವರು ಹೇಳುತ್ತಾರೆ.

ಆಶಾದೇವಿಯವರ ಪ್ರಕಾರ, ಸ್ತ್ರೀವಾದ ಎಂದರೆ ಪುರುಷವಿರೋಧಿ ಗ್ರಹಿಕೆಯಲ್ಲ. ಅದು ಲಿಂಗ ತಾರತಮ್ಯವನ್ನು ಕುರಿತ ಹೋರಾಟ, ಈ ತಾತ್ವಿಕ ಚೌಕಟ್ಟಿನಲ್ಲಿ ಬರೆಯುವುದರಿಂದ ಆಶಾದೇವಿಯವರ ಬರಹಗಳು ಓದುಗರಲ್ಲಿ ಚಿಂತನಶೀಲತೆಯನ್ನು ಹುಟ್ಟಿಸುತ್ತವೆ. ಹಲವಾರು ದಿಕ್ಕಿನ ಚಿಂತನ–ಮನನಗಳಿಗೆ ಪ್ರೇರಣೆ ನೀಡುತ್ತಾ ಓದುಗರಲ್ಲಿ ಹೊಸ ಆಲೋಚನ ಮನೋಭಾವ ಹುಟ್ಟುಹಾಕುತ್ತವೆ. ಓದುಗರ ತಿಳುವಳಿಕೆಗೆ ಹೊಸದೊಂದು ಆಯಾಮವನ್ನು ನೀಡಿ ಬದಲಾವಣೆಗೆ ಪ್ರೇರೇಪಿಸುತ್ತವೆ. ಲಿಂಗ ಸಮಾನತೆ ಉಳ್ಳಂತಹ ಸಮಾಜವನ್ನು ಸೃಷ್ಟಿಸುವುದು ಆಶಾ ಅವರ ಬರವಣಿಗೆಯ ಕಾಳಜಿಯಾಗಿದೆ. ಆಶಾದೇವಿಯವರು ಪುರುಷಪ್ರಧಾನ ವ್ಯವಸ್ಥೆಯ ಹುನ್ನಾರಗಳ ಬಗ್ಗೆ, ಅದರ ದಬ್ಬಾಳಿಕೆ ಶೋಷಣೆಯ ಬಗ್ಗೆ, ನಿಷ್ಠುರವಾಗಿ ಹೇಳುತ್ತಾರೆ. ಅವರ ಹೆಚ್ಚಿನ ಬರಹಗಳು ಮಿತ್ ವಿಶ್ಲೇಷಣೆಗೆ ಒತ್ತು ಕೊಡುತ್ತವೆ. ಮಿತ್ ವಿಶ್ಲೇಷಣೆಯಲ್ಲಿ ಸಮಾಜದ ಬಗ್ಗೆ ಅಪೂರ್ವ ಒಳನೋಟಗಳನ್ನು ಸೃಷ್ಟಿಸುತ್ತವೆ. ಭಾರತದ ಮಹಿಳೆಯರ ಬದುಕನ್ನು ಘನತೆಯಿಂದ ಬದುಕುವಂತೆ ಬದಲಾಯಿಸಬಲ್ಲ ಸ್ತ್ರೀ ಸಂಕಥನವನ್ನು ಕಟ್ಟುವುದು ಇವರ ಉದ್ದೇಶವಾಗಿದೆ. ಹೀಗಾಗಿ ಅವರ ಬರವಣಿಗೆಯಲ್ಲಿ ಸಮಕಾಲೀನ ಪ್ರಜ್ಞೆ, ಸಾಮಾಜಿಕ ಪ್ರಜ್ಞೆಗಳು ಗಾಢವಾಗಿರುತ್ತವೆ.

ಭಾಷೆಯನ್ನು ಕುರಿತು ಹೇಳಬೇಕೆಂದರೆ, ನೇರವಾದ ಭಾಷೆಯನ್ನೆ ಬಳಸುತ್ತಾರೆ. ಈ ಭಾಷೆಯಲ್ಲಿ ವ್ಯವಸ್ಥೆಯನ್ನು ಕುರಿತಂತೆ ಕಟುವಾದ ವ್ಯಂಗ್ಯ, ಆಕ್ರೋಶ ವ್ಯಕ್ತವಾಗುತ್ತದೆ. ಇವರ ಬರವಣಿಗೆ ಅಂಕಣಗಳ ರೂಪದಲ್ಲಿ ಹೆಚ್ಚಾಗಿ ಪ್ರಕಟಗೊಂಡಿವೆ. ವಿಸ್ತಾರವಾದ ಓದುಗ ವಲಯಕ್ಕೆ ತಮ್ಮ ಚಿಂತನೆ ತಲುಪಿಸುವ ಉದ್ದೇಶದಿಂದ ಇವರ ಭಾಷೆ ಸರಳೀಕರಣಗೊಂಡಿದೆ. ಇವರು ಹೇಳುವ ವಿಧಾನವು ಕೂಡ ನೇರವಾಗಿರುತ್ತದೆ. ಒಂದು ವಿಷಯವನ್ನು ತೆಗೆದುಕೊಂಡು ಅದರ ವಿವಿಧ ಮಗ್ಗುಲುಗಳನ್ನು ಶೋಧಿಸುತ್ತ ಅವರು ಪಿತೃಸಂಸ್ಕೃತಿಯಲ್ಲಿರುವ 'ಛದ್ಮವೇಷ'ಗಳನ್ನು ಕಳಚುತ್ತ ಹೋಗುತ್ತಾರೆ. ಆಶಾದೇವಿಯವರ ಸ್ತ್ರೀವಾದಿ ಚಿಂತನೆಯ ಸ್ವರೂಪವು 'ನಾರೀಕೇಳಾ' ಶೀರ್ಷಿಕೆಯಲ್ಲಿ ಪ್ರಕಟವಾಗುವ ಅಂಕಣಗಳ ತಲೆಬರಹಗಳಲ್ಲಿಯೇ ಹೆಚ್ಚು ವ್ಯಕ್ತವಾಗುತ್ತವೆ. ಇವರ ನೇರವಾದ ಚಿಂತನೆಯನ್ನು ಪ್ರತಿಯೊಂದು ಅಂಕಣಕ್ಕೆ ಕೊಡುವ ಶೀರ್ಷಿಕೆಯಲ್ಲಿಯೇ ಗುರುತಿಸಬಹುದು. ಆದ್ದರಿಂದ ತಲೆಬರಹದ ಮೂಲಕ ಆಶಾ ಅವರ ಚಿಂತನೆಯ ಸ್ವರೂಪವನ್ನು ಮತ್ತು ಅಭಿವ್ಯಕ್ತಿಯ ವಿಶಿಷ್ಟತೆಯನ್ನು ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ವಿವರಿಸಲಾಗಿದೆ.

## ೮.೩. ಶೀರ್ಷಿಕೆ ನೆಲೆಯಲ್ಲಿ ಸ್ತ್ರೀವಾದಿ ಚಿಂತನೆಯ ಸ್ವರೂಪ

ಎಂ.ಎಸ್.ಆಶಾದೇವಿ ಅವರ ಚಿಂತನಾ ಬರಹಗಳು ಇಂದು ದೊಡ್ಡ ಸಂಖ್ಯೆಯ ಓದುಗ ಬಳಗವನ್ನು ಸಂಪಾದಿಸಿಕೊಂಡಿವೆ. ಇವರು 'ನಾರೀಕೇಳಾ' ಶೀರ್ಷಿಕೆಯಲ್ಲಿ ಬರೆದ ಅಂಕಣಗಳು ಅವರ ಚಿಂತನೆಯನ್ನು ಅಕೆಡಮಿಕ್ ಹಿನ್ನೆಲೆಯಿಲ್ಲದ ಓದುಗರಿಗೂ ಮುಟ್ಟಿವೆ. ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಒಂದು ಸ್ತ್ರೀವಾದದ ಮಾದರಿ ಅಥವಾ ಚೌಕಟ್ಟು ಇದ್ದು, ಚೌಕಟ್ಟನ್ನು ಆಶಾದೇವಿಯವರು ತಮ್ಮಬರೆಹಗಳ ಮೂಲಕ ಇತ್ಯಾತ್ಮಕವಾಗಿ ವಿಸ್ತರಿಸುವರು. ಇದರಿಂದ ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದವನ್ನು ಇನ್ನಷ್ಟು ಮುನ್ನೆಲೆಗೆ ತರುವುದು ಇವರ ಉದ್ದೇಶವಾಗಿದೆ. ಆಶಾರವರು ತಮ್ಮ ಅಂಕಣ ಬರೆಹಕ್ಕೆ ನಿರ್ದಿಷ್ಟವಾದ ಶೀರ್ಷಿಕೆಯನ್ನು ಕೊಡುತ್ತಾರೆ. ಈ ಶೀರ್ಷಿಕೆಯ ಮೇಲೆ ವಿಷಯವನ್ನು ಕೇಂದ್ರೀಕರಿಸಿ ಚರ್ಚೆಯನ್ನು ಬೆಳೆಸುತ್ತಾರೆ. ತಲೆಬರಹದ ಮೂಲಕವೇ ಒಂದು ತಾತ್ವಿಕ ಚೌಕಟ್ಟನ್ನು ಕಟ್ಟುತ್ತಾರೆ. ಇವರ ಲೇಖನಕ್ಕೆ ಕೊಟ್ಟಿರುವ ಶೀರ್ಷಿಕೆಗಳು ಹೆಚ್ಚಾಗಿ ಮಹಿಳಾ ಪಾತ್ರಗಳ ಮೇಲೆ ಕೇಂದ್ರೀಕೃತವಾಗಿವೆ. ಈ ಶೀರ್ಷಿಕೆಗಳನ್ನು ಆಳವಾದ ಚರ್ಚೆಗೆ ಒಳಪಡಿಸುವ ಅಗತ್ಯವಿದೆ.

ಅಂಕಣ ಸಾಹಿತ್ಯದಲ್ಲಿ ಬರುವ ಪ್ರತಿಯೊಂದು ಶೀರ್ಷಿಕೆಯಲ್ಲೂ ಆಶಾದೇವಿಯವರು ಸ್ತ್ರೀವಾದಿ ಸಿದ್ಧಾಂತವನ್ನು ಕಟ್ಟುತ್ತಾರೆ. ಕೊಡುವ ಶೀರ್ಷಿಕೆಯಲ್ಲಿಯೇ ಸ್ತ್ರೀವಾದಿ ಚಿಂತನೆಯ ನೇರವಾದ ದಾರಿಯನ್ನು ಸೂಚಿಸುತ್ತಾರೆ. ಇವರ ಚಿಂತನೆಯಲ್ಲಿರುವ ಸ್ತ್ರೀವಾದವು ಪುರುಷ ವಿರೋಧಿ ನೆಲೆಯದಲ್ಲ. ಲಿಂಗ ಸಮಾನತೆಯ ನೆಲೆಯಲ್ಲಿ ಕೂಡು ಹೋರಾಟ ಮಾಡುವ ಆಶಯದ್ದು. ನಮ್ಮ ಹೆಸರಾಂತ ಕವಿಗಳ, ಚಿಂತಕರ ಧೋರಣೆಗಳನ್ನು, ಅಲ್ಲಿರುವ ಮಹಿಳಾ ಪಾತ್ರಗಳನ್ನು ಮರುಓದಿಗೆ ಅವರ ಅಂಕಣಗಳು ಒಳಪಡಿಸುತ್ತವೆ. ಇದರಿಂದ ಇದುವರೆಗೆ ಪಿತೃಸಮಾಜವು ಮಹಿಳೆಯನ್ನು ಉದ್ದೇಶ ಪೂರ್ವಕವಾಗಿ ಹತ್ತಿಕ್ಕುತ್ತಿರುವ ಉಪಾಯದ ದಾರಿಗಳನ್ನು ಶೋಧಿಸುವುದು ಮತ್ತು ವಿಶ್ಲೇಷಿಸುವುದು; ಈ ಮೂಲಕ ಮಹಿಳೆಯನ್ನು ಗ್ರಹಿಸುವ ಹೊಸ ಚಿಂತನೆಗಳನ್ನು, ತಿಳುವಳಿಕೆಗಳನ್ನು ಹುಟ್ಟುಹಾಕುವುದು ಅವರ ಅಂಕಣಗಳ ಇರಾದೆಯಾಗಿದೆ. ಅವರ ಕಾವ್ಯದ ಮೇಲಿನ ಅಂಕಣಗಳಲ್ಲಿ ಮಹಿಳಾ ಕಾವ್ಯದಲ್ಲಿರುವ ಮಹಿಳೆಯ ಬಿಡುಗಡೆಯ ಸೂಕ್ಷ್ಮವಿಧಾನಗಳ ವಿಶ್ಲೇಷಣೆಯಿದೆ. ಮಹಿಳಾ ಕಾವ್ಯದ ಹುಟ್ಟಿಗೆ ಕಾರಣವಾದ ಸಾಮಾಜಿಕ, ರಾಜಕೀಯ ತುರ್ತನ್ನು ಆಶಾ ಗುರುತಿಸುತ್ತಾರೆ. 'ಕಾವ್ಯ ಬಿಡುಗಡೆಯ ಬಾಗಿಲು', 'ಅವಳ ಕಾವ್ಯ ಅವಳ ಭಾಷೆ', 'ಭಕ್ತಿ ಎಂಬ ಬಂಡಾಯದ ಆಂಡಾಳ್' ಇನ್ನು ಮುಂತಾದ ತಲೆಬರಹಗಳಲ್ಲಿ ಆಶಾ ಅವರು ಹೇಳಲು ಹೊರಟಿರುವ ಸ್ತ್ರೀವಾದಿ ನಿಲುವುಗಳ ಸೂಕ್ಷ್ಮ ದನಿಯು ಗೋಚರವಾಗುವುದು. ಪಿತೃಸಮಾಜದ ಬಂಧನದಿಂದ ಬಿಡುಗಡೆಯನ್ನು ಪಡೆಯುವುದಕ್ಕೆ ಬೇಕಾದ ಚಿಂತನೆಯನ್ನು ಹುಡುಕಲು ಲೇಖಕಿಗೆ ಕಾವ್ಯವಿಶ್ಲೇಷಣೆ ಒಂದು ಸಾಧನವಾಗಿದೆ. ಅದರಲ್ಲೂ ಮಹಿಳಾ ಅನುಭಾವಿಗಳು ಹುಟ್ಟು ಹಾಕಿದ ಪ್ರತಿಭಟನೆಯ ಸ್ವರೂಪದ ಬಗ್ಗೆ ಅವರಿಗೆ ಬಹಳ ಕುತೂಹಲವಿದೆ. 'ಕಾವ್ಯ ಬಿಡುಗಡೆಯ ಬಾಗಿಲು' ಶೀರ್ಷಿಕೆಯಲ್ಲಿ ಬಳಕೆಯಾಗಿರುವ 'ಬಾಗಿಲು' ಪದವೇ ಒಂದು ಬಂಧನದ ಹಾದಿಯೂ ಆಗಿದೆ. ಬಿಡುಗಡೆಯ ಹಾದಿಯೂ ಆಗಿದೆ. ಮನೆಯಿಂದ ಹೊರಗಡೆ ಹೋಗಲು ಮತ್ತು ಒಳಗಡೆ ಬರಲು ಎರಡು ಕಾರ್ಯಗಳಿಗೂ ಬಾಗಿಲು ಬಳಕೆಯಾಗುತ್ತದೆ. 'ಬಾಗಿಲು' ಸಾಂಪ್ರದಾಯಿಕ ಸಮಾಜದ ಕಟ್ಟುಪಾಡನ್ನು ಸೂಚಿಸುತ್ತದೆ. ಅದರಿಂದ ಹೊರಗಡೆ ಬರುವುದನ್ನು, ಆ ಕಟ್ಟುಪಾಡನ್ನು ಉಲ್ಲಂಘಿಸುವುದನ್ನು ಕೂಡ ಸೂಚಿಸುತ್ತದೆ. 'ಹೊಸಿಲು' ಮನೆದಾಟುವ ಒಂದು ಬಿಡುಗಡೆ ಮಾತ್ರ ಅಲ್ಲ.

'ಬಾಗಿಲು' ಶಬ್ದದಲ್ಲಿ ಎರಡು ಅರ್ಥಗಳನ್ನು ನಾವು ಗ್ರಹಿಸಬಹುದು. ಒಂದು–ಸಾಮಾಜಿಕವಾಗಿ ಒಬ್ಬ ವ್ಯಕ್ತಿಯನ್ನು ಹೊರಗೆ ಹಾಕುವುದು ಅಥವಾ ಹೊರಹೋಗಲು ಇರುವ ಸ್ವಾತಂತ್ರ್ಯ; ಎರಡು– ಸಾಮಾಜಿಕವಾಗಿ ಒಬ್ಬ ವ್ಯಕ್ತಿಯನ್ನು ಒಳಗಡೆ ಕರೆದುಕೊಳ್ಳುವುದು. ಇಲ್ಲಿ ಹೆಣ್ಣನ್ನು ಯಾರೂ ಹೊರಹಾಕದೆಯೇ ಸ್ವತಃ ಪಿತೃಸಮಾಜದ ಬಂಧನದಿಂದ ಆಕೆ ಹೊರಬರುತ್ತಿದ್ದಾಳೆ. ಅವಳಿಗೆ ಮನೆ ಬಾಗಿಲಿನಿಂದ ಆಚೆ ಹೋಗುವುದು ಒಂದು ಹೊಸ ಲೋಕಕ್ಕೆ ಹೋದಂತೆ. ಈ ಮೇಲ್ಕಂಡ ಅರ್ಥಗಳನ್ನು 'ಬಾಗಿಲು' ಶಬ್ದ ಧ್ವನಿಸುತ್ತದೆ. ಮನೆ ಕುಟುಂಬಗಳು ಹೆಣ್ಣಾಲಿಗೆ ಹಿಂಸೆಯ ತಾಣಗಳೂ ಆಗಿರುವುದರಿಂದ, ಅವುಗಳಿಂದ ಹೊರಬೇಕೆಂಬುದು ಆಶಾ ಅವರ ಆಶಯ ಕೂಡ ಆಗಿದೆ. ಹಾಗೇ ಬಂದಿರುವ ಹಲವಾರು ನಿದರ್ಶನಗಳನ್ನು ಕಾವ್ಯದ ಪಾತ್ರಗಳ ಮೂಲಕ ಗುರುತಿಸುತ್ತಿದ್ದಾರೆ. ಅನಾದಿಯಿಂದಲೂ ಮಹಿಳೆಯರು ತಾನು ಇದ್ದಂತಹ ಬಂಧನದಿಂದ ಬಿಡುಗಡೆ ಪಡೆಯಲು ಕಾವ್ಯವನ್ನು ಬಾಗಿಲನ್ನಾಗಿ, ಮಾರ್ಗವನ್ನಾಗಿ ಮಾಡಿಕೊಂಡಿದ್ದಾರೆ. ಅದರಲ್ಲಿ ಯಶಸ್ವಿಯೂ ಆಗಿದ್ದಾರೆ. ಬಂಧನದಲ್ಲಿ ಹಿಡಿದಿಟ್ಟುಕೊಳ್ಳಲು ಬಾಗಿಲನ್ನು ಪುರುಷ ಸಮಾಜ ಸಾಂಪ್ರದಾಯಿಕವಾಗಿ, ಸಂಕೇತವನ್ನಾಗಿ ಬಳಸಿಕೊಳ್ಳುತ್ತಿದೆ. ಈ 'ಬಾಗಿಲು' ಎಂಬ ಕಟ್ಟುಪಾಡನ್ನು ನಿರ್ಬಂಧಿಸಿ ಹೊರನಡೆದ ಮಹಿಳೆಯರು ಇದ್ದಾರೆ, ಹಾಗೇ ಹೊರನಡೆಯಲು ಕಾವ್ಯವನ್ನು ಅಸ್ತ್ರವನ್ನಾಗಿ ಉಪಯೋಗಿಸಿಕೊಂಡವರು ಇದ್ದಾರೆ. ಆಶಾ ಅವರು ಈ ಎಲ್ಲಾ ಅಂಶಗಳನ್ನು ಶೋಧಿಸುತ್ತಾರೆ.

ಇನ್ನು ಕೆಲವು ಶೀರ್ಷಿಕೆಗಳಲ್ಲಿ ಭಾರತೀಯ ಪೌರಾಣಿಕ ಪಾತ್ರಗಳನ್ನು ಆಶಾದೇವಿ ಮರುಓದಿಗೆ ಒಳಪಡಿಸುತ್ತಾರೆ. ಈ ಮೂಲಕ ಮಹಿಳೆಯ ಮರೆಮಾಚಿದ ಸ್ವರೂಪವನ್ನು ಹುಡುಕುತ್ತಾರೆ. ಇದರಿಂದ ಮಹಿಳೆಯು ತನ್ನ ಅಸ್ತಿತ್ವಕ್ಕಾಗಿ ಮಾಡಿದ ಹೋರಾಟವನ್ನು ಗುರುತಿಸುತ್ತಾರೆ. ಚರಿತ್ರೆಯ ಮೂಲಕ ಮಹಿಳಾ ಪ್ರತಿರೋಧದ ಹಾದಿಗಳನ್ನು ಸಮಕಾಲೀನಗೊಳಿಸುತ್ತಾರೆ. ಯಾವ ಮಾದರಿಯಲ್ಲಿ ಪಿತೃಸಂಸ್ಕೃತಿಯು ಮಹಿಳೆಯ ಹೋರಾಟವನ್ನು ಕುತಂತ್ರದಿಂದ ದಮನಗೊಳಿಸುತ್ತಾ ಬಂದಿದೆ ಎಂಬುದನ್ನು ಶೋಧಿಸುವಲ್ಲಿ ಅವರ ಚಿಂತನೆ ಪ್ರತಿಚಿಂತನೆಯಾಗಿ ಮಾರ್ಪಡುತ್ತದೆ.

'ಸೀತೆ ಆದಿಮ ಸ್ತ್ರೀವಾದಿ', 'ಸ್ತ್ರೀಮತವನುತ್ತರಿಸಲಾಗದೆ? ಧರ್ಮಶಾಸ್ತ್ರದೊಳ್', 'ನಮ್ಮೆಲ್ಲರ ಆತ್ಮ ಸಖಿ ರಾಧೆ' ಇನ್ನು ಮುಂತಾದ ತಲೆ ಬರಹಗಳಲ್ಲಿ ಚಿಂತಕಿಯ ಆಶಯ ಸ್ಪಷ್ಟವಾಗಿದೆ. 'ಸೀತೆ ಆದಿಮ ಸ್ತ್ರೀವಾದಿ' ಶೀರ್ಷಿಕೆಯನ್ನು ಗಮನಿಸಿದರೆ ಸೀತೆಯನ್ನು ಪುರುಷ ಸಮಾಜವು ಸ್ಥಾಪಿತ ಆದರ್ಶ ಮಹಿಳೆಯ ಮಾದರಿಯಲ್ಲೇ ಚಿತ್ರಿಸಿದೆ. ಈ ಮೂಲಕ ಮಹಿಳೆ ಸಮಾಜದಲ್ಲಿ, ಕುಟುಂಬದಲ್ಲಿ ಇರಬೇಕಾದ ಮಹಿಳೆಯ ಚಿತ್ರಣವನ್ನು ಸೀತೆಯ ಮೂಲಕ ಪಿತೃ ಸಮಾಜ ಚಾಲ್ತಿಗೆ ತಂದಿದೆ. ಸೀತೆಯು ಅಂದು ರಾಮನಿಗೆ ಮಾಡಿದ ಪ್ರತಿರೋಧವನ್ನು ಉದ್ದೇಶ ಪೂರ್ವಕವಾಗಿ ಮರೆಮಾಚಲಾಗಿದೆ. ಇದು ಮಹಿಳೆಯ ಪ್ರತಿಭಟನೆಯನ್ನು ಹತ್ತಿಕ್ಕುವ ಪುರುಷ ಸಮಾಜದ ಕುತಂತ್ರವಾಗಿದೆ. ಈ ಹುನ್ನಾರಗಳನ್ನು ಆಶಾದೇವಿ ಪೌರಾಣಿಕ ಪಾತ್ರಗಳನ್ನು ಮರುಓದಿಗೆ, ಮರು ಚಿತ್ರಣಕ್ಕೆ ಒಳಪಡಿಸುವ ಮೂಲಕ ಮಹಿಳಾ ಪ್ರತಿರೋಧದ ಚಹರೆಗಳನ್ನು ಶೋಧಿಸುತ್ತಾರೆ. ಇದಕ್ಕೆ ವಸ್ತು ಮತ್ತು ಪ್ರೇರಣೆಯಾಗಿ ಅವರಿಗೆ ಒದಗುವುದು, ಜಾನಪದ ಸೀತೆಯ ಪಾತ್ರ. ಪ್ರತಿರೋಧ ಮಾಡುವ ಪುರುಷಾಳ್ವಿಕೆಯ ಒಪ್ಪದ ಸೀತೆಯ ನಿಜವಾದ ವ್ಯಕ್ತಿತ್ವವನ್ನು ಜಾನಪದ ಸೀತೆಯ ಮೂಲಕ ನೋಡಬಹುದು. ಆಶಾ ಅವರು ಸೀತೆಯನ್ನು ಗ್ರಹಿಸಿದ ಮಾದರಿಗಿಂತ ಭಿನ್ನವಾದ ನೋಟವನ್ನು ಸೃಷ್ಟಿಸುತ್ತಾರೆ. ಹೀಗೆ ರಾಧೆ, ದ್ರೌಪದಿ, ಸೀತೆ, ಮೀರಾ

ಇನ್ನಿತರ ಸ್ತ್ರೀ ಪಾತ್ರಗಳ ಮೂಲಕ ಗೌಣವಾಗಿರುವ ಮಹಿಳಾ ವ್ಯಕ್ತಿತ್ವವನ್ನು, ಮಹಿಳಾ ಹೋರಾಟದ ಚಹರೆಯನ್ನು ಶೋಧಿಸುತ್ತಾರೆ.

ಇನ್ನು ಕಾದಂಬರಿಗಳಲ್ಲಿ, ಪೌರಾಣಿಕ ಕೃತಿಗಳಲ್ಲಿ ಪುರುಷ ಮತ್ತು ಮಹಿಳಾ ಲೇಖಕಿಯರು ಕಟ್ಟಿಕೊಟ್ಟಿರುವ ಮಹಿಳಾ ಪಾತ್ರಗಳನ್ನು ಮರುವ್ಯಾಖ್ಯಾನಕ್ಕೆ ಒಳಪಡಿಸುವುದು ಆಶಾ ಅವರ ಉದ್ದೇಶವಾಗಿದೆ. 'ದೋಪ್ದಿ ಎನ್ನುವ ಅಗ್ನಿಕನ್ಯೆ', 'ಪಿತೃಸಂಸ್ಕೃತಿಯ ಸ್ವಯಂ ದತ್ತ ಧಿಮಾಕು ಧಿಕ್ಕರಿಸುತ್ತಾ', 'ಬಿಡುಗಡೆಯೆಂಬುದುಂಟೇ ಹೇಳಾ ಕೆಳದಿ' ಇನ್ನು ಮುಂತಾದ ತಲೆಬರಹಗಳ ಲೇಖನಗಳಲ್ಲಿ, ಮಹಿಳೆ ಅನುಭವಿಸಿದ ನೋವು-ಅಸಹಾಯಕತೆಯನ್ನು ಬದುಕಿನಲ್ಲಿ ಹಲವಾರು ಕಷ್ಟಗಳನ್ನು ಪ್ರತಿಭಟಿಸಿ ತನ್ನ ನೆಲೆ- ಅಸ್ತಿತ್ವವನ್ನು ಆಕೆ ಉಳಿಸಿಕೊಂಡ ಬಗೆಯನ್ನು ಆಶಾ ಶ್ರದ್ಧೆಯಿಂದ ಹುಡುಕುತ್ತಾರೆ.

'ದೊಪ್ದಿ ಎನ್ನುವ ಅಗ್ನಿ ಕನ್ಯೆ' ಶೀರ್ಷಿಕೆಯಲ್ಲಿ ಅಗ್ನಿಕನ್ಯೆ ಎಂಬ ಮಾತು ಮಾರ್ಮಿಕವಾಗಿದೆ. ಸಮಾಜವು ಮಹಿಳೆಗೆ ಒಡ್ಡಿದ ನಿರ್ಬಂಧವನ್ನು ಆಕೆ ಯಾವ ರೀತಿಯಲ್ಲಿ ಎದುರಿಸುತ್ತಾಳೆ ಎಂಬುದನ್ನು ಅಲ್ಲಿ ನೋಡಬಹುದು. ಇಲ್ಲಿ ದೊಪ್ದಿಯ ಹೋರಾಟವನ್ನು ದ್ರೌಪದಿಯ ದಿಟ್ಟತನ ಹೋರಾಟಗಳಿಗೆ ಹೋಲಿಸಿ ಚರ್ಚಿಸಲಾಗಿದೆ. ಅಗ್ನಿ ಎಂಬ ಪದವೇ ಸೂಚಿಸುವಂತೆ ಪುರುಷ ಸಮಾಜಕ್ಕೆ ದೋಪ್ದಿ ಅಗ್ನಿಯಂತೆ ಪುರುಷನ ಅಟ್ಟಹಾಸವನ್ನು ಕೊನೆಗಾಣಿಸಿದ ಆವೇಶದ ಸಂಕೇತ. ಶೋಷಣೆಗೆ ಒಳಪಟ್ಟ ಮಹಿಳೆ ಸಿಂಹಸ್ವಪ್ನಗಳಾಗುತ್ತಾಳೆ ಎಂಬುದನ್ನು ಮಹಿಳೆಯ ಆವೇಶ, ಆಕ್ರೋಶಗಳ ಪರಿಣಾಮಗಳನ್ನು ಈ ಶೀರ್ಷಿಕೆ ಧ್ವನಿಸುತ್ತದೆ. ಅಗ್ನಿ ಎಂಬ ಪದವನ್ನು ಎರಡು ನೆಲೆಗಳಲ್ಲಿ ಚರ್ಚಿಸಬಹುದು. ಒಂದು- ಅಗ್ನಿ ಮನೆ ಬೆಳಗಲು ಕೂಡ ಕಾರಣವಾಗುತ್ತದೆ. ಎರಡು-ಮನೆಯನ್ನು ಉರಿಸಲು ಕೂಡ ಕಾರಣವಾಗುತ್ತದೆ. ಮನೆ ಬೆಳಗಿದರೆ ಪುರುಷನ ಏಳ್ಗೆಯಾದರೆ, ಮನೆ ನಂದಿಸುವ ಮೂಲಕ ಪುರುಷನ ಅಂತ್ಯವಾಗುತ್ತದೆ. ಮಹಿಳೆಯನ್ನು ತನ್ನ ಇಚ್ಚೆಗೆ ಅನುಗುಣವಾಗಿ ನಡೆಸಿಕೊಂಡ, ಶೋಷಣೆಗೆ ಒಳಪಡಿಸಿದ ವ್ಯವಸ್ಥೆಗೆ ದೊಪ್ದಿ ಅಗ್ನಿ ಕನ್ಯೆಯಾಗಿದ್ದಾಳೆ. 'ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ' ಎಂಬ ಗಾದೆಯಂತೆ ದೊಪ್ದಿಯ ವ್ಯಕ್ತಿತ್ವವಿಲ್ಲಿದೆ. ದೊಪ್ದಿ ಮಾರಿಯಾಗಿ, ಅಗ್ನಿಯಾಗಿ, ಪುರುಷರ ಕ್ರೌರ್ಯವನ್ನು ದಿಟ್ಟತನದಲ್ಲಿ ಎದುರಿಸುತ್ತಾಳೆ. ಬೆಂಕಿಗೆ ಎಲ್ಲವನ್ನು ಆತ್ಮಹುತಿ ತೆಗೆದುಕೊಳ್ಳುವ ಶಕ್ತಿ ಇರುವಂತೆ, ಮಹಿಳೆಯ ಪ್ರತಿಭಟನೆಯ ಶಕ್ತಿ ವ್ಯವಸ್ಥೆಯನ್ನು ಹಿಮ್ಮೆಟ್ಟಿಸುತ್ತದೆ. ಈ ಮೂಲಕ ಮಹಿಳೆಗಿರುವ ಅಸಾಧಾರಣಾ ಪ್ರತಿರೋಧದ ಶಕ್ತಿಯನ್ನು ಈ ಶೀರ್ಷಿಕೆಯಲ್ಲಿ ನೋಡಬಹುದು.

'ನೇಪಥ್ಯದಿಂದ ಹೊರಬಂದ ಗೌರಮ್ಮಾಜಿ', 'ಗಂಗವ್ವ ಗಂಗಾಮಾಯಿಯಾಗುವ ಅಪೂರ್ವ ಕಥನ', 'ನರ್ಮದೆ ಬಾಳಾಸಾಹೇಬಳಾಗುವ ಪರ್ವ', 'ಅಕ್ಷಯ ಪಾತ್ರಗಳ ತಾಯಿ' ಇನ್ನು ಕೆಲವು ಶೀರ್ಷಿಕೆಯುಳ್ಳ ಲೇಖನಗಳಲ್ಲಿ, ಗಂಡನಿಲ್ಲದಿದ್ದರೂ ಎದೆಗುಂದದೆ, ಎಂತಹ ಕಷ್ಟದ ಸಮಯವನ್ನು ದಿಟ್ಟತನದಿಂದ ಎದುರಿಸುವ ಧೈರ್ಯ, ತಾಯ್ತನದ ಸ್ವರೂಪ, ಹೆಣ್ಣಿನ ತ್ಯಾಗ, ಸಹನಾ ಕೌಶಲ್ಯ, ಮಹಿಳೆಗಿರುವ ದಿಟ್ಟತನ, ಆತ್ಮಸ್ಥೈರ್ಯಗಳ ಶೋಧವಿದೆ. 'ಗಂಗವ್ವ ಗಂಗಾ ಮಾಯಿಯಾಗುವ ಅಪೂರ್ವ ಕಥನ' ಶೀರ್ಷಿಕೆಯಲ್ಲಿ ಆಶಾ ಅವರು ಶಂಕರಮೊಕಾಶಿ ಪುಣೇಕರ ಅವರು ಬರೆದಿರುವ 'ಗಂಗವ್ವ ಗಂಗಾಮಾಯಿ' ಕಾದಂಬರಿಯನ್ನು, ಆ ಕಾದಂಬರಿಯಲ್ಲಿ ಬಂದಿರುವ ಮಹಿಳಾ ಪಾತ್ರದ ರೂಪಾಂತರದ ಸೂಚನೆಯಿದೆ. ಆಶಾ ಅವರು ತಾಯ್ತನ, ತಾಯ್ತನದ ಶಕ್ತಿ, ತಾಯ್ತನದ ಕಾಳಜಿ, ತ್ಯಾಗ, ಪ್ರೀತಿ ಎಲ್ಲವನ್ನು ಇಲ್ಲಿ

ಮಂಡಿಸುತ್ತಾರೆ. ಈ ಶೀರ್ಷಿಕೆಯಲ್ಲಿ 'ಗಂಗೆ' ಪದವು ಸಾಂಕೇತಿಕವಾಗಿದೆ. 'ಗಂಗೆ'ಗೆ ಭಾರತೀಯ ಸಂಪ್ರದಾಯದಲ್ಲಿ ಮಹತ್ವದ ಸ್ಥಾನ ಇದೆ. ಅದು ಪರಿಶುದ್ಧತೆಯ ಸಂಕೇತ. ಎಲ್ಲಾ ಪಾಪ, ಕರ್ಮಗಳನ್ನು ಕಳೆಯುವ ಶಕ್ತಿ 'ಗಂಗೆ'ಗೆ ಇದೆ ಎಂದು ನಮ್ಮ ಸಂಸ್ಕೃತಿ ನಂಬುತ್ತದೆ. ಮನುಷ್ಯರು ತಾವು ಮಾಡಿದ ಪಾಪವನ್ನು, ಕರ್ಮವನ್ನು ಕಳೆದುಕೊಳ್ಳಲು ಗಂಗೆಯಲ್ಲಿ ಮುಳುಗುತ್ತಾರೆ. ಆದ್ದರಿಂದ ಆಕೆಗೆ 'ಪಾಪ ವಿನಾಶಿನಿ' ಎಂಬ ಬಿರುದು ಕೂಡ ಇದೆ. ಹೀಗಾಗಿ 'ಗಂಗೆ'ಗೆ ಸಂಸ್ಕೃತಿಯಲ್ಲಿ ದೈವತ್ವದ ಆತ್ಯಂತಿಕ ಸ್ಥಾನವನ್ನು ಕೊಡಲಾಗಿದೆ. ಆಶಾ ಅವರು ಗಂಗೆಯ ಮೂಲಕ ಮಹಿಳೆಯ ವ್ಯಕ್ತಿತ್ವವನ್ನು ಗುರುತಿಸುತ್ತಾರೆ. ಅನಾದಿಯಿಂದಲೂ ಮಹಿಳೆಗೆ ಮತ್ತು ಗಂಗೆಗೆ ಕ್ಷಮಯಾಧರಿತ್ರಿ ಎಂಬ ಬಿರುದನ್ನು ಕೊಡಲಾಗಿದೆ. ಆ ಉದ್ದೇಶದಿಂದ ಗಂಗೆ ಮತ್ತು ಮಹಿಳೆಯನ್ನು ಪೂಜನೀಯ ಸ್ಥಾನದಲ್ಲಿ ಇಡಲಾಗಿದೆ. ಗಂಗೆಗೆ ಎಲ್ಲವನ್ನು ಒಳಗೊಳ್ಳುವ, ಕ್ಷಮಿಸುವ, ಲೀನವಾಗಿಸಿಕೊಳ್ಳುವ ಶಕ್ತಿ ಇರುವಂತೆಯೇ ತಾಯಿಯಾದ ಮಹಿಳೆಯರಲ್ಲಿಯೂ ಅಂತಹ ಶಕ್ತಿಯನ್ನು ಆಶಾದೇವಿ ಈ ಮೂಲಕ ಶೋಧಿಸುವರು. ಗಂಗವ್ವ ಎಂಬ ತಾಯಿ ತನ್ನ ಎಲ್ಲಾ ಕಷ್ಟಗಳ ಜೊತೆಯಲ್ಲಿ ಮಗನಿಗಾಗಿ ಶ್ರಮಿಸುತ್ತ ಗಂಗಾಮಾಯಿಯಾಗುತ್ತಾಳೆ. ತಾನು ತಾಯಿಯಾಗಿ ಗಂಡನಿಲ್ಲದೆ ಎಂತಹ ಅಪಮಾನ ಆದಾಗಲೂ, ಕಷ್ಟ ಬಂದಾಗಲೂ ಕುಗ್ಗದೆ ತನ್ನ ಮಗನಿಗಾಗಿ ಎಲ್ಲವನ್ನು ಸಹಿಸಿಕೊಂಡು 'ಗಂಗೆ'ಯ ಸ್ಥಾನದಲ್ಲಿ ನಿಲ್ಲುತ್ತಾಳೆ. ಈ ಎಲ್ಲವುಗಳಿಂದ ಗಂಗೆ ಮತ್ತು ಮಹಿಳೆಗೆ ಇರುವ ಅಂತರ್ ಸಂಬಂಧವನ್ನು ಆಶಾದೇವಿ ಶೋಧಿಸುತ್ತಾರೆ. ಈ ಮೂಲಕ ತಾಯ್ತನಕ್ಕೆ ಇರುವ ಜವಾಬ್ದಾರಿ, ಪ್ರೀತಿ, ಕಾಳಜಿ ಎಲ್ಲವುಗಳನ್ನು ಹೇಳುತ್ತಾ, ಮಹಿಳೆಯ ನಿಜ ವ್ಯಕ್ತಿತ್ವದ ಹುಟುಕಾಟ ಮಾಡುತ್ತಾರೆ. ತಾಯ್ತನದ ಆತ್ಯಂತಿಕ ಮಾದರಿಯಾಗಿ ಗಂಗವ್ವನನ್ನು ರೂಪಕವಾಗಿ ಬಳಸುತ್ತಾರೆ. ತಾಯ್ತನದ ಗುಣವಿಶಿಷ್ಟತೆಗಳನ್ನು ಶೋಧಿಸುತ್ತಾರೆ.

'ಸ್ತ್ರೀ ಚೈತನ್ಯಕ್ಕೆ ಬರೆದ ಹೊಸ ಭಾಷ್ಯ', 'ರಾಗ ಆತ್ಮಶ್ರೀ', 'ಮುಕ್ತ ಛಂದದ ಮುಕ್ತ ಲಯದ ಅಮೃತ ಪತಾಕೆಗಳು' ಇನ್ನು ಹಲವಾರು ಶೀರ್ಷಿಕೆಗಳಲ್ಲಿ ಹೆಣ್ಣು ಕಲೆಯ ಮೂಲಕ ತನ್ನ ಅಸ್ತಿತ್ವವನ್ನು ಕಂಡುಕೊಂಡ ವಿವಿಧ ಮಾದರಿಗಳನ್ನು ನೋಡಬಹುದು. ಕಲೆಯನ್ನು ಸಾಧನವನ್ನಾಗಿಸಿಕೊಂಡು ತನ್ನ ಚಹರೆಯನ್ನು ಕಟ್ಟಿಕೊಂಡ ಮಹಿಳಾ ಮಣಿಗಳ ಹುಡುಕಾಟವನ್ನು ಈ ಶೀರ್ಷಿಕೆಗಳು ಸೂಚಿಸುತ್ತವೆ. ಕಲೆಗಿರುವ ಅಸಾಧಾರಣವಾದ ಶಕ್ತಿಯನ್ನು ಈ ತಲೆಬರಹಗಳು ಹೇಳುತ್ತವೆ. 'ಮುಕ್ತ ಛಂದದ ಮುಕ್ತ ಲಯದ ಅಮೃತ ಪಾತಕೆಗಳು' ಈ ಶೀರ್ಷಿಕೆಯಲ್ಲಿ ಚಿತ್ರಕಲೆಯಲ್ಲಿ ಹೆಸರು ಪಡೆದ ಅಮೃತಾ ಷೇರ್‌ಗಿಲ್ ಅವರು ರಚಿಸಿದ ಮಹಿಳಾ ಪಾತ್ರಗಳ ಚರ್ಚೆ ಮಾಡಲಾಗಿದೆ. ಇಲ್ಲಿ ಕಲಾವಿದೆಯರು ಕಲೆಯ ಮೂಲಕ, ರಾಜಕೀಯ ಪ್ರಜ್ಞೆಯ ಮೂಲಕ, ಬರವಣಿಗೆಯ ಮೂಲಕ ಹುಟ್ಟುಹಾಕಿದ ಬಗೆಯನ್ನು ಲೇಖಕಿ ಗುರುತಿಸುತ್ತಾರೆ. ಮಹಿಳೆಗಿರುವ ವಿಭಿನ್ನ ಚಹರೆಗಳು ಅಮೃತಾ ಚಿತ್ರಕಲೆಯಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದನ್ನು, ಮಹಿಳೆ ನಿಜದ ನೆಲೆಯಲ್ಲಿ ಅಮೃತಾ ಹೇಗೆ ಮುಕ್ತ ಛಂದದಲ್ಲಿ, ಮುಕ್ತ ಲಯದಲ್ಲಿ ವಿವಿಧ ರೂಪಕಗಳ ಮೂಲಕ ಚಿತ್ರಿಸುತ್ತಾರೆ. ಬದಲಾಗುತ್ತಾ ಹೋಗುತ್ತಿರುವ ಮಹಿಳೆಯ ಚಹರೆಯನ್ನು ಅಮೃತಾ ತನ್ನ ಕಲೆಯ ಮೂಲಕ ಹಿಡಿಯುತ್ತಾಳೆ. ಇಲ್ಲಿ ಮಹಿಳೆಯ ವ್ಯಕ್ತಿತ್ವವನ್ನು ಪತಾಕೆಗಳಿಗೆ ಹೋಲಿಸಲಾಗಿದೆ. ಪತಾಕೆಗಳಂತೆ ಮಹಿಳೆ ವ್ಯಕ್ತಿತ್ವದ ನಿಜಚಿತ್ರಣವನ್ನು ಅಮೃತಾ ತನ್ನ ಕಲೆಯ ಮೂಲಕ ಕೊಡುತ್ತಾ ಸ್ತ್ರೀವಾದವನ್ನು ಹುಟ್ಟುಹಾಕಿದ್ದಾಳೆ ಎಂಬುದನ್ನು ಆಶಾ ಅವರು ಚರ್ಚೆ ಮಾಡುತ್ತಾರೆ.

'ತಾನು ಅರ್ಧಹೆಣ್ಣು ಎಂದು ಗಾಂಧೀಜಿ', 'ಷೇಕ್ಸ್‌ಪಿಯರ್ ಸ್ತ್ರೀಲೋಕ' ಇನ್ನು ಕೆಲವು ಶೀರ್ಷಿಕೆಗಳ ಲೇಖನಗಳಲ್ಲಿ ಷೇಕ್ಸ್‌ಪಿಯರ್, ಗಾಂಧಿ, ಅಂಬೇಡ್ಕರ್ ಹಾಗೂ ಇತರ ಚಿಂತಕರು ಮಹಿಳೆಯ ಬಗ್ಗೆ ತಾಳಿರುವ ಚಿಂತನೆಗಳನ್ನು ಆಶಾದೇವಿ ಚರ್ಚಿಸುತ್ತಾರೆ. ಪ್ರತಿಯೊಂದು ಗಂಡಿನಲ್ಲಿ ಹೆಣ್ಣಿನ ಗುಣ, ಹೆಣ್ಣಿನಲ್ಲಿ ಗಂಡಿನ ಗುಣ ಇರುತ್ತದೆ. ಈ ಅಂಶವನ್ನು ಆಶಾ ಗಾಂಧಿ ವ್ಯಕ್ತಿತ್ವದ ಮೂಲಕ ವಿಶ್ಲೇಷಿಸುತ್ತಾರೆ. 'ನಾನು ಅರ್ಧಹೆಣ್ಣು ಎಂದ ಗಾಂಧೀಜಿ' ಶೀರ್ಷಿಕೆಯಲ್ಲಿ ಆಶಾ ಅವರು ಗಂಡಿನಲ್ಲಿ ಮಹಿಳಾಪರ ಧೋರಣೆಗಳನ್ನು ಗುರುತಿಸುತ್ತಾರೆ. ಯಾವುದೇ ಪುರುಷನು ಪುರುಷ ಪ್ರಧಾನ ವ್ಯವಸ್ಥೆಯ ಪ್ರತಿನಿಧಿ ಎಂಬುದನ್ನು ಮೀರಿಕೊಂಡಾಗ ಮಾತ್ರ ಮಹಿಳೆಯನ್ನು ಕುರಿತು ಸಮಾನತೆಯನ್ನು ಬಯಸಲು ಸಾಧ್ಯ. ಗಾಂಧೀ ಕೆಲವು ಸಾರಿ ಪುರುಷ ಪ್ರಧಾನ ಸಮಾಜದ ಪ್ರತಿನಿಧಿಯಾಗಿ ವರ್ತಿಸಿದರೂ ಮಹಿಳೆಯನ್ನು ಕುರಿತು ಸಮಾನತೆಯನ್ನು ಆಶಿಸುತ್ತಾರೆ. ಕೆಲವು ಸಾರಿ ಮಹಿಳೆಯ ಸಹಜ ವ್ಯಕ್ತಿತ್ವ ವಿಕಸನಕ್ಕೆ ಒತ್ತು ಕೊಡುತ್ತಾರೆ. ಈ ಮೂಲಕ ಆಶಾ ಅವರು ಪುರುಷರಲ್ಲಿಯೂ ಸ್ತ್ರೀತ್ವವು ಇರುವುದನ್ನು ಗುರುತಿಸುತ್ತಾರೆ.

ಈ ಮುಖಾಂತರ ಮಹಿಳೆಯ ಚಹರೆಯನ್ನು ಕಟ್ಟುವ, ಸ್ತ್ರೀ ಸಂಕಥನವನ್ನು, ಮಹಿಳೆಯ ಹೋರಾಟದ, ಪ್ರತಿರೋಧದ ಆಯಾಮಗಳನ್ನು ಗುರುತಿಸುವ, ಮಹಿಳಾ ಸಾಹಿತ್ಯದ ಉದ್ದೇಶವನ್ನು ಮುನ್ನೆಲೆಗೆ ತರುವ, ಮಹಿಳಾ ಭಾಷೆಯನ್ನು ಗುರುತಿಸುವ, ವಿವಿಧ ಲೇಖಕರು ಮಹಿಳೆಯ ಬಗ್ಗೆ ತಾಳಿರುವ ಧೋರಣೆಗಳನ್ನು ಚರ್ಚಿಸುವ ವಾಗ್ವಾದಕ್ಕೆ ಒಳಪಡಿಸುವ ಪ್ರಯತ್ನ ಮಾಡುತ್ತಾರೆ. ಸಾಹಿತ್ಯ ಕೃತಿಗಳಲ್ಲಿ ಮಹಿಳಾ ಪಾತ್ರಗಳನ್ನು ವಿಭಿನ್ನ ದೃಷ್ಟಿಕೋನದಲ್ಲಿ ಗುರುತಿಸುವ ಮೂಲಕ ಅವರ ಉದ್ದೇಶಗಳು ಮಾರ್ಮಿಕವಾಗಿ ಧ್ವನಿಪೂರ್ಣವಾಗಿ ಅವರ ಶೀರ್ಷಿಕೆಗಳಲ್ಲಿ ವ್ಯಕ್ತವಾಗಿದೆ.

ಒಟ್ಟಾರೆ ಸಾಹಿತ್ಯವನ್ನು ನೋಡುವ ವಿಭಿನ್ನ ಕ್ರಮವನ್ನು ಆಶಾದೇವಿಯವರು ಕಟ್ಟಿಕೊಡುತ್ತಾರೆ. ಇದರಿಂದ ಸಮಕಾಲೀನ ಸಮಾಜದಲ್ಲಿ ಬೆಳೆಯುತ್ತಿರುವ ಸ್ತ್ರೀವಾದವನ್ನು ವಿಸ್ತರಿಸುವುದು, ಸ್ತ್ರೀವಾದದ ಬಗ್ಗೆ ಇರುವ ಸೀಮಿತ ಗ್ರಹಿಕೆಯನ್ನು ಬದಲಿಸುವುದು ಅವರ ಚಿಂತನೆಯ ಕಳಕಳಿಯಾಗಿದೆ. ಸ್ತ್ರೀವಾದವನ್ನು ಬೆಳೆಸಲು ಹಲವಾರು ಕವಿಗಳ ಕೃತಿಗಳನ್ನು ವಾಗ್ವಾದಕ್ಕೆ ಮತ್ತು ತೌಲನಿಕತೆಗೆ ಅವರು ಒಳಪಡಿಸುತ್ತಾರೆ. ಸಾಹಿತ್ಯದ ಜೊತೆಗೆ ಚಿತ್ರಕಲೆ, ಸಂಗೀತ, ನಾಟಕ ಇನ್ನು ಮುಂತಾದ ಪ್ರಕಾರಗಳಿಂದ ಉದಾಹರಣೆಯನ್ನು ಕೊಟ್ಟು ಚರ್ಚೆಯನ್ನು ಆಳಕ್ಕೆ ಎಳೆದೊಯ್ಯುತ್ತಾರೆ. ಇದು ಇವರ ಚಿಂತನೆಯಲ್ಲಿರುವ ಬಹುಶಿಸ್ತೀಯ ಗುಣವನ್ನು ಸೂಚಿಸುತ್ತದೆ. ಅವರು ಲೇಖನಗಳಿಗೆ ಕೊಡುವ ಶೀರ್ಷಿಕೆಗಳು ಅವರ ಪ್ರತಿಭಟನೆ ಮತ್ತು ಆಕ್ರೋಶವನ್ನು ಸೂಚಿಸುತ್ತವೆ. ಇನ್ನು ಕೆಲವು ಶೀರ್ಷಿಕೆಗಳು ಮಹಿಳೆಯ ಚಹರೆಯನ್ನು, ಹೊಸ ಹೆಣ್ಣಿನ ರಚನೆಯನ್ನು, ಮಹಿಳಾ ಅಸ್ಮಿತೆಯನ್ನು ಗುರುತಿಸುತ್ತವೆ. ಮತ್ತೆ ಕೆಲವು ತಲೆಬರಹಗಳು ಸಾಹಿತ್ಯದ ಮರುಓದಿಗೆ ಒತ್ತಾಯಿಸುತ್ತವೆ. ಮಹಿಳಾ ಕಾವ್ಯದ ಮತ್ತು ಮಹಿಳಾ ಭಾಷೆಯ ಸ್ವರೂಪವನ್ನು ಅದರ ಹಿಂದಿರುವ ಸಾಮಾಜಿಕ ಒತ್ತಡವನ್ನು ತಿಳಿಸುತ್ತವೆ. ಈ ಮೂಲಕ ಮಹಿಳೆಯರು ಪ್ರತಿರೋಧ ವ್ಯಕ್ತಪಡಿಸಲು, ತಮ್ಮನ್ನು ಮರು ರಚಿಸಿಕೊಳ್ಳಲು ಕಟ್ಟಿಕೊಂಡಿರುವ ಮಾರ್ಗಗಳನ್ನು ಪರಂಪರೆಯ ಮೂಲಕ ಚಿಂತಕಿ ಶೋಧಿಸುತ್ತಾರೆ. ಪರಂಪರೆ ಎನ್ನುವುದನ್ನು ನಾವು ಎರಡು ರೀತಿಯಲ್ಲಿ ನೋಡಬಹುದು. ಒಂದು, ತಮ್ಮ ಸ್ವಂತವನ್ನು ಹುಡುಕಿಕೊಳ್ಳುವುದಕ್ಕೆ ಗುದ್ದಾಡುತ್ತಿರುವ ಪರಂಪರೆ. ಎರಡು, ಈಗಾಗಲೇ ಮಹಿಳಾಪರವಾಗಿ ಹೋರಾಟದ ಹಾದಿಗೆ ನಿರ್ಮಾಣವಾಗಿರುವ ಪರಂಪರೆ. ಅಂದರೆ ಈ ಎರಡು ಪರಂಪರೆಗಳನ್ನು ಆಶಾ ಶೋಧಿಸುತ್ತಾರೆ. ಈ

ಎರಡು ಕೆಲಸಗಳನ್ನು ಒಟ್ಟಿಗೆ ಮಾಡುತ್ತಾರೆ. ತನ್ನ ಸ್ವಂತಿಕೆಯನ್ನು ಅಭಿವ್ಯಕ್ತಿ ಮಾಡಲು ಬೇಕಾಗಿರುವಂತಹ ಮಾರ್ಗವನ್ನು ಭಕ್ತಿ ಕವಿಗಳಾದ ಅಕ್ಕಮಹಾದೇವಿ, ಆಂಡಾಳ್, ಮುಂತಾದವರು ಈಗಾಗಲೆ ಹುಟ್ಟುಹಾಕಿದ್ದಾರೆ. ಆದರೆ ಅಂತಹ ಮಾರ್ಗವನ್ನು ಶೋಧನೆ ಮಾಡುವುದಕ್ಕೆ, ಕಂಡುಕೊಳ್ಳುವುದಕ್ಕೆ ಪುರುಷ ಸಂಸ್ಕೃತಿಯ ಪರಂಪರೆ ಜೊತೆಗೆ ಗುದ್ದಾಟ ಕೂಡ ಈ ಮಹಿಳೆಯರು ಮಾಡುತ್ತಾರೆ. ಅನೇಕ ಮಹಿಳೆಯರು ತಮ್ಮ ಹೋರಾಟದ ಮಾರ್ಗವನ್ನು ಮಾತ್ರ ಸೃಷ್ಟಿಸಿಕೊಂಡಿಲ್ಲ. ಗಂಡಸರ ಭಾಷೆಯನ್ನು ಬಳಸುವ ಮೂಲಕ ಅವರ ದಬ್ಬಾಳಿಕೆಯನ್ನು, ಅವರ ಮೌಲ್ಯಗಳನ್ನು ಒಪ್ಪಿ ಅಂತಹ ಮಾರ್ಗವನ್ನು ಕೂಡ ಮುಚ್ಚಿ ಹಾಕಿದ್ದಾರೆ. ಇದರಿಂದ ಆಶಾ ಅವರು ಈ ಹೋರಾಟದ ದಾರಿಯ ಬಗ್ಗೆ ಹೇಳುತ್ತಾ, ಇದೊಂದೇ ದಾರಿ ನಮ್ಮದಲ್ಲ ಎಂದು ಸಹ ಹೇಳುತ್ತಾರೆ. ಅಕ್ಕಮಹಾದೇವಿಯನ್ನು ಕುರಿತು ಇದು ನನ್ನ ಹಾದಿ ಎಂದು ಹೇಳಿದರೆ, ಸಂಚಿ ಹೊನ್ನಮ್ಮ ಬಂದಾಗ ಇದು ನನ್ನ ಹಾದಿ ಅಲ್ಲ ಎಂದು ಹೇಳುತ್ತಾರೆ.

ಆಶಾದೇವಿ ಅವರು ಸಂಘರ್ಷಮುಖಿಯಾದ ಸ್ತ್ರೀ ಸಂಸ್ಕೃತಿಯ ಪರಂಪರೆಯನ್ನು ಶೋಧಿಸುತ್ತಾರೆ, ಆಯ್ಕೆಯ ಆದ್ಯತೆಯ ಮೂಲಕ ಪರಂಪರೆಯನ್ನು ಕಟ್ಟಲು ಪ್ರಯತ್ನಿಸುತ್ತಾರೆ. ಅವರು ಸ್ತ್ರೀವಾದ ಕುರಿತು ಚರ್ಚಿಸುತ್ತ ಅದನ್ನು ಒಂದು ಸಿದ್ಧಾಂತವಾಗಿ ಬೆಳೆಸುವುದಕ್ಕೆ ಪ್ರಯತ್ನಪಡುತ್ತಾರೆ. ಅವರು ಶೈಕ್ಷಣಿಕವಾಗಿ ಬರೆಯುವ ಮೂಲಕ ಸ್ತ್ರೀವಾದವನ್ನು ವಿಸ್ತರಿಸುತ್ತಾರೆ. ಆ ಮೂಲಕ ಸಾಂಸ್ಕೃತಿಕ ಸ್ತ್ರೀವಾದವನ್ನು ವ್ಯಾಪಕವಾಗಿ ಚರ್ಚೆ ಮಾಡುತ್ತಾರೆ. ಇದರ ಒಂದು ಭಾಗವಾಗಿಯೇ ಪೌರಾಣಿಕ ಪರಂಪರೆಯ ಸೀತೆ, ದ್ರೌಪದಿಯ ಮೂಲಕ ಆದಿಮ ಸ್ತ್ರೀವಾದವನ್ನು ಆಧುನಿಕ ಸ್ತ್ರೀವಾದದ ಚೌಕಟ್ಟಿನಲ್ಲಿ ತರುವುದಕ್ಕೆ ಪ್ರಯತ್ನ ಪಡುತ್ತಾರೆ. ನಂತರ ಸ್ತ್ರೀವಾದವನ್ನು ಮರುನಿರೂಪಣೆ ಮಾಡುವುದಕ್ಕೂ ಪ್ರಯತ್ನಿಸುತ್ತಾರೆ. ಬೇರೆ-ಬೇರೆ ವಲಯಗಳಿಂದ ಸ್ತ್ರೀವಾದದ ಧಾರೆಗಳನ್ನು ತೆಗೆದುಕೊಂಡು ನೇಯ್ಗೆಯ ವಿನ್ಯಾಸವನ್ನು ಕಟ್ಟುವುದಕ್ಕೂ ಅವರು ಯತ್ನಿಸುತ್ತಾರೆ. ಅವರ ಬರಹದ ಭಾಷೆಯಲ್ಲಿ ಆಗಿರಬಹುದಾದ ಬದಲಾವಣೆಯನ್ನು ಇಲ್ಲಿ ಮುಖ್ಯವಾಗಿ ಗುರುತಿಸಬೇಕು. 'ಸ್ತ್ರೀಮತವನುತ್ತರಿಸಲಾಗದೆ?', 'ನಡುವೆ ಸುಳಿವ ಆತ್ಮ' ಕೃತಿಯ ಬರಹಗಳಿಗೂ 'ನಾರೀಕೇಳಾ'ದ ಬರಹಗಳಿಗೂ ಭಾಷೆಯಲ್ಲಾಗಿರುವ ವ್ಯತ್ಯಾಸ ಅವರ ಅಭಿವ್ಯಕ್ತಿ ವಿಧಾನದಲ್ಲಾಗಿರುವ ಪಲ್ಲಟವೂ ಹೌದು. ಚಿಂತನೆಯನ್ನು ಹೆಚ್ಚು ಜನರಿಗೆ ತಲುಪಿಸಬೇಕು ಅನ್ನುವುದರಲ್ಲಿ ಅವರಿಗಿರುವ ಆಸಕ್ತಿಯ ಫಲವಿದು.

ಆಶಾ ಅವರ ಅಭಿವ್ಯಕ್ತಿ ವಿಧಾನದಲ್ಲಿ ಮುಖ್ಯವಾಗಿ ಗಮನಿಸಬಹುದಾದ ಅಂಶ ಎಂದರೆ, ಮಹಿಳಾ ಹೋರಾಟವನ್ನು ಕುರಿತಂತೆ ಮತ್ತಷ್ಟು ಸ್ಪಷ್ಟಪಡಿಸುತ್ತಲೇ ಹೋಗುವುದು. ಮಹಿಳೆಯು ಮಾಡುವ ಹೋರಾಟ ವರ್ಗೀಕೃತವಾದ ಹೋರಾಟ ಅಲ್ಲ. ಇದು ಹೆಣ್ಣಿನ ಪರವಾಗಿ ನಡೆಯುತ್ತಿರುವ ಹೋರಾಟ. ಅದು ಗಂಡಿನ ವಿರುದ್ಧವಾಗಿ ನಡೆಯುತ್ತಿರುವ ಹೋರಾಟ ಅಲ್ಲ. ಇದು ಗಂಡು ಮತ್ತು ಹೆಣ್ಣು ಇಬ್ಬರು ಸೇರಿ ಕಟ್ಟಬಹುದಾದ ಸಮಾನ ಗೌರವದ, ಸಮಾನ ನೆಲೆಯ, ಸಮಾನ ಪ್ರೀತಿಯ, ಸಮಾನ ಆದ್ಯತೆಯ, ಸಮಾನ ಅವಕಾಶ. ಎಲ್ಲರೂ ಸೇರಿ ಕಟ್ಟಬಹುದಾದ ಒಂದು ಮಾರ್ಗ ಎಂಬುದನ್ನು ಅವರು 'ನಾರೀಕೇಳಾ'ದ ಮೂಲಕ ಹೇಳುತ್ತಾರೆ. ಈ ಹೋರಾಟ ಬದುಕಿನ ಕ್ರಮವನ್ನು ಕಟ್ಟುವುದಕ್ಕೆ ನಡೆಸುತ್ತಿರುವ ಹೋರಾಟವಾಗಿದೆ. ಮಹಿಳೆ ಈ ಹೋರಾಟದ ಮೂಲಕ ಸಮಾಜಕ್ಕೆ ಎಷ್ಟು ಮುಖಾಮುಖಿ ಆಗುತ್ತಾಳೆಯೋ, ಅಷ್ಟನ್ನು ತನ್ನ ಒಳಗೂ ಮುಖಾಮುಖಿ ಮಾಡಿಕೊಳ್ಳುತ್ತಿದ್ದಾಳೆ.

ಇದರಿಂದ ತಮಗೆ ತಾವೇ ಹಾಕಿಕೊಂಡಿರುವ ಬಿಕ್ಕಟ್ಟುಗಳಿಂದ ಹೊರಬರುವುದಕ್ಕೆ ಮಾಡುತ್ತಿರುವ, ಮಾಡಬೇಕಾಗಿರುವ ಹೋರಾಟದ ಹಾದಿ ಕಠಿಣತೆಯಿಂದ ಕೂಡಿದೆ. ಅದು ಲೋಕದ ಜೊತೆಯಲ್ಲಿ ನಡೆಸುವ ವಾಗ್ವಾದದ ಪ್ರಯತ್ನಕ್ಕಿಂತ ತುಂಬಾ ಕಷ್ಟದ್ದು. ಅಂದರೆ ತನ್ನ ಜೊತೆಯಲ್ಲಿ ತಾನೇ ಹೋರಾಟ ಮಾಡಬೇಕು. ಇದು ತುಂಬಾ ಕಷ್ಟದ್ದು. ಈ ಒಂದು ಹಾದಿಯಲ್ಲಿ ನಮ್ಮ ಸಮಾಜದ ಅನೇಕ ಮಹಿಳೆಯರಿದ್ದಾರೆ. ಹೋರಾಟದ ಮೂಲಕ ತಮ್ಮ ಬಂಧನವನ್ನು ಧಿಕ್ಕರಿಸಿ ಬರಬೇಕೆಂದರೆ ಮೊದಲು ಸ್ವಬಂಧನದಿಂದ ಹೊರಬರಬೇಕು. ಈ ಹೋರಾಟದ ಹಾದಿಯಲ್ಲಿ ನಾಲ್ಕು ಜನ ಮುಂದೆ ಇರಬಹುದು, ನಾಲ್ಕು ಜನ ಹಿಂದಿರಬಹುದು. ಆದ್ದರಿಂದ ಮಹಿಳೆ ತಾನು ಬಿಡುಗಡೆ ಪಡೆಯಲು, ಹೋರಾಟ ಮಾಡಲು ಒಳದಾರಿಯನ್ನು ಬಳಸಿಕೊಳ್ಳುತ್ತಾಳೆ. ಮಹಿಳೆಯು ಬಳಸುವ ಈ ಒಳದಾರಿಯನ್ನು ಅಧಿಕೃತ ದಾರಿಯೆಂದು ಆಶಾ ಅವರು ಕರೆಯುತ್ತಾರೆ. ಈ ಒಳದಾರಿಯನ್ನು ಅಧಿಕೃತ ದಾರಿ ಮಾಡಿಕೊಳ್ಳಬೇಕಾದ ಅನಿವಾರ್ಯತೆಯಲ್ಲಿ ಈ ಮೌಲ್ಯವ್ಯವಸ್ಥೆ ಹೆಣ್ಣನ್ನು ಇಟ್ಟಿದೆ ಎಂಬುದನ್ನು ತಮ್ಮ ಚಿಂತನೆಯ ಮೂಲಕ ಅವರು ಸಾಬೀತುಪಡಿಸುತ್ತಾರೆ.

### ೮.೪. ರೂಪಕಗಳ ಚರ್ಚೆ

ಆಶಾದೇವಿಯವರು ತಮ್ಮ ಸ್ತ್ರೀವಾದಿ ಚರ್ಚೆಯಲ್ಲಿ ಪ್ರಾಸಂಗಿಕವಾದ ನೆಲೆಯಲ್ಲಿ ಹಲವಾರು ರೂಪಕಗಳನ್ನು, ಪ್ರತಿಮೆಗಳನ್ನು, ಸಂಕೇತಗಳನ್ನು, ಪರಿಕಲ್ಪನೆಗಳನ್ನು ಚರ್ಚೆಗೆ ಬಳಸುತ್ತಾರೆ. ಅಂದರೆ ಇವರು ಕೊಡುವ ಲೇಖನಗಳ ಶೀರ್ಷಿಕೆಗಳಲ್ಲಿಯೇ ರೂಪಕಗಳು ಕಂಡುಬರುತ್ತದೆ. ಮತ್ತೆ ಕೆಲವೊಂದು ಚರ್ಚೆಗಳ ಒಳಗಡೆ ಕೂಡ ಬಳಕೆಯಾಗಿವೆ. ತಮ್ಮ ಚರ್ಚೆಯನ್ನು ಆಳವಾದ ವಿಶ್ಲೇಷಣೆಗೆ ಒಯ್ಯಲು ರೂಪಕಗಳನ್ನು ಬಳಸುತ್ತಾರೆ. ರೂಪಕಗಳನ್ನು ಬಳಸುವ ಉದ್ದೇಶ ಹೇಳಬೇಕೆಂದಿರುವ ವಿಷಯವನ್ನು ಪ್ರಖರವಾದ ನೆಲೆಯಲ್ಲಿ ಹೇಳುವುದು ಮತ್ತು ಅದನ್ನು ಓದುಗರಿಗೆ ತೀವ್ರವಾದ ರೀತಿಯಲ್ಲಿ ತಲುಪಿಸುವುದು. ಎರಡು ವಸ್ತುಗಳ ನಡುವೆ ಸಾದೃಶ್ಯಗಳನ್ನು ಹೇಳುವಾಗ ಎರಡು ವಸ್ತುಗಳು ಸಮಾನ ನೆಲೆಯಲ್ಲಿ ಇದೆ ಎನ್ನುವುದನ್ನು ಕೂಡ ಹೇಳಲು ಅವರು ಇವನ್ನು ಬಳಸುತ್ತಾರೆ. ಎರಡು ವಸ್ತುಗಳು ಅಥವಾ ವಿಷಯಗಳು ಒಂದೇ ಅವೆರಡು ಅಭಿನ್ನ ಎಂದು ಸೂಚಿಸಲು ರೂಪಕಗಳು ಹೆಚ್ಚು-ಹೆಚ್ಚು ಬಳಕೆಯಾಗುತ್ತವೆ.

ಆಶಾ ಅವರು ಬಳಸುವ ರೂಪಕಗಳಲ್ಲಿ ಹೆಣ್ಣನ್ನು ಅಗ್ನಿಗೆ ಹೋಲಿಸುವುದುಒಂದು. ಅಗ್ನಿ ಮತ್ತು ಹೆಣ್ಣಿಗೆ ಇರುವ ಅಂತರ್ ಸಂಬಂಧವನ್ನು, ಸಾದೃಶ್ಯನೆಲೆಯನ್ನು ಈ ಮೂಲಕ ಅವರು ತಿಳಿಸುತ್ತಾರೆ. ಅಗ್ನಿರುವಂತೆ ಮಹಿಳೆಗೆ ಇತ್ಯಾತ್ಮಕ ನೇತ್ಯಾತ್ಮಕ ಶಕ್ತಿ ಸಾಮರ್ಥ್ಯಗಳಿವೆ ಎಂದು ಹೇಳಲು ಈ ರೂಪಕ ಹುಟ್ಟಿದೆ. ಹೆಣ್ಣನ್ನು ಕೆಣಕಿದರೆ ಅಗ್ನಿಯಂತೆ ಸಿಡಿದೇಳುತ್ತಾಳೆ. ಎಲ್ಲವನ್ನು ಆತ್ಮಾಹುತಿ ತೆಗೆದುಕೊಳ್ಳುತ್ತಾಳೆ ಎಂದು ದೋಪ್ದಿ ಎಂಬ ಮಹಿಳೆಯ ಶಕ್ತಿ ಸಾಧ್ಯತೆಗಳೆರಡನ್ನು ಇಲ್ಲಿ ಚರ್ಚಿಸಿದ್ದಾರೆ. 'ಇನ್ನು ಹೆಣ್ಣು ಮತ್ತು ಹಿಂಸೆ', ಹೆಣ್ಣು ಮತ್ತು ಮೌನ' ಶೀರ್ಷಿಕೆಗಳಲ್ಲಿ ಹೆಣ್ಣಿಗೂ ಹಿಂಸೆಗೂ ಮೌನಕ್ಕೂ ಇರಬಹುದಾದ ಸಂಬಂಧದ ಚಿಂತಿನೆಯಿದೆ. ಹೆಣ್ಣೇ ಹಿಂಸೆಯ ಪ್ರಧಾನ ನೆಲೆಯಾಗಿದ್ದಾಳೆ. ಹೀಗಾಗಿ ಹಿಂಸೆಗೂ ಮತ್ತು ಹೆಣ್ಣಿಗೂ ಬಿಡಿಸಲಾರದ ನಂಟು ಇದೆ. ಹೆಣ್ಣೇ ಮೌನವಾಗಿದ್ದಾಳೆ. ಹೆಣ್ಣು ಹಿಂಸೆ ಮತ್ತು ಮೌನ ಈ ಮೂರೂ ಬಿಂದುಗಳಿಗೆ ಒಳಸಂಬಂಧವಿದೆ. ಇಲ್ಲಿ ಮೌನದ ಪ್ರತಿರೂಪಕವೇ ಹೆಣ್ಣಾಗಿದ್ದಾಳೆ.

ಹಿಂಸೆಯನ್ನು ಬಿಟ್ಟು ಮಹಿಳೆಯನ್ನು ಗುರುತಿಸಲು ಸಾಧ್ಯವೇ ಇಲ್ಲ ಎನ್ನುವ ಮಟ್ಟಿಗೆ ಹಿಂಸೆಗೂ ಮಹಿಳೆಗೂ ಸಂಬಂಧವಿದೆ. ಈ ಸಂಬಂಧ ವಿವೇಚನೆಯಲ್ಲಿ ಅವರ ರೂಪಕಗಳು ಹುಟ್ಟುತ್ತವೆ.

ಚರ್ಚೆಗೆ ಒಂದು ತಾತ್ವಿಕವಾದ ತಳಹದಿಯನ್ನು ಕೊಡುವ ಭಾಗವಾಗಿ ಇಲ್ಲಿ ರೂಪಕಗಳು ಬಳಕೆಯಾಗಿವೆ. ಮಹಿಳೆಯ ಅಸ್ತಿತ್ವದ ನಿಯಂತ್ರಣದ ನೆಲೆಯನ್ನು ಹೇಳುವಾಗ ಆಶಾ ಅವರು 'ಬೋನ್ಸಾಯ್' ಮರವನ್ನು ಇಲ್ಲಿ ಮಹಿಳೆಗೆ ಹೋಲಿಸಿದ್ದಾರೆ. ಬೋನ್ಸಾಯ್ ಮರವು ದಿನೇ-ದಿನೇ ಬೆಳೆಯುತ್ತಿರುತ್ತದೆ. ಆದರೆ ಬೆಳವಣಿಗೆಗೆ ಮಿತಿಯಿದೆ. ಮರವು ಚೆಂದ ಕಾಣಲೆಂದು ಅಲಂಕಾರದ ನೆಪದಲ್ಲಿ ಅದರ ಬೆಳವಣಿಗೆಯನ್ನು ಕುಂಠಿತಗೊಳಿಸಲಾಗುತ್ತದೆ. ಆದ್ದರಿಂದ ಮಹಿಳೆ ಮತ್ತು ಮರಕ್ಕೆ ಇರುವ ಬೆಳೆಯುವ ಚೈತನ್ಯಶಕ್ತಿಯು, ಸ್ಥಾಪಿತ ಹಿತಾಸಕ್ತಿಗಳಿಂದ ಹೇಗೆ ನಾಶವಾಗುತ್ತದೆ ಎಂದು ಅವರು ಗುರುತಿಸುತ್ತಾರೆ. ಮರದ ಬೆಳವಣಿಗೆಯನ್ನು ಪುರುಷನು ತನ್ನಪೇಕ್ಷೆಗೆ ತಕ್ಕಂತೆ ಕತ್ತರಿಸುವಂತೆ ಮಹಿಳೆಯ ವ್ಯಕ್ತಿತ್ವವನ್ನು, ಸ್ವಾತಂತ್ರವನ್ನು ನಿಯಂತಿಸಲಾಗುತ್ತದೆ. ಇಲ್ಲಿ ಬೋನ್ಸಾಯ್ ಮರ ಮತ್ತು ಪುರುಷ ಸಂಸ್ಕೃತಿಯ ಕುಟುಂಬ ವ್ಯವಸ್ಥೆಯಲ್ಲಿರುವ ಮಹಿಳೆಯನ್ನು ಏಕೀಭವಿಸುತ್ತಾರೆ. ಆದರೆ ನಿಜವಾದ ಮರ ಕತ್ತರಿಸಿದಷ್ಟು ತನ್ನ ಬೆಳವಣಿಗೆಯನ್ನು ಮುಂದುವರೆಸುತ್ತದೆ. ಅದೇ ರೀತಿ ಮಹಿಳೆ ಅಸ್ಮಿತೆಯನ್ನು ನಾಶಪಡಿಸಿದಂತೆ ಪರ್ಯಾಯ, ತಂತ್ರ ಮಾದರಿಗಳ ಮೂಲಕ ಮತ್ತೆ ತನ್ನ ಬದುಕನ್ನು ಆಕೆ ಕಟ್ಟಿಕೊಳ್ಳುತ್ತಾಳೆ. ಮಹಿಳೆಯ ಹೋರಾಟ ಪ್ರತಿರೋಧಗಳ ಚಲನೆಗಳಿಗೆ ಕೊನೆ ಇಲ್ಲ ಎಂಬುದನ್ನು ಈ ಮೂಲಕ ಚಿಂತಕಿ ಗುರುತಿಸುತ್ತಾರೆ.

'ಬಹುರತ್ನಾ ವಸುಂಧರ' ಎಂಬ ಲೇಖನದಲ್ಲಿ ಆಶಾದೇವಿ ಮಲ್ಲಿಗೆಯನ್ನು ಮಹಿಳೆಯ ವ್ಯಕ್ತಿತ್ವಕ್ಕೆ ಹೋಲಿಸಿದ್ದಾರೆ. ಅಂದರೆ ಮಲ್ಲಿಗೆಗೆ ಅಪ್ರತಿಮ ಸೌಂದರ್ಯ, ಸುಗಂಧ ಇರುವಂತೆ ಮಹಿಳೆಗಿರುವ ಅಪ್ರತಿಮ ವ್ಯಕ್ತಿತ್ವ ಅನ್ಯತೆ ಇರುತ್ತದೆ ಎಂದು ಹೋಲಿಕೆಯ ಮೂಲಕ ಗುರುತಿಸುತ್ತಾರೆ. ಮಲ್ಲಿಗೆಗೆ ಮೂರು ತಾಸಿನ ಕಾಲ ಅವಧಿ ಮಾತ್ರ, ಅನಂತರ ಅದು ತನ್ನ ವಾಸನೆ ಮತ್ತು ಸೌಂದರ್ಯದ ಮಿತಿಯನ್ನು ಕಳೆದುಕೊಂಡು ಬಿಡುತ್ತದೆ. ಆದರೆ ಅದು ಮಲ್ಲಿಗೆಯ ದೌರ್ಬಲ್ಯವಲ್ಲ. ಅದೇ ಅದರ ವಿಶಿಷ್ಟತೆ ಎಂದು ಹೇಳುತ್ತಾರೆ. ಈ ಸುಗಂಧದ ಸಾಧ್ಯತೆ, ವಿಶಿಷ್ಟತೆಗಳು ಮೂರು ಗಂಟೆ ಇದ್ದರೂ ಯಾರಿಗೂ ದಕ್ಕದ ಶಕ್ತಿ ವಿಶೇಷತೆಯಿಂದ ಕೂಡಿದೆ. ಹೀಗೆಯೇ ಮಲ್ಲಿಗೆಗೆ ಇರುವ ಈ ಸುಗಂಧವು ಎಷ್ಟೇ ಅಪರಿಮಿತವಾದದ್ದೊ, ಆಳವಾದದ್ದೊ, ಅದು ಅವಳ ಆತ್ಮದ ಪರಿಮಳವಾಗಿ, ಆ ಸೌಂದರ್ಯವು ಅವಳ ಘನತೆಯ ಪರಿಮಳವಾಗಿ ಚೆಲುವಾಗಿ ಅರಳುತ್ತದೆ ಎಂದು ಆಶಾ ಅವರು ಹೆಣ್ಣಿಗೂ ಮಲ್ಲಿಗೆಗೂ ಇರುವ ಸಾಮ್ಯತೆಯ ನೆಲೆಯಲ್ಲಿ ಚರ್ಚಿಸುತ್ತಾರೆ. ಆದರೆ ಮಲ್ಲಿಗೆಯ ಕೋಮಲತೆ ಹೆಣ್ಣಿನ ದೌರ್ಬಲ್ಯದ ಪ್ರತೀಕವೆಂದು ಚಿಂತಕಿ ಒಪ್ಪುವುದಿಲ್ಲ.

ಆಶಾದೇವಿಯವರು ಭಕ್ತಿಯನ್ನು ಬಂಡಾಯಕ್ಕೆ ಹೋಲಿಸಿದ್ದಾರೆ. ಮಹಿಳೆಗೆ ಭಕ್ತಿ ಎನ್ನುವುದು ಬಂಡಾಯದ ರೂಪಕ ಎಂದು ಹೇಳುತ್ತಾರೆ. ಅದಕ್ಕೆ ಸಾಕಷ್ಟು ಪುರಾವೆಗಳನ್ನು ಒದಗಿಸುತ್ತಾರೆ. ಮಹಿಳೆಯ ಮಟ್ಟಿಗೆ ಭಕ್ತಿಯೇ ಬಂಡಾಯ ಮತ್ತು ಬಂಡಾಯವೇ ಭಕ್ತಿ. ಮಹಿಳೆ ಭಕ್ತಿಯನ್ನು ಒಂದು ಸಾಧನವಾಗಿ ಮಾಡಿಕೊಂಡು ಹೋರಾಟ ಮಾಡಿದ್ದಾರೆ ಎಂದು ಚಾರಿತ್ರಿಕವಾಗಿ ಆಶಾದೇವಿ ಗುರುತಿಸುತ್ತಾರೆ. ಆದ್ದರಿಂದ ಭಕ್ತಿಗೂ ಬಂಡಾಯಕ್ಕೆ ಅವಿನಾಭಾವ ಸಂಬಂಧವಿದೆ. ಹಾಗೆಯೇ ಭಕ್ತಿ

ಎನ್ನುವುದು ಬಂಡಾಯ ಮಾಡಲು ಮಹಿಳೆಯರಿಗೆ ಎಷ್ಟು ಅಗತ್ಯತೆ, ತುರ್ತು, ಅನಿವಾರ್ಯತೆಯಿಂದ ಕೂಡಿದೆ ಎಂಬುದು ಇದರಿಂದ ತಿಳಿಯುತ್ತದೆ. ಮಹಿಳೆಯರಿಗಿರುವ ಹೋರಾಟದ ಹಾದಿಗಳ ಸವಾಲುಗಳು ಎಷ್ಟು ದುರ್ಗಮವಾದವಾಗಿವೆ ಎಂಬುದು ಕೂಡ ಸ್ಪಷ್ಟವಾಗುತ್ತದೆ. ಆಶಾ ಅವರು ಭಕ್ತಿ ಮತ್ತು ಬಂಡಾಯ ಮಹಿಳೆಯ ಮಟ್ಟಿಗೆ ಅಡಗುತಾಣದ ರೂಪಕ ಎಂದು ಗುರುತಿಸುತ್ತಾರೆ. ಆದ್ದರಿಂದ ಈ ರೂಪಕಗಳನ್ನು ಮಹಿಳೆಯ ಹೋರಾಟ, ವ್ಯಕ್ತಿತ್ವ, ಅಸ್ತಿತ್ವದ ಎಲ್ಲಾ ನೆಲೆಗಳಲ್ಲಿ ಗುರುತಿಸುತ್ತಾರೆ. ಪುರುಷನಿಗೆ ರೂಪಕಗಳ ಬಳಕೆ ಆತನ ಪ್ರತಿಭೆಯ ಸಂಕೇತವಾದರೆ, ಮಹಿಳೆಗೆ ಅಗತ್ಯ ಮತ್ತು ಅನಿವಾರ್ಯವಾದ ಅಡಗುತಾಣ ಎಂದು ಹೇಳುತ್ತಾರೆ. ಹೀಗೆ ಆಶಾ ಸ್ತ್ರೀವಾದಿ ಚರ್ಚೆಯ ನಿರಂತರ ಪಯಣದಲ್ಲಿ ಮಹಿಳೆಯು ತನ್ನ ಹೋರಾಟಕ್ಕೆ ಅಸ್ಮಿತೆಯ ಹುಡುಕಾಟಕ್ಕೆ ಸೃಷ್ಟಿಸಿರುವ ರೂಪಕಗಳ ವಿನ್ಯಾಸಗಳನ್ನು ಗುರುತಿಸುತ್ತಾರೆ. ಸ್ತ್ರೀವಾದದ ಚರ್ಚೆಯನ್ನು ವಿಸ್ತರಿಸಲು ರೂಪಕಗಳನ್ನು ಪ್ರಖರವಾಗಿ ಬಳಸುತ್ತಾರೆ. ಹೀಗೆ ಇರುವ ಬಳಕೆಗೊಂಡ ರೂಪಕಗಳನ್ನು ಗುರುತಿಸುವ ಹಾಗೂ ಹೊಸ ರೂಪಕಗಳನ್ನು ಹುಟ್ಟುಹಾಕುವ ಎರಡೂ ನೆಲೆಯ ಕೆಲಸವನ್ನು ಅವರು ಸಮರ್ಥವಾಗಿ ಮಾಡುತ್ತಾರೆ.

**ಕೊನೆ ಟಿಪ್ಪಣಿ**

೧. ನಾಗಭೂಷಣ ಸ್ವಾಮಿ ಓ.ಎಲ್., ವಿಮರ್ಶೆಯ ಪರಿಭಾಷೆ, ಪು. ೨೪

*****

# ಅಧ್ಯಾಯ-ಒಂಬತ್ತು

# ಸಮಾರೋಪ

## ೯.೧.ಸಮಾರೋಪ

ಕನ್ನಡದ ಸ್ತ್ರೀವಾದಿ ಚಿಂತನೆಯಲ್ಲಿ ಹಲವು ಮಾದರಿಗಳಿವೆ. ಅವುಗಳಲ್ಲಿ ಮುಖ್ಯವಾಗಿ ಮಾರ್ಕ್ಸ್‌ವಾದಿ ಸ್ತ್ರೀವಾದ, ಉದಾರವಾದಿ ಸ್ತ್ರೀವಾದ, ಕಪ್ಪುಸ್ತ್ರೀವಾದ, ತೀವ್ರಗಾಮಿ ಸ್ತ್ರೀವಾದ ಮುಂತಾಗಿ ಅವನ್ನು ಗುರುತಿಸಬಹುದು. ಆಶಾದೇವಿಯವರು ಈ ಯಾವುದೇ ಸ್ತ್ರೀವಾದಿ ಸಿದ್ಧಾಂತಗಳಿಗೆ ಒಳಪಡದೆ ತಮ್ಮದೇ ಆದ ವಿಭಿನ್ನ ಸ್ತ್ರೀವಾದವನ್ನು ರೂಪಿಸುತ್ತಾರೆ. ಬಹುತೇಕ ಸ್ತ್ರೀವಾದಿ ಸಿದ್ಧಾಂತಗಳು ಗಂಡು-ಹೆಣ್ಣನ್ನು ವಿರುದ್ಧ ನೆಲೆಯಲ್ಲಿ ನೋಡುತ್ತವೆ. ಮಹಿಳೆಯರನ್ನು ಈ ಪುರುಷ ಪ್ರಧಾನ ಸಮಾಜವು ಪ್ರತ್ಯಕ್ಷವಾಗಿ ತುಳಿಯುತ್ತದೆ ಎಂದು ಹೇಳುತ್ತವೆ. ಅದನ್ನು ಸಾಬೀತು ಪಡಿಸಲು ಹಲವಾರು ವಿಧಾನಗಳ ಮೂಲಕ ಪ್ರಯತ್ನಿಸುತ್ತವೆ. ಆದರೆ ಆಶಾ ಅವರು ಗಂಡು ಮತ್ತು ಹೆಣ್ಣನ್ನು ವಿರುದ್ಧ ನೆಲೆಯಲ್ಲಿ ನೋಡದೆ, ಗ್ರಹಿಸದೆ ಒಂದು ಹೋರಾಟದ ಮೂಲಕ ಸಮಾಜದಲ್ಲಿ ಬದಲಾವಣೆಯನ್ನು ತರಬೇಕಾದರೆ ಸ್ತ್ರೀಪುರುಷರಿಬ್ಬರು ಸೇರಬೇಕು ಎಂದು ಹೊಣೆಗಾರಿಕೆಯ ತಾತ್ವಿಕತೆಯನ್ನು ಪ್ರತಿಪಾದಿಸುತ್ತಾರೆ. ಇವರ ಚಿಂತನಾ ಬರಹಗಳು ಮಹಿಳಾ ಪ್ರತಿಭಟನೆಯ ಅಸ್ಮಿತೆಯ ಜೀವಂತಿಕೆಯ ಭಾಗವೇ ಆಗಿವೆ. ಮಹಿಳೆಯರ ಇಂದಿನ ಹಾಗೂ ಪರಂಪರೆಯ ಸ್ಥಿತಿ-ಗತಿಗಳನ್ನು, ಸ್ಥಾನ-ಮಾನಗಳನ್ನು ಬರಹದ ಮೂಲಕ ಆಳವಾದ ಚರ್ಚೆಗೆ ಇವರು ಎಳೆಯುತ್ತಾರೆ. ಸಾಹಿತ್ಯವನ್ನು ಸ್ತ್ರೀವಾದಿ ನೆಲೆಯಲ್ಲಿ ಮರುಓದಿಗೆ ಒಳಪಡಿಸುವ ಮತ್ತು ವಾಗ್ವಾದಕ್ಕೆ ಹಚ್ಚುವ ಶಕ್ತಿ ಇವರ ಬರವಣಿಗಯಲ್ಲಿದೆ. ಹಾಗೆಯೇ ತಮ್ಮ ಬರಹದ ಮೂಲಕ ಈಗಿರುವ ಸ್ತ್ರೀವಾದಿ ಚಿಂತನೆಯನ್ನು ಸಿದ್ಧಾಂತವನ್ನು ಒಡೆದು ಕಟ್ಟುವುದಕ್ಕಿಂತ ಅದನ್ನು ತಮ್ಮ ಸಾಹಿತ್ಯಕ ಸೂಕ್ಷ್ಮತೆಗಳ ಮೂಲಕ ಅರ್ಥಪೂರ್ಣವಾಗಿ ವಿಸ್ತರಿಸುತ್ತಾರೆ. ಸ್ತ್ರೀವಾದ ಎಂದರೆ, ಪುರುಷ ವಿರೋಧಿ ಗ್ರಹಿಕೆಯಲ್ಲ ಅದು ಲಿಂಗತಾರತಮ್ಯವನ್ನು ಕುರಿತ ಜಂಟಿ ಹೋರಾಟ ಎಂದು ತಮ್ಮ ಚಿಂತನೆಯ ಮೂಲಕ ರುಜುವಾತು ಪಡಿಸುತ್ತಾರೆ.

ಆಶಾ ಅವರ ಸ್ತ್ರೀವಾದವು ವ್ಯಕ್ತಿಗಳ ವ್ಯಕ್ತಿತ್ವದ ಸಹಜ ವಿಕಸನಕ್ಕೆ ಒತ್ತಾಯಿಸುತ್ತಾ ಸಾಮಾಜಿಕ ಸಮಾನತೆಯನ್ನು ಆಶಿಸುತ್ತದೆ. ಈ ನಿಟ್ಟಿನಲ್ಲಿ ಸ್ತ್ರೀಯಾತ್ಮಕ ಗುಣಗಳಿಗೆ ಒತ್ತು ನೀಡುತ್ತದೆ. ನಂತರ ಸಾಂಸ್ಕೃತಿಕ ಸ್ತ್ರೀವಾದವನ್ನು ಇವರ ಬರಣಿಗೆಯು ಒತ್ತಾಯಿಸುತ್ತದೆ. ಇವರ ವಿಮರ್ಶೆಯು ಒಟ್ಟಾರೆ ಮಹಿಳೆಗೆ ದೊರಕಬೇಕಾದ ಸಮಾನತೆಯ ಅವಕಾಶಗಳ ಕಡೆಗೆ ಒತ್ತನ್ನು ನೀಡುತ್ತದೆ. ಇವರು ಮಹಿಳೆಯನ್ನು ಮನುಷ್ಯತ್ವದ ನೆಲೆಯಲ್ಲಿ, ಮಾನವೀಯತೆಯ ನೆಲೆಯಲ್ಲಿ ನೋಡಬೇಕಾದ ಅವಕಾಶ ಆವರಣಗಳಿಗೆ ಪೂರಕವಾಗಿ ಸ್ತ್ರೀವಾದವನ್ನು ಕಟ್ಟುತ್ತಾರೆ. ಇವರ ಬರವಣಿಗೆಯು ಸ್ತ್ರೀವಾದಿ ಸಿದ್ಧಾಂತದ ತಾತ್ವಿಕ ಚೌಕಟ್ಟನ್ನು ವಿಮರ್ಶಿಸುತ್ತ ಹಿಗ್ಗಿಸುತ್ತದೆ. ಸ್ತ್ರೀವಾದಿ ವಿಮರ್ಶೆಯ ಹಲವು ನೆಲೆಗಳು ಪಾಶ್ಚಾತ್ಯ ಪ್ರೇರಣೆಯಿಂದ ಬಂದುದಾದರೂ ಇದನ್ನು ದೇಶೀ ನೆಲೆಯಲ್ಲಿ ಗ್ರಹಿಸುವ ಕ್ರಮ ಇವರ ಚಿಂತನೆಯಲ್ಲಿ ಕಂಡುಬರುತ್ತದೆ. ಸ್ತ್ರೀವಾದಿ ಚಿಂತನೆಯನ್ನು, ಸಿದ್ಧಾಂತವನ್ನು ಜ್ಞಾನಮೀಮಾಂಸೆ ಎಂದು ಕರೆಯುವ ಬದಲು ಅವರು ಲೋಕಮೀಮಾಂಸೆ ಎಂದು ಕರೆಯುತ್ತಾರೆ. ಆ ಮೂಲಕ ಸ್ತ್ರೀವಾದವು ಭವಿಷ್ಯದ ಮುಂದಿನ ಆಯ್ಕೆ ಎಂದು ಹೇಳುತ್ತಾರೆ. ಆಶಾದೇವಿಯವರ ಬರವಣಿಗೆಯು ಹೆಚ್ಚು ಪಲ್ಲಟಗಳನ್ನು

ಸೃಷ್ಟಿಸುತ್ತಿದೆ. ಆ ಮೂಲಕ ಇವರ ಚಿಂತನೆ ಹೆಚ್ಚು-ಹೆಚ್ಚು ಚರ್ಚೆಗೆ ಒಳಪಡುತ್ತಿದೆ. ಇವರ ಬರಹಗಳು ಸಾಮಾನ್ಯ ಮತ್ತು ಅಕೆಡಮಿಕ್ ಓದುಗರಲ್ಲಿ ಪ್ರತಿಕ್ರಿಯೆಗೆ ಮಾಡಲು ಪ್ರಚೋದಿಸುತ್ತವೆ. ಓದುಗರಲ್ಲಿ ಹೊಸ ಆಲೋಚನಾ ಮನೋಭಾವವನ್ನು ಹುಟ್ಟುಹಾಕುತ್ತವೆ. ಅವರ ತಿಳುವಳಿಕೆಗೆ ಹೊಸದೊಂದು ಆಯಾಮವನ್ನು ನೀಡುತ್ತವೆ.

ಯಾವುದೇ ಮುಲಾಜಿಗೆ ಒಳಗಾಗದೆ ಅಥವಾ ಯಾರನ್ನೂ ಓಲೈಸದೆ, ಸ್ತ್ರೀವಾದದ ಬಗ್ಗೆ, ಪುರುಷ ಪ್ರಧಾನ ವ್ಯವಸ್ಥೆಯ ಬಗ್ಗೆ, ತಂತ್ರದ ಬಗ್ಗೆ, ದಬ್ಬಾಳಿಕೆ ಶೋಷಣೆಯ ಬಗ್ಗೆ ತನಗೆ ಅನಿಸಿದ್ದನ್ನು ಆಶಾದೇವಿ ನಿಷ್ಠುರವಾಗಿ ಹೇಳುತ್ತಾರೆ. ಇವರ ಹೆಚ್ಚಿನ ಬರಹಗಳು ಮಿಥ್ ವಿಶ್ಲೇಷಣೆಗೆ ಒತ್ತು ಕೊಡುತ್ತವೆ. ಚರಿತ್ರೆ ಮತ್ತು ಪುರಾಣಗಳ ವಿಶ್ಲೇಷಣೆಯ ಮೂಲಕ ವರ್ತಮಾನಕ್ಕೆ ಬೇಕಾದ ಹೊಸ-ಹೊಸ ಒಳನೋಟಗಳನ್ನು ಸೃಷ್ಟಿಸುತ್ತವೆ. ಮುಖ್ಯವಾಗಿ ಸ್ತ್ರೀ ಸಂಕಥನವನ್ನು ಕಟ್ಟುವುದು ಇವರ ಬರವಣಿಗೆಯ ಪ್ರಮುಖ ಕಾಳಜಿ. ಇವರ ಬರವಣಿಗೆಯು ವೈಯಕ್ತಿಕತೆಯಿಂದ ಸಾರ್ವತ್ರಿಕತೆಯ ಕಡೆಗೆ, ಲೇಖಕ ಕೇಂದ್ರದಿಂದ ಸಮಾಜದ ಕೇಂದ್ರಕ್ಕೆ, ಘಟನೆಯ ಕೇಂದ್ರದಿಂದ ತತ್ವದ ಕೇಂದ್ರದತ್ತ ಸಾಗುತ್ತದೆ. ಈ ಮೂಲಕ ಸಮಕಾಲೀನ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಹಾಗೂ ಮಹಿಳಾ ಪ್ರಜ್ಞೆಯನ್ನು ಬೆಳೆಸುತ್ತದೆ.

ಇದುವರೆಗೂ ಸ್ತ್ರೀವಾದವು ತನ್ನ ವಿಭಿನ್ನ ಹೋರಾಟಗಳಲ್ಲಿ ಪಡೆದುಕೊಂಡ ಪಲ್ಲಟಗಳನ್ನು ಆಶಾದೇವಿ ಚರ್ಚಿಸುತ್ತಾರೆ. ಸ್ತ್ರೀವಾದದ ಧ್ಯೇಯ-ಧೋರಣೆಗಳನ್ನು ತಾತ್ವಿಕತೆಯ ನೆಲೆಯನ್ನು, ಸೈದ್ಧಾಂತಿಕತೆಯ ಚೌಕಟ್ಟನ್ನು ಗುರುತಿಸುತ್ತಾರೆ. ಸ್ತ್ರೀವಾದದ ಇಂದಿನ ಪ್ರಸ್ತುತತೆ, ಅಗತ್ಯತೆ, ಅನಿವಾರ್ಯತೆ ಅದು ಎದುರಿಸುತ್ತಿರುವ ಸವಾಲುಗಳನ್ನು, ಅದಕ್ಕಿರುವ ಮುಂದಿನ ಸಾಧ್ಯತೆಗಳನ್ನು ಮತ್ತು ಹೊಣೆಗಾರಿಕೆಗಳನ್ನು ಚರ್ಚಿಸುತ್ತಾರೆ. ಈ ಕಾರಣದಿಂದ ಈ ಹೊತ್ತು ಬರೆಯುತ್ತಿರುವ ಮಹತ್ವದ ಚಿಂತಕಿಯಾಗಿ ಆಶಾದೇವಿಯವರು ಹೊಮ್ಮಿದ್ದಾರೆ. ಈ ಹಿನ್ನೆಲೆಯಲ್ಲಿ ಎಂ.ಎಸ್.ಆಶಾದೇವಿಯವರ ಸ್ತ್ರೀವಾದಿ ಚಿಂತನೆಯಲ್ಲಿ ಕೆಲವು ಮುಖ್ಯ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

**೯.೨. ಫಲಿತಗಳು**

೧. ಎಂ.ಎಸ್.ಆಶಾದೇವಿಯವರು ತಮ್ಮ ಸ್ತ್ರೀವಾದಿ ಚರ್ಚೆಯನ್ನು ಬೆಳೆಸಲು ಸಾಹಿತ್ಯವನ್ನು ಆಕರವನ್ನಾಗಿ ಆರಿಸಿಕೊಳ್ಳುತ್ತಾರೆ. ನಂತರ ಆ ಸಾಹಿತ್ಯ ಕೃತಿಗಳಲ್ಲಿನ ಉಲ್ಲೇಖಿತ ವಾಕ್ಯಗಳನ್ನೊ, ಘಟನೆಗಳನ್ನೊ, ಚರ್ಚೆಮಾಡುತ್ತಾ ಕೊನೆಯಲ್ಲಿ ಸಾಂಸ್ಕೃತಿಕವಾದ, ಸಾಮಾಜಿಕವಾದ ವಿಶ್ಲೇಷಣೆಗೆ ಚಲಿಸುತ್ತಾರೆ. ಇದನ್ನು ಸಾಹಿತ್ಯ ಚಿಂತನೆಯಿಂದ ಸಾಂಸ್ಕೃತಿಕ ಚಿಂತನೆಗೆ ರೂಪಾಂತರ ಎನ್ನುತ್ತಾರೆ.

೨. ಆಶಾದೇವಿಯವರು ಸಾಹಿತ್ಯ ಕೃತಿಗಳನ್ನು ಸ್ತ್ರೀವಾದಿ ನೆಲೆಯಲ್ಲಿ ಚರ್ಚೆಮಾಡುತ್ತಾ, ಆ ಕೃತಿಯ ಕಲಾತ್ಮಕ ಯಶಸ್ಸು ಮತ್ತು ಸೋಲುಗಳ ಬಗ್ಗೆ ಹೆಚ್ಚು ಗಮನ ಹರಿಸುವುದಿಲ್ಲ. ಅಂದರೆ ಆ ಕೃತಿಯ ವಿನ್ಯಾಸವನ್ನು ಮೌಲ್ಯಮಾಪನ ಮಾಡುವುದಿಲ್ಲ. ಆ ಕೃತಿಯು ತಾಳಿರುವ ಅಥವಾ ಕೃತಿಯ ಕರ್ತೃ ತಾಳಿರುವ ಮಹಿಳಾ ನಿಲುವುಗಳನ್ನು, ಒಪ್ಪಿತ ನೆಲೆಯಲ್ಲಿ ಆಗಿರಬಹುದು, ಅಥವಾ ನಿರಾಕರಣ ನೆಲೆಯಲ್ಲಿ ಆಗಿರಬಹುದು ವಾಗ್ವಾದಕ್ಕೆ ಒಳಪಡಿಸುವರು.

೩. ಸಾಹಿತ್ಯದ ವಿದ್ಯಾರ್ಥಿನಿಯಾದ ಆಶಾ ಅವರು ಸಾಹಿತ್ಯ ಕೃತಿಗಳನ್ನು ಚರ್ಚೆ ಮಾಡುತ್ತಾ ಸಮಕಾಲೀನ ಘಟನೆಗಳ ಕಡೆಗೆ ಸಾಮಾಜಿಕ ವಾಸ್ತವತೆಯ ನೆಲೆಯಲ್ಲಿ ಚಲಿಸುತ್ತಾರೆ. ಅಂದರೆ ಸಾಹಿತ್ಯ

ಕೃತಿಯಲ್ಲಿನ ಮಹಿಳಾ ಅತ್ಯಾಚಾರವನ್ನು ಕುರಿತು ಚರ್ಚಿಸುತ್ತಾ, ಸಮಕಾಲೀನ ಮಹಿಳಾ ಸ್ಥಿತಿ-ಗತಿಗಳನ್ನು ಅದಕ್ಕೆ ಲಗತ್ತಿಸಿ ಆಳವಾದ ವಿಶ್ಲೇಷಣೆ ಮಾಡುತ್ತ ವಿಷಾದವನ್ನು ವ್ಯಕ್ತಪಡಿಸುತ್ತಾರೆ. ಈ ಮೂಲಕ ಸಮಕಾಲೀನ ಸಮಾಜದ ವಿಮರ್ಶೆ ಮಾಡುತ್ತಾ, ಅದರ ಭಾಗವಾಗಿಯೇ ಈಗಾಗಲೇ ಇರುವ ಸ್ತ್ರೀವಾದಿ ವಿಮರ್ಶೆಯನ್ನು ಮುಂದುವರೆಸುತ್ತಾರೆ. ಹೀಗಾಗಿ ಇವರ ವಿಮರ್ಶೆಯನ್ನು ಸಾಮಾಜಿಕ ದರ್ಶನದ ವಿಮರ್ಶೆ ಎನ್ನಬಹುದು. ಸಮಕಾಲೀನ ಘಟನೆಗಳನ್ನು ವಿಶ್ಲೇಷಿಸುತ್ತಾ, ವಾಗ್ವಾದಕ್ಕೆ ಒಳಪಡಿಸುತ್ತಾ, ಒಂದು ತತ್ವವನ್ನು, ದರ್ಶನವನ್ನು, ಹುಡುಕಾಟ ಮಾಡುತ್ತಾರೆ. ಸಮಕಾಲೀನ ಪ್ರಜ್ಞೆ ಇವರ ಚಿಂತನೆಯಲ್ಲಿ ಗಾಢವಾಗಿದೆ.

೪. ಸ್ತ್ರೀವಾದಿ ವಿಮರ್ಶೆಯು ಪುರುಷರ ವಿರುದ್ಧದ ಹೋರಾಟವಲ್ಲ ಎಂದು ಹೇಳುತ್ತಾ, ಸಮಾಜದಲ್ಲಿ ಲಿಂಗ ಸಮಾನತೆಯನ್ನು ತರಬೇಕೆಂದರೆ ಸ್ತ್ರೀ-ಪುರುಷ ಇಬ್ಬರೂ ಸೇರಿ ಹೋರಾಟಮಾಡಬೇಕು ಎಂದು ಚಿಂತಿಸುತ್ತಾರೆ. ಆದ್ದರಿಂದ ಆಶಾ ಅವರ ಸ್ತ್ರೀವಾದಿ ವಿಮರ್ಶೆಯು ಪುರುಷ ಸಮಾಜದ ವಿರುದ್ಧದ ಹೋರಾಟವಾಗಿರದೆ. ಅಂದರೆ ಒರಟು ಸ್ತ್ರೀವಾದದ ದಾರಿಯ ಕಡೆಗೆ ಚಲಿಸದೆ ಸೂಕ್ಷ್ಮ ಸ್ತ್ರೀವಾದದ ನೆಲೆಯತ್ತ ಸರಿಯುತ್ತದೆ.

೫. ಆಶಾದೇವಿಯವರು ತಮ್ಮ ಚಿಂತನೆಯ ಮೂಲಕ ಮಹಿಳಾ ಅಭಿವ್ಯಕ್ತಿಯ ಭಾಷೆಯನ್ನು ಕುರಿತು ಆಳವಾದ ಚರ್ಚೆ ಮಾಡುತ್ತಾರೆ. ಮಹಿಳೆಗೂ ಅವಳದೇ ಆದ ಅಭಿವ್ಯಕ್ತಿ, ಸಂವೇದನೆ ಹೊಂದಿದ ಭಾಷೆ ಇದೆ. ಅದನ್ನು ಅವಳು ಕಾವ್ಯದ ಮೂಲಕ ಕಟ್ಟಿಕೊಂಡಿದ್ದಾಳೆ ಎಂಬುದನ್ನು ಮಹಿಳಾ ಸೃಜನಶೀಲತೆಯ ನೆಲೆಯಲ್ಲಿ ಗುರುತಿಸುತ್ತಾರೆ. ಮಹಿಳೆ ತನ್ನ ಆಲೋಚನೆ ಮತ್ತು ಅಭಿವ್ಯಕ್ತಿಗೆ ತಕ್ಕಭಾಷೆಯನ್ನು ಕೇವಲ ಸಾಹಿತ್ಯಿಕವಾಗಿ ಕಟ್ಟಿಕೊಳ್ಳುತ್ತಿಲ್ಲ. ಸಾಮಾಜಿಕವಾಗಿ ಸ್ಥಳವನ್ನು, ಸ್ಥಾನವನ್ನು ಸೃಷ್ಟಿಸಿಕೊಳ್ಳುವ ಹೋರಾಟದ ಭಾಗವಾಗಿಯೇ ಭಾಷೆಯನ್ನು ಸೃಷ್ಟಿಸಿಕೊಳ್ಳಬೇಕಾಗಿದೆ ಎಂಬುದನ್ನು ಗುರುತಿಸುತ್ತಾರೆ. ಆದ್ದರಿಂದ ಮಹಿಳೆ ಭಾಷೆಯನ್ನು ನಿರ್ಮಾಣ ಮಾಡಿಕೊಂಡು ಹೋರಾಟ ಮಾಡುತ್ತಿದ್ದಾಳೆ ಮತ್ತು ಹೋರಾಟ ಮಾಡುವ ಭಾಗವಾಗಿ ಭಾಷೆಯನ್ನು ನಿರ್ಮಿಸಿಕೊಳ್ಳುತ್ತಿದ್ದಾಳೆ ಎನ್ನುತ್ತಾರೆ. ಮಹಿಳಾ ಹೋರಾಟದ ನೆಲೆಗಳನ್ನು ಆಶಾ ಅವರು ಹೀಗೆ ಸೂಕ್ಷ್ಮತೆಯಲ್ಲಿ ದ್ವಂದ್ವಾತ್ಮಕತೆಯಲ್ಲಿ ಚಿಂತಿಸುತ್ತಾರೆ.

೬. ಆಶಾ ಅವರು ಅಭಿಜಾತವಾದಿ ವಿಮರ್ಶಕಿಯಲ್ಲ ಎಂಬುದು ತಿಳಿಯುತ್ತದೆ. ಪ್ರಧಾನಧಾರೆಯ ಮೇಲ್ವರ್ಜೆಯ ಲೇಖಕಿಯರನ್ನು, ಲೇಖಕಿಯರ ಸಾಹಿತ್ಯವನ್ನು ಕುರಿತು ಮಾತ್ರ ಚರ್ಚಿಸದೆ, ಅಭಿಜಾತವಲ್ಲದ ಪ್ರಧಾನಧಾರೆಯ ಅಂಚಿನಲ್ಲಿರುವ ಲೇಖಕಿಯರನ್ನು, ತುಳಿತಕ್ಕೊಳಗಾದ ಚಿಂತಕಿಯರ ಸಾಹಿತ್ಯವನ್ನು ಸಹ ಚರ್ಚಿಸುತ್ತಾರೆ. ಈ ಮೂಲಕ ಇಡೀ ಮಹಿಳಾ ಸಾಹಿತ್ಯವನ್ನು ಪುನರಾವಲೋಕನ ಮಾಡುತ್ತಾರೆ. ಅಂದರೆ ಪ್ರಧಾನಧಾರೆ ಎನಿಸಿಕೊಂಡ ಅಕ್ಕ, ಮೀರಾ, ಆಂಡಾಳ್, ಬಸವಣ್ಣ ಇವರನ್ನು ಚರ್ಚಿಸುತ್ತಾ, ಅಲಕ್ಷಿತ ಲೋಕದ ಚಿಂತಕಿಯಾದ ನೀಲಮ್ಮನನ್ನು ಕುರಿತು ಆಳವಾದ ಚರ್ಚೆಗೆ ಒಳಪಡಿಸುತ್ತಾರೆ. ಅವರಿಗೆ ಲೇಖಕರು ಯಾರು ಎನ್ನುವುದಕ್ಕಿಂತ ಅವರ ಬರೆಹದ ಆಶಯ ಯಾವುದು ಎಂಬುದು ಪ್ರಮುಖವಾಗುತ್ತದೆ.

೭. ಆಶಾದೇವಿಯವರ ಒಟ್ಟು ವಿಮರ್ಶೆಯ ಚಿಂತನೆಯಲ್ಲಿ, ಮಾರ್ಕ್ಸ್‌ವಾದ, ಗಾಂಧೀವಾದ, ವಾಸ್ತವವಾದ, ಲೋಹಿಯಾವಾದ, ತತ್ವಶಾಸ್ತ್ರ, ಸಮಾಜಶಾಸ್ತ್ರ ಹೀಗೆ ಮುಂತಾದ ಅನ್ಯಶಿಸ್ತೀಯ ಬಹುಸಿದ್ಧಾಂತೀಯ ತಿಳುವಳಿಕೆಗಳು ಕರಗಿಕೊಂಡು ವಿಶ್ಲೇಷಣೆಯಲ್ಲಿ ಕೆಲಸ ಮಾಡುತ್ತವೆ. ಈ ಎಲ್ಲಾ ತಿಳುವಳಿಕೆಗಳ ಹಿನ್ನೆಲೆಯಲ್ಲಿ ಸ್ತ್ರೀವಾದವನ್ನು ಬೆಳೆಸುತ್ತಾ, ಹೊಸ ಸಿದ್ಧಾಂತಗಳನ್ನು ತತ್ವ ಪ್ರಮೇಯಗಳನ್ನು ಹುಟ್ಟುಹಾಕುತ್ತಾರೆ.

೮. ಪರಂಪರೆಯನ್ನು ಮರು ಕಟ್ಟುವಿಕೆಯ ಗುಣ ಆಶಾದೇವಿಯವರ ಚಿಂತನೆಯ ಪ್ರಮುಖ ಗುಣವಾಗಿದೆ. ಲೇಖಕರನ್ನು ಚರ್ಚಿಸುವಾಗ, ಅದೇ ರೀತಿ ಆಶಯವುಳ್ಳ ಚಿಂತನೆಯುಳ್ಳ, ಬೇರೆ ಬೇರೆ ಕವಿಗಳನ್ನು ಕುರಿತು ತೌಲನಿಕ ಚರ್ಚೆ ಮಾಡುತ್ತಾರೆ. ಅಂದರೆ ತೌಲನಿಕತೆ ಆಶಾ ಅವರ ಸ್ತ್ರೀವಾದದ ಪ್ರಮುಖ ಲಕ್ಷಣವಾಗಿದೆ. ಅಕ್ಕಮಹಾದೇವಿಯ ಭಕ್ತಿ ಸಾಹಿತ್ಯವನ್ನು ಕುರಿತು ಚರ್ಚಿಸುವಾಗ ಆಂಡಾಳ್, ನೀಲಮ್ಮ ಮತ್ತು ಆಧುನಿಕ ಕವಯಿತ್ರಿಯರನ್ನು ಪ್ರಾಸಂಗಿಕವಾಗಿ ಒಂದೇ ನೆಲೆಯಲ್ಲಿಟ್ಟು ಚರ್ಚಿಸುತ್ತಾ, ಅದರ ಜೊತೆ ಜೊತೆಗೆ ಜಾನಪದ ಸಾಹಿತ್ಯದ ಮಹಿಳಾ ಕವಿಯಿತ್ರಿಯರ ಸ್ತ್ರೀಪರ ಧೋರಣೆಗಳನ್ನು ಸಹ ಚರ್ಚೆ ಮಾಡುತ್ತಾರೆ. ಹೀಗೆ ತಮ್ಮ ಚಿಂತನೆಯ ಮೂಲಕ ಚರಿತ್ರೆಯ ಹೋರಾಟದ ಹಾದಿಗಳನ್ನು ಸಮಕಾಲೀನಗೊಳಿಸುತ್ತಾರೆ.

೯. ಆಶಾದೇವಿಯವರು ಸಮಾಜವನ್ನು ಜೈವಿಕವಾಗಿ ಧೃವೀಕರಣಗೊಂಡ ವಿರೋಧದ ನೆಲೆಯಲ್ಲಿ ಗ್ರಹಿಸದೆ ಸಮಾನ ಅಂಶಗಳು ಒಟ್ಟಿಗಿರುವ ಸಂಯುಕ್ತ ನೆಲೆಯಲ್ಲಿ ಗ್ರಹಿಸುತ್ತಾರೆ. ಹಾಗಾಗಿ ಹೆಣ್ಣಿನಲ್ಲಿ ಗಂಡಿನ ಪ್ರಾಧಾನ್ಯತೆ ಇದೆ. ಗಂಡಿನಲ್ಲಿ ಹೆಣ್ಣಿನ ಪ್ರಾಧಾನ್ಯತೆ ಇದೆ ಎಂಬುದನ್ನು ಅವರು ಸೂಚಿಸುತ್ತಾರೆ. ಮಹಿಳಾಪರ ಧೋರಣೆಗಳನ್ನು ಮಹಿಳಾ ಲೇಖಕಿಯರಲ್ಲಿ ಮಾತ್ರ ಗುರುತಿಸದೆ, ಪುರುಷ ಲೇಖಕ-ಚಿಂತಕರಾದ, ಗಾಂಧೀ, ಅಂಬೇಡ್ಕರ್, ಲೋಹಿಯಾ, ಷೇಕ್ಸ್‌ಪಿಯರ್, ಬೇಂದ್ರೆ ಮುಂತಾದವರ ಆಲೋಚನೆಗಳಲ್ಲಿ, ಚಿಂತನೆಗಳಲ್ಲಿ, ಧೋರಣೆಗಳಲ್ಲಿ, ಸಹ ಹುಡುಕುತ್ತಾರೆ. ಈ ಮೂಲಕ ಎಲ್ಲ ಪುರುಷರು ಮಹಿಳೆಯ ವಿರೋಧಿ ಅಲ್ಲ ಎಂಬುದನ್ನು ತಿಳಿಸುತ್ತಾ, ಪುರುಷ ಲೇಖಕರಲ್ಲಿಯೂ ಮಹಿಳಾಪರ ಧೋರಣೆಗಳನ್ನು ಗುರುತಿಸುತ್ತಾರೆ. ಹಾಗಾಗಿ ಇವರಿಗೆ ಲೇಖಕರ ಆಯ್ಕೆ ಧೋರಣೆಗಳು ಮಾತ್ರ ಮುಖ್ಯವಾಗುತ್ತವೆಯೇ ಹೊರತು ಅವರ ಸಾಮಾಜಿಕ ಜೈವಿಕ ಹಿನ್ನೆಲೆಯಲ್ಲ ಎಂಬುದು ತಿಳಿಯುತ್ತದೆ.

೧೦. ಆಶಾದೇವಿಯವರು ಹೆಚ್ಚಾಗಿ ಸಾಹಿತ್ಯವನ್ನು ಓದಿಕೊಂಡಿರುವುದರಿಂದ ಅವರಲ್ಲಿ ಪಾಶ್ಚಾತ್ಯ ಕವಿಗಳು, ಭಾರತೀಯ ಕವಿಗಳು, ಹಾಗೂ ಕನ್ನಡದ ಕವಿಗಳ ಜೊತೆ ಅನುಸಂಧಾನವಿದೆ. ಬೇರೆ-ಬೇರೆ ಭಾಷೆಯ ಕವಿಗಳ, ಲೇಖಕರ, ಚಿಂತಕರ, ಮುಖ್ಯವಾಗಿ, ಓಲ್ಗಾ, ಕಮಲಾಸಾಸ್, ಚಿತ್ರಾ ಮುದ್ಗಲ್, ಲಲ್ಲೇಶ್ವರಿ, ಷೇಕ್ಸ್‌ಪಿಯರ್ ಮುಂತಾದ ಲೇಖಕಿಯನ್ನು ಚರ್ಚಿಸುವ ಮೂಲಕ ಅವರು ಸಾಹಿತ್ಯದ ವಿಷಯದಲ್ಲಿ ಭಾಷಿಕ ಪರಿಮಿತಿಯನ್ನು ನಿರ್ಣಾಯಕವಾಗಿ ಮೀರುತ್ತಾರೆ. ಹೀಗೆ ಭಾಷಾ ಗಡಿಯ ವಿಸ್ತರಣೆ ಮೂಲಕ ಸ್ತ್ರೀವಾದಿ ಚಿಂತನೆಯನ್ನು ಹೊಸ ವಿಸ್ತರಣೆಗೆ ಒಳಗು ಮಾಡುವುದನ್ನು ಇವರ ಚಿಂತನೆಯಲ್ಲಿ ಗುರುತಿಸಬಹುದು.

೧೧. ಆಶಾದೇವಿ ಅವರ ವಿಮರ್ಶೆಯ ಸ್ವರೂಪವು ವೈಯಕ್ತಿಕತೆಯಿಂದ ಸಾರ್ವತ್ರಿಕತೆಯ ಕಡೆಗೆ, ಕುಟುಂಬದಿಂದ, ವಿಶ್ವಕುಟುಂಬದ ಕಡೆಗೆ ಚಲಿಸುತ್ತದೆ. ಒಬ್ಬ ಮಹಿಳೆ ಮಾಡಿದ ಹೋರಾಟವನ್ನು ಸಮಸ್ತ ಮಹಿಳಾಪರ ಹೋರಾಟದ ಭಾಗವಾಗಿ ಗುರುತಿಸುತ್ತಾರೆ. ಅಂದರೆ ಕುಟುಂಬದಲ್ಲಿ ಒಬ್ಬ ಮಹಿಳೆ ಉಪವಾಸ ಕೂರುವುದು, ಮೌನತಾಳುವುದು, ಇಡೀ ಮಹಿಳೆಯರ ಪರವಾದ ಹೋರಾಟವಾಗಿರುತ್ತದೆ ಎಂಬುದನ್ನು ಗುರುತಿಸುತ್ತಾರೆ. ಹೀಗಾಗಿ ವ್ಯಕ್ತಿಗತ ಹೋರಾಟವನ್ನು ಸಾಮುದಾಯಿಕ ವ್ಯಾಪ್ತಿಯಲ್ಲಿ ವಿಸ್ತರಿಸುವುದು ಇವರ ಚಿಂತನೆಯಲ್ಲಿ ಕಂಡುಬರುತ್ತದೆ. ಒಂದು ಹೆಣ್ಣಿನ ಸ್ಥಿತಿ-ಗತಿ ಹೋರಾಟಗಳನ್ನು ವಿಶ್ಲೇಷಣೆ ಮಾಡುತ್ತಾ ಮಹಿಳಾ ಕುಲದ ಚರ್ಚೆ ಮಾಡುತ್ತಾರೆ.

೧೨. ಇವರು ತಮ್ಮ ಸ್ತ್ರೀವಾದದ ಮೂಲಕ ಒಂದು ತಾತ್ವಿಕ ಚೌಕಟ್ಟನ್ನು ರೂಪಿಸುತ್ತಾರೆ. ಎರಡು ಮಾದರಿಗಳಲ್ಲಿ ಸ್ತ್ರೀವಾದವನ್ನು ಕಟ್ಟುತ್ತಾರೆ ಮತ್ತು ವಿಸ್ತರಿಸುತ್ತಾರೆ. ಒಂದು– ಸಾಹಿತ್ಯ ಕೃತಿಗಳ ವಚನಗಳು, ಕಾವ್ಯಗಳ ವಿಶ್ಲೇಷಣೆ ಮಾಡುತ್ತಾ, ಚರ್ಚೆಗೆ ಒಳಪಡಿಸುತ್ತಾ ಹೊಸ ಚೌಕಟ್ಟನ್ನು ರೂಪಸುವುದು. ಎರಡು– ಈಗಾಗಲೇ ಇರುವ ಸ್ತ್ರೀವಾದಿ ತಾತ್ವಿಕ ಚೌಕಟ್ಟಿನಲ್ಲಿ ಲೇಖಕಿಯರನ್ನು, ಸಾಹಿತ್ಯವನ್ನು, ಘಟನೆಗಳನ್ನು ವಿಶ್ಲೇಷಿಸುವುದು. ಇವರ ಚಿಂತೆನಯ ಮುಖ್ಯ ಆಕರ ಸಾಹಿತ್ಯ ಕ್ಷೇತ್ರ ಅಲ್ಲ. ಅಂದರೆ ಸ್ತ್ರೀವಾದವನ್ನು ವಿಸ್ತರಿಸಲು ಸಾಹಿತ್ಯವನ್ನು ಒಂದು ಮಾಧ್ಯಮವನ್ನಾಗಿಸಿ ಕೊಂಡಿದ್ದಾರಷ್ಟೆ. ಇದು ಆಶಾ ಅವರ ಚಿಂತನೆಯ ಪ್ರಧಾನ ಗುಣವಾಗಿದೆ.

೧೩. ಇವರು ತಮ್ಮ ಚಿಂತನೆಯ ಮೂಲಕ ಪುರುಷ ಲೇಖಕರು ತಾಳಿರುವ ಮಹಿಳಾ ನಿಲುವುಗಳ ಜೊತೆ ವಾಗ್ವಾದ ಮಾಡುತ್ತಲೇ ಪರುಷರ ಅಭಿವ್ಯಕ್ತಿಯಲ್ಲಿ ಅವರ ಸಂವೇದನೆಯಲ್ಲಿ ಆದ ಪಲ್ಲಟಗಳನ್ನು ಗುರುತಿಸುತ್ತಾರೆ. ಅಂದರೆ ಪುರುಷ ಚಿಂತಕರು ತಾಳಿರುವ ಮಹಿಳಾ ವಿರೋಧಿ ಧೋರಣೆಗಳಿಗೆ ಅವರ ಸಂವೇದನೆಯ ನೆಲೆಯಲ್ಲಿಯೇ ಕೊರತೆ ಇದೆ ಎಂಬುದನ್ನು ಗುರುತಿಸುತ್ತಾರೆ. ಅದಕ್ಕೆ ಕಾರಣಗಳನ್ನು ಕೊಡುತ್ತಾರೆ. ಆ ಮೂಲಕ ಲೇಖಕನ ಮಿತಿಯನ್ನು ಗುರುತಿಸುವುದುದಕ್ಕಿಂತ ವ್ಯವಸ್ಥೆಯ ಮಿತಿಯನ್ನು ಗುರುತಿಸುತ್ತಾರೆ.

೧೪. ಆಶಾದೇವಿ ಅವರು ಎಲ್ಲಿ ವಿಧವಾ ವಿವಾಹ, ಲೈಂಗಿಕತೆಗಳು ನೈತಿಕ ಚೌಕಟ್ಟಿನ ಒಳಗೆ ನಿರ್ಬಂಧಿಸಲ್ಪಡುತ್ತವೆಯೊ, ಪರಿಗಣಿಸಲ್ಪಡುತ್ತವೆಯೊ ಅಲ್ಲಿಯವರೆಗೆ ಪುರುಷರು ಸ್ತ್ರೀಯರ ಮೇಲೆ ದಬ್ಬಾಳಿಕೆ ನಡೆಸುತ್ತಲೇ ಇರುತ್ತಾರೆ. ಆದ್ದರಿಂದ ಮಹಿಳೆ ಇಂತಹ ನೈತಿಕ ಚೌಕಟ್ಟು, ಕಟ್ಟು-ಕಟ್ಟಳೆಗಳನ್ನು ಮೀರಬೇಕು ಹಾಗಾದಾಗ ಮಾತ್ರ ಸ್ತ್ರೀಯು ಮುಕ್ತಳಾಗಬಹುದು ಎಂಬ ಆಶಯವನ್ನು ವ್ಯಕ್ತಪಡಿಸುತ್ತಾ ಸ್ತ್ರೀ ತನ್ನ ಅಸ್ಮಿತೆಯನ್ನು ಕಳೆದುಕೊಳ್ಳಲು ಭಾರತೀಯ ವ್ಯವಸ್ಥೆಯೇ ಕಾರಣವಾಗಿದೆ. ಆದ್ದರಿಂದ ಅತ್ಯಾಚಾರವಾದ ಮಹಿಳೆಯನ್ನು ಕುರಿತು, ಶೋಷಣೆಗೆ ಒಳಗಾದ ಮಹಿಳೆಯನ್ನು ಕುರಿತ ಕನಿಕರದ ಮನೋಭಾವಗಳು ಸ್ತ್ರೀ ಸಾಮರ್ಥ್ಯವನ್ನು ಕುಗ್ಗಿಸುವ ಅಂಶಗಳೇ ಆಗಿದ್ದು, ಇವುಗಳಿಂದ ಭಾರತೀಯ ಸ್ತ್ರೀ ಹೊರಬಂದು ತನ್ನ ಆತ್ಮಗೌರವನ್ನು ಬಳಸಿಕೊಳ್ಳಬೇಕು ಎಂಬುದು ಚಿಂತಕಿಯ ಪ್ರಬಲವಾದ ತತ್ವವಾಗಿದೆ.

೧೫. ಆಶಾ ತಮ್ಮ ಸ್ತ್ರೀವಾದಿ ಚರ್ಚೆಯಲ್ಲಿ ಮಹಿಳೆಯರ ಹೋರಾಟಗಳಲ್ಲಿನ ಪಲ್ಲಟಗಳನ್ನು ಗುರುತಿಸುತ್ತಾರೆ. ಹೀಗೆ ಗುರುತಿಸುವ ಮೂಲಕ ಮಹಿಳಾ ಹೋರಾಟದ ಸೋಲು ಗೆಲುವುಗಳನ್ನು ಪರಾಮರ್ಶೆಗೆ ಒಳಪಡಿಸುತ್ತಾರೆ. ಇನ್ನೂ ಮಹಿಳೆಯರು ತಮ್ಮ ಪ್ರತಿರೋಧದ ವಿಧಾನ ಮತ್ತು ತಂತ್ರಗಳಲ್ಲಿ ಹುಡುಕಿಕೊಳ್ಳಬೇಕಾದ ಹೊಸ ಸಾಧ್ಯತೆಗಳನ್ನು ಸೂಚಿಸುತ್ತಾರೆ. ಮಹಿಳೆಯು ಸಾಮಾಜಿಕವಾಗಿ ಪ್ರತಿರೋಧ ವ್ಯಕ್ತಪಡಿಸುವುದಕ್ಕಿಂತ ಮೊದಲು ಪಿತೃಸಂಸ್ಕೃತಿ ರೂಪಸಿರುವ ಚೌಕಟ್ಟನ್ನು ಮೀರಿ ಹೊರಬರಬೇಕೆಂದು ಹೇಳುತ್ತಾರೆ. ಆ ಮೂಲಕ ಸ್ವಬಂಧನ ಮತ್ತು ಸ್ವಗ್ರಹಿಕೆಗಳ ಜೊತೆ ಜಗಳಮಾಡಿಕೊಂಡು ತಾನೂ ಒಂದು ನಿರ್ಧಾರಕ್ಕೆ ಬಂದಾಗ ಮಾತ್ರ ಸಾಮಾಜಿಕವಾಗಿ ಹೋರಾಟ ನಡೆಸಲು ಸಾಧ್ಯ ಎಂಬುದನ್ನು ಪ್ರಸ್ತುತ ಅಧ್ಯಯನ ಮೂಲಕ ಕಂಡುಕೊಳ್ಳಲಾಗಿದೆ. ಆಶಾದೇವಿಯವರು ತಮ್ಮ ಸ್ತ್ರೀವಾದಿ ಚರ್ಚೆಯ ಮೂಲಕ ಮಹಿಳೆಯರು ಇದುವರೆಗೂ ನಡೆಸಿದ ಹೋರಾಟದ ಮಾದರಿಗಳನ್ನು ಸೋಲು-ಗೆಲುವುಗಳನ್ನು ಪರಾಮರ್ಶೆಗೆ ಒಳಪಡಿಸುತ್ತಾರೆ. ಆ ಮೂಲಕ ಮುಂದಿನ ಕಾಲಘಟ್ಟಗಳಲ್ಲಿ ಮಹಿಳೆಯರು ಮಾಡಬೇಕಾದ ಪ್ರತಿರೋಧದ ಅಥವಾ ಸಂಘಟನೆಯ ವಿವಿಧ ಆಯಾಮಗಳನ್ನು ಈ ಒಂದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೧೬. ಆಶಾದೇವಿ ಅವರ ಬರವಣಿಗೆಯ ಭಾಷೆಯನ್ನು ಕುರಿತಂತೆ, ಇವರ ಚಿಂತನಾ ಬರಹಗಳು ಭಾರವಾದ ತಾತ್ವಿಕ ನೆಲೆಯಿಂದ, ವಿದ್ವತ್ತಿನಿಂದ ಕೂಡಿವೆ. ಇವರು ಅಕಡೆಮಿಕ್ ನೆಲೆಯ ದೊಡ್ಡ ವಿಮರ್ಶಕಿ ಮತ್ತು ವಿದ್ವಾಂಸರಾಗಿರುವುದರಿಂದ ಅವರ ಓದಿನ ವ್ಯಾಪ್ತಿಯ ವಿಸ್ತಾರವನ್ನು ಕುರಿತು ಇವರ ಬರಹಗಳಲ್ಲಿ ನೋಡಬಹುದು. ಹಾಗಾಗಿ ಇವರ ವಿಮರ್ಶೆಯಲ್ಲಿ ಸಂವಹನದ ತೊಡಕಿದೆ. ಈ ಆಯಾಮವನ್ನು ಅವರು 'ಪ್ರಜಾವಾಣಿ' ಕಾಲಂ ಬರೆಯತೊಡಗಿದಾಗ ಸ್ವಲ್ಪ ಬದಲಾಗಿದೆ. ಇಲ್ಲಿ ಜನರನ್ನು ತಲುಪುವ ಸರಳ ಭಾಷೆಯಲ್ಲಿ ಬರೆಯಲು ಯತ್ನಿಸಿದ್ದಾರೆ. ಆದರೆ ಪೂರ್ಣಪ್ರಮಾಣದ ಯಶಸ್ಸು ಪಡೆದಿಲ್ಲ. ತುಂಬಾ ಬಿಗುವಾದ ಬರಹದ ಶೈಲಿ ಸಾಹಿತ್ಯದ ಸಾಮಾನ್ಯ ವಿದ್ಯಾರ್ಥಿಗಳಿಗೆ, ಸಾಮಾನ್ಯ ಓದುಗರಿಗೆ ಸರಳವಾಗಿ ಸಂವಹನವಾಗುತ್ತಿಲ್ಲ. ಅವರು ಸಂವಹನಶೀಲತೆಯ ಪ್ರಯೋಗವನ್ನಂತೂ ಮಾಡುತ್ತಿದ್ದಾರೆ. ಈ ಮೂಲಕ ತರ್ಕಬದ್ಧವಾಗಿ ಓದುಗರನ್ನು ತಲುಪಿಸುವ, ಒಪ್ಪಿಸುವ ಆಯಾಮ ಅವರಲ್ಲಿದೆ. ಹೀಗಾಗಿ ಉನ್ನತವಾದ ಚಿಂತನೆಯನ್ನು, ವಿಶಿಷ್ಟತೆಯನ್ನು ಸಾಮಾನ್ಯ ಜನರಿಗೂ ತಲುಪಿಸಬೇಕೆಂಬ ಹಂಬಲ ಇಲ್ಲಿ ಕಾಣುತ್ತದೆ. ಅವರಲ್ಲಿ ಹೇಗೆ ಹೇಳುತ್ತೇನೆ ಎನ್ನುವುದಕ್ಕಿಂತ ಏನು ಹೇಳುತ್ತೇನೆ ಎಂಬುದು ಮುಖ್ಯವಾಗಿದೆ. ಅದಕ್ಕಾಗಿ ಆಶಾ ಅವರ ಬರವಣಿಗೆಯ ಭಾಷೆಯನ್ನು ಸರಳೀಕರಣಗೊಳಿಸುವ ಪ್ರಯತ್ನದಲ್ಲಿದ್ದಾರೆ. ಆದರೆ ಚಿಂತನೆ ಸರಳೀಕರಣಗೊಂಡಿಲ್ಲ.

*****

# ಅನುಬಂಧಗಳು

೧.ಅಭ್ಯಾಸಸೂಚಿ

**ಅ. ಪ್ರಾಥಮಿಕ ಆಕರಗಳು**


೧. ಆಶಾದೇವಿ ಎಂ.ಎಸ್., **ನಡುವೆ ಸುಳಿವ ಆತ್ಮ**(ಸ್ತ್ರೀ ಸಂಕಥನದ ಚಹರೆಗಳು), ಅಹರ್ನಿಶಿ ಪ್ರಕಾಶನ, ಶಿವಮೊಗ್ಗ, ೨೦೧೧

೨. ಆಶಾದೇವಿ ಎಂ.ಎಸ್., **ಸ್ತ್ರೀಮತವನುತ್ತರಿಸಲಾಗದೆ**(ಸಾಹಿತ್ಯ-ಸಂಸ್ಕೃತಿ ಕುರಿತ ಲೇಖನಗಳು), ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬


**ಆ. ಲೇಖನಗಳು**


೧. ಆಶಾದೇವಿ ಎಂ.ಎಸ್., **ಮುಕ್ತ ಛಂಧದ ಮುಕ್ತ ಲಯದ ಅಮೃತ ಪತಾಕೆಗಳು**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಏಪ್ರಿಲ್ ೧೯, ೨೦೧೩

೦೨. ಆಶಾದೇವಿ ಎಂ.ಎಸ್., **ಗಂಗವ್ವ ಗಂಗಾಮಾಯಿಯಾಗುವ ಅಪೂರ್ವ ಕಥನ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಜನವರಿ ೧೯, ೨೦೧೪

೦೩. ಆಶಾದೇವಿ ಎಂ.ಎಸ್., **ನಾನು ಫಣಿಯಮ್ಮ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಫೆಬ್ರವರಿ ೧೬, ೨೦೧೪

೪. ಆಶಾದೇವಿ ಎಂ.ಎಸ್., **ಬಿಡುಗಡೆಯೆಂಬುದುಂಟೇ ಹೇಳಾ ಕೆಳದಿ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಮಾರ್ಚ ೨, ೨೦೧೪

೫. ಆಶಾದೇವಿ ಎಂ.ಎಸ್., **ಸ್ತ್ರೀಮತವನುತ್ತರಿಸಲಾಗದೆ? ಧರ್ಮಶಾಸ್ತ್ರದೊಳ್**, ಪ್ರಜಾವಾಣಿ ಮುಕ್ತಛಂದ, ಸೆಪ್ಟಂಬರ್ ೧೪, ೨೦೧೪

೬. ಆಶಾದೇವಿ ಎಂ.ಎಸ್., **ಸೀತೆ:ಅದಿಮ ಸ್ತ್ರೀವಾದಿ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಸೆಪ್ಟಂಬರ್ ೨೮, ೨೦೧೪

೭. ಆಶಾದೇವಿ ಎಂ.ಎಸ್., **ಹರುಷದ ಧೈರ್ಯವುಳ್ಳ ಹೆಣ್ಣು**, ಪ್ರಜಾವಾಣಿ ಮುಕ್ತಛಂದ,

ನವೆಂಬರ್ ೧೯, ೨೦೧೪

೮. ಆಶಾದೇವಿ ಎಂ.ಎಸ್., **ದ್ರೋಪ್ದಿ ಎಂಬ ಅಗ್ನಿಕನ್ಯೆ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ನವೆಂಬರ್ ೩೦, ೨೦೧೪

೦೯. ಆಶಾದೇವಿ ಎಂ.ಎಸ್., **ಸ್ತ್ರೀ ಚೈತನ್ಯಕ್ಕೆ ಬರೆದ ಹೊಸ ಭಾಷ್ಯ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಜನವರಿ ೧೧, ೨೦೧೫

೧೦. ಆಶಾದೇವಿ ಎಂ.ಎಸ್., **ಭಕ್ತಿ ಬಂಡಾಯದ ಮೀರಾ ಅಪೂರ್ವ ಹಾಡು**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಫೆಬ್ರವರಿ ೮’ ೨೦೧೫

೧೧. ಆಶಾದೇವಿ ಎಂ.ಎಸ್., **ಪಿತೃ ಸಂಸ್ಕೃತಿಯ ಸ್ವಯಂದತ್ತ ಧಿಮಾಕು ಧಿಕ್ಕರಿಸುತ್ತ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಫೆಬ್ರವರಿ ೨೨, ೨೦೧೫

೧೨. ಆಶಾದೇವಿ ಎಂ.ಎಸ್., **ರಾಗ – ಆತ್ಮಶ್ರೀ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಮಾರ್ಚ್ ೨೯, ೨೦೧೫

೧೩. ಆಶಾದೇವಿ ಎಂ.ಎಸ್., **ಸ್ತ್ರೀವಾದಿ ವ್ಯಾಖ್ಯಾನ – ಆಖ್ಯಾನದ ಸಖೀಗೀತ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಮೇ ೩೧, ೨೦೧೫

೧೪. ಆಶಾದೇವಿ ಎಂ.ಎಸ್., **ಕುಸುಮ ಕಠೋರ ‘ಶಕುಂತಲೆ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಜೂನ್ ೧೪, ೨೦೧೫

೧೫. ಆಶಾದೇವಿ ಎಂ.ಎಸ್., **ಅಕ್ಷಯ ಪಾತ್ರಗಳ ತಾಯಿ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಜುಲೈ ೨೯, ೨೦೧೫

೧೬. ಆಶಾದೇವಿ ಎಂ.ಎಸ್., **ನಾನು ‘ಅರ್ಧ ಹೆಣ್ಣು’ ಎಂದ ಗಾಂಧೀಜಿ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಆಗಸ್ಟ ೨೩, ೨೦೧೫

೧೭. ಆಶಾದೇವಿ ಎಂ.ಎಸ್., **ಬಹುರತ್ನಾ ವಸುಂಧರಾ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಸೆಪ್ಟೆಂಬರ್ ೮, ೨೦೧೫

೧೮. ಆಶಾದೇವಿ ಎಂ.ಎಸ್., **ಭಕ್ತಿ ಎನ್ನುವ ಬಂಡಾಯದ ಆಂಡಾಳ್**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಸೆಪ್ಟಂಬರ್ ೨೭’ ೨೦೧೫

೧೯. ಆಶಾದೇವಿ ಎಂ.ಎಸ್., **ಅವಳ ಕಾವ್ಯ ಅವಳ ಭಾಷೆ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ಅಕ್ಟೋಬರ್ ೨೫, ೨೦೧೫

೨೦. ಆಶಾದೇವಿ ಎಂ.ಎಸ್., **ಕಾವ್ಯ ಬಿಡುಗಡೆಯ ಬಾಗಿಲು**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ, ನವೆಂಬರ್ ೧೫, ೨೦೧೫

೨೧. ಆಶಾದೇವಿ ಎಂ.ಎಸ್., **ಸಾಲುಗಳ ನಡುವೆ ಓದಿದರೆ**, ಪ್ರಜಾವಾಣಿ ಪತ್ರಿಕೆ ಮುಕ್ತಛಂದ ನವೆಂಬರ್ ೨೯, ೨೦೧೫

## ೩. ಪರಾಮರ್ಶನ ಆಕರಗಳು


೧. ಉಷಾ ಪಿ.ರೈ., **ಮಧ್ಯಂತರ**, ಕಿರಣ್ ಬುಕ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ೨೦೦೯

೨. ಜ್ಯೋತಿ ಶಶಿಕುಮಾರ್, **ಮಹಿಳಾ ಸಾಮಾಜಿಕತೆ**, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೩. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ(ಸಂ), **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ**, ಅಭಿನವ, ಬೆಂಗಳೂರು, ೧೯೯೪

೪. ತಾರಿಣಿ ಶುಭದಾಯಿನಿ, **ಸಾಮಯಿಕ**, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೩

೫. ದಂಡಪ್ಪ ಎಚ್., ಸುಮಿತ್ರಾಬಾಯಿ ಬಿ.ಎನ್.(ಸಂ), **ಸುವರ್ಣ ಸಾಹಿತ್ಯ ವಿಮರ್ಶೆ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೬. ನಾಗಭೂಷಣ್ ಓ.ಎಲ್., **ವಿಮರ್ಶೆಯ ಪರಿಭಾಷೆ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೧

೭. ಬಸವರಾಜ ಸಬರದ, **ಕನ್ನಡ ಸಾಹಿತ್ಯ ವಿಮರ್ಶೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೮. ಮಂಗಳಾ ಪ್ರಿಯದರ್ಶಿನಿ ಡಿ., **ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ**, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೯. ರಾಘವೇಂದ್ರ ರಾವ್ ಎಚ್.ಎಸ್., **ಕಣ್ಣ ಹನಿಗಳೆ ಕಾಣಿಕೆ**, ಇಳಾ ಪ್ರಕಾಶನ, ಬೆಂಗಳೂರು, ೨೦೧೨

೯. ಶ್ರೀಮತಿ ಎಚ್.ಎಸ್.(ಅನು), **ಸ್ತ್ರೀವಾದಿ ಭಾಷಾ ಶಾಸ್ತ್ರ ಪ್ರವೇಶಿಕೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೧೦. ಶ್ರೀಮತಿ ಎಚ್.ಎಸ್., **ಸೇರಿಕೊಂಡ ಎಳೆಗಳು**, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

೧೧. ಶ್ರೀಮತಿ ಎಚ್.ಎಸ್., **ಸ್ತ್ರೀವಾದ ಅನ್ವಯಿಕತೆ**, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨

೧೨. ಶ್ರೀಮತಿ ಎಚ್.ಎಸ್., **ಸ್ತ್ರೀವಾದ: ತಾತ್ವಿಕತೆ**, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨

೧೩. ಶ್ರೀಮತಿ.ಎಚ್.ಎಸ್.,(ಸಂ) **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೪. ಸುಧಾ ಸೀತಾರಾಮನ್, **ಮಹಿಳಾ ಅಧ್ಯಯನ ಸಮಾಜಶಾಸ್ತ್ರೀಯ ದೃಷ್ಟಿಕೋನ**, ಸ್ತ್ರೀಲೇಖ ಪ್ರಕಟಣೆ ಬೆಂಗಳೂರು, ೨೦೧೦

೧೫. ಸುಮಿತ್ರಾಬಾಯಿ ಜಿ.ಎಸ್., **ಸ್ತ್ರೀವಾದ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

೨. ಮಾತುಕತೆ

**ಎಂ.ಎಸ್.ಆಶಾದೇವಿ ಅವರೊಂದಿಗೆ ಮಾತುಕತೆ**

**ನಮಸ್ಕಾರ ಮೇಡಂ, ನೀವು ಹುಟ್ಟಿ ಬೆಳೆದ ಪರಿಸರ, ಶಿಕ್ಷಣದ ಬಗ್ಗೆ ಹೇಳುವಿರಾ?**

**ಎಂ.ಎಸ್.ಆಶಾದೇವಿ:** ಹುಟ್ಟಿ ಬೆಳೆದ ಪರಿಸರ ಅಂದ್ರೆ ನಮ್ಮ ತಂದೆ ಸರ್ಕಾರಿ ನೌಕರಿಯಲ್ಲಿ ಇದ್ದರು. ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಅಧಿಕಾರಿಯಾಗಿದ್ದರು. ಮನೇಲಿ ಅಪ್ಪ ಅಮ್ಮಗೆ ಓದಿನ ಬಗೆಗೆ ಅಪಾರವಾದ ಪ್ರೀತಿ ಇತ್ತು. ಅಮ್ಮ ಹೋಮ್‌ಮೇಕರ್ ಆಗಿದ್ರೂ ಕೂಡ ಒಂಬತ್ತು ಗಂಟೆ ಅನ್ನೋ ಹೊತ್ತಿಗೆ ಅವರ ಕೈಯಲ್ಲಿ ಒಂದು ಪುಸ್ತಕ ಇರೋದು. ಎಲ್ಲಾ ಮನೆ ಕೆಲಸ ಮುಗಿಸಿಬಿಟ್ಟು ಓದುವುದಕ್ಕೆ ಕುಳಿತುಕೊಂಡು ಬಿಡುತ್ತಿದ್ದರು. ಆದ್ದರಿಂದ ಓದಿನ ವಾತಾವರಣ ತುಂಬಾ ಇತ್ತು. ನಮ್ಮ ತಂದೆಗೆ ಥಿಯೇಟರ್‌ನಲ್ಲಿ ತುಂಬಾ ಆಸಕ್ತಿ ಇತ್ತು. ಮೂರು–ಮೂರು ವರ್ಷಕ್ಕೆ ಒಂದೊಂದು ಊರನ್ನು ಸುತ್ತುತ್ತಾ ಇದ್ದೆವು. ಅಲ್ಲಿ ಒಂದೊಳ್ಳೆಯ ನಾಟಕ ಇದ್ದರೆ, ಒಂದೊಳ್ಳೆ ಪುಸ್ತಕ ಬಂದರೆ, ಒಂದೊಳ್ಳೆ ಲೇಖನ ಬಂದರೆ, ನಮ್ಮ ತಂದೆ–ತಾಯಿ ಜೊತೆಯಲ್ಲಿ ಚರ್ಚೆ ಮಾಡ್ತಾ ಇದ್ದೆ. ಇವೆಲ್ಲದರಿಂದ ನನಗೆ ಪ್ರಗತಿಪರ ಆಲೋಚನೆ ಬೆಳೆಯುತ್ತಾ ಇತ್ತು. ಬದಲಾಗುತ್ತಾ ಹೋದ ಊರುಗಳು, ಸ್ನೇಹಿತರು ಇವೆಲ್ಲದರ ಪ್ರಭಾವ ತುಂಬಾ ಪ್ರಮಾಣದಲ್ಲಿ ಇದೆ. ಇನ್ನು ಶಿಕ್ಷಣದ ಬಗ್ಗೆ ಹೇಳಬೇಕಂದ್ರೆ ತಿಪಟೂರು, ಚನ್ನಪಟ್ಟಣ, ಜಮಖಂಡಿ. ನಂತರ ಡಿಗ್ರಿಗೆ ಬರುವ ಹೊತ್ತಿಗೆ ಬೆಂಗಳೂರಿಗೆ ಬಂದಿವಿ. ಬಿ.ಎ.ನಲ್ಲಿ ವಿದ್ಯಾವರ್ಧಕಕ್ಕೆ ಸೇರಿಕೊಂಡೆ. ಹೀಗೆ ಅಲ್ಲಿ ಎಂ. ಸಿ. ಪ್ರಕಾಶ್, ಪಿ.ಎಸ್. ಗೀತಾ, ಕರ್ಜಗಿ ಇದ್ದರು. ಒಂದು ಒಳ್ಳೆಯ ವಾತಾವರಣ ಇತ್ತು.

**'ನಾರೀಕೇಳಾ' ಕಾಲಂ ಬರೆಯಲು ಪ್ರೇರಣೆ ಏನು? ವಿವರಿಸುವಿರಾ?**

**ಆಶಾ:** ಒಂದು ಕಾಲಂ ಅನ್ನು ಬರೆಯಿರಿ ಅಂತ 'ಪ್ರಜಾವಾಣಿ'ಯವರು ಕೇಳ್ತಾ ಇದ್ದರು. ನನಗೆ ಒಂದು ಚೂರು ಒಳಗಿನಿಂದ ಆತಂಕ ಇತ್ತು, ಅಂದ್ರೆ ನನ್ನ ವಿಮರ್ಶೆಯ ಭಾಷೆಯ ಬಗೆಗೆ ಅದು ಸಾಮಾನ್ಯರನ್ನು ತಲುಪದೆ ಹೋದ್ರೆ ಅಂತ. ಏಕೆಂದರೆ ರಹಮತ್ ಸೇರಿದಂತೆ ತುಂಬಾ ಜನ ನೀನು ಮಾತನಾಡುವುದು ತಲೆ ಮೇಲಿಂದ ಹಾರಿಕೊಂಡು ಹೋಗುತ್ತೆ ಅಂತೆಲ್ಲ ಮಾತಾಡ್ತ ಇದ್ರು, ಇದರಿಂದ ನನಗೊಂದು ಹಿಂಜರಿಕೆ ಇತ್ತು. ಆದರೆ ಈ ಒಂದು ಪ್ರಯತ್ನವನ್ನು ಪ್ರಯೋಗವನ್ನು ಮಾಡಬೇಕು ಅಂತ ತುಂಬಾ ಆಸೆನೂ ಇತ್ತು. ಆದ್ದರಿಂದ ಹೀಗೆ ಒಂದು ಅವಕಾಶ ಬಂದಾಗ ನನ್ನ ಶೀರ್ಷಿಕೆ ಏನಾಗಿರಬಹುದು ಅಂತ ತುಂಬಾ ಚರ್ಚೆ ಮಾಡಿದ್ದೆ ಕೊನೆಗೆ ಅಂತಿಮವಾದ ಹೆಸರು ಇದು. ಈ ಒಂದು ಶೀರ್ಷಿಕೆಯನ್ನು ಎರಡು–ಮೂರು ಥರದಲ್ಲಿ ನೋಡಬಹುದು. 'ನಾರೀಕೇಳಾ' ಅಂದ್ರೆ ನಮಗೆ ಬೇಕಾದ ಬಿಡುಗಡೆಯನ್ನು ನಾರಿಯರು ಇವತ್ತು ನಾವೇ ಪಡೆದುಕೋಬೇಕು ಅಂತ. ಆದ್ದರಿಂದ ಅದು 'ಹೇಳತೇನ ಕೇಳಾ' ಅಂತೀವಲ್ಲಾ ಹಾಗೇ. ನಾವ್ ನಾವೇ ಮಾತಾಡಿಕೋಬೇಕು. ನಾವ್ ನಾವೇ ಕೇಳಬೇಕು. ನಾವು ಹೇಳಿದ್ದನ್ನು ಅವರು ಕೇಳಬೇಕು. ಅವರು ಹೇಳಿದ್ದನ್ನು ನಾನು ಕೇಳಬೇಕು. ನಾವು ಯಾವಾಗಲೂ ಏನನ್ನು ಅಂದುಕೊಳ್ಳುತ್ತಾ ಇದ್ದೀವಿ ಅಂದ್ರೆ, ಈ ಪಿತೃಸಂಸ್ಕೃತಿ ಅಧಿಕಾರ ಕೇಂದ್ರದಲ್ಲಿ ಇರುವುದರಿಂದ ಅದು ಬದಲಾವಣೆಗೆ ಮುಂದೊಡಗನ್ನು ತಗೋಬೇಕು ಅಂತ. ಅದೇನೋ

ಬದಲಾವಣೆಗಳನ್ನು ಮಾಡಿದರೆ ನಮ್ಮ ಜೀವನವನದಲ್ಲಿ ಬದಲಾವಣೆಗಳು ಆಗುತ್ತವೆ. ಆದರೆ ಇವತ್ತು ಗೊತ್ತಾಗಿರುವ ಸತ್ಯ ಏನು ಅಂದ್ರೆ, ಅದು ಬದಲಾಗುತ್ತೋ ಬದಲಾಗಲ್ಲೋ, ಇವತ್ತು ನಮ್ಮಲ್ಲಿ ನಾವು ಒಂದು ಬದಲಾವಣೆಯನ್ನು ಮಾಡಿಕೊಳ್ಳಬೇಕು ಅಂತ. ನಮ್ಮಲ್ಲಿ ನಾವು ಬದಲಾವಣೆಯನ್ನು ಮಾಡಿಕೊಂಡರೆ ಆಗ ನಾವು ಸಮಾಜವನ್ನು ಬದಲಾವಣೆ ಮಾಡಬಹುದು. ಮತ್ತೆ ಇದು ಒಂದು ರೀತಿಯಲ್ಲಿ ಸ್ವಗತನೂ ಹೌದು. ಯಾವ ಬಸವಣ್ಣ 'ಕಳಬೇಡ, ಕೊಲಬೇಡ' ಅಂತ ಅವನಿಗೆ ಅವನೇ ಹೇಳಿಕೊಳ್ಳುವುದು ಆಗಿದೆಯೋ, ಇಡೀ 'ನಾರಿಕೇಳಾ' ನನಗೆ ನಾನೇ ಹೇಳಿಕೊಳ್ಳುತ್ತಿರುವ ಮಾತು. ನಾನೇ ರೀ ರೀಡಿಂಗ್ ಮಾಡ್ತಾ ಇರೋದು ಹೌದು. ಅದು ಲೌಡ್ ಥಿಂಕಿಂಗ್ ಕೂಡಾ ಹೌದು. ಅದನ್ನು ನನ್ನ ಜೊತೆಯಲ್ಲಿರುವ ಎಲ್ಲರ ಜೊತೆಯಲ್ಲಿ ಹಂಚಿಕೊಳ್ಳುತ್ತಾ ಇದೀನಿ. ಉದಾಹರಣೆಗೆ, ಪುರುಷರು ಅದನ್ನು ಯಾವ ಥರ ನೋಡುತ್ತಾರೆ. ಯಾವ ಥರ ತಗೋಳ್ತಾರೆ ಅನ್ನುವ ಕುತೂಹಲ ನನಗೆ ಇದೆ. ತೆಗದುಕೊಳ್ಳಬೇಕು ಅನ್ನೋದರ ಬಗೆಗೆ ನನಗೆ ನಿರೀಕ್ಷೆ ಇದೆ. ಎಲ್ಲಾನೂ ಇದೆ. ಬಟ್ ಇನ್ ದಿ ಸೇಮ್ ಟೈಮ್, ಇದು ಈ ಹೊತ್ತಿನ ಅಗತ್ಯ ಅಂತ ಅಂದುಕೊಂಡಿದ್ದೀನಿ. ಇದು ಈ ಕಾಲದ ಜೊತೆಯಲ್ಲಿ ನಡೆಸುತ್ತಿರುವ ಮಾತುಕತೆನೂ ಹೌದು ಅನಿಸುತ್ತೆ ನನಗೆ.

**ನಿಮ್ಮ ಸಾಹಿತ್ಯ ಚಿಂತನೆಯ ಮೇಲೆ ಹೆಚ್ಚು ಪ್ರಭಾವ ಬೀರಿದ ಗುರುಗಳು ಯಾರು? ಅವರ ಪಾಠಕ್ರಮ, ಕಾರ್ಯವೈಖರಿ ಬಗ್ಗೆ ಹೇಳುವಿರಾ?**

**ಆಶಾ:** ಒಂದು ದೊಡ್ಡ ಗುರು ಪರಂಪರೆನೇ ಇದೆ. ಹೇಳಿದ್ನಲ್ಲಾ ನಮ್ಮ ಅಮ್ಮಾನೇ ಮೊದಲ ಸ್ತ್ರೀವಾದಿ ಗುರು. ಆದ್ದರಿಂದ 'ನಾರೀಕೇಳಾ'ವನ್ನು ನಮ್ಮ ಅಮ್ಮನಿಗೆ ಅರ್ಪಿಸುತ್ತಿದ್ದೇನೆ. ಎಲ್ಲಾ ಹೆಣ್ಣುಮಕ್ಕಳಿಗೂ ಕೂಡ ಒಂದು ಸೆಲ್ಫ್ ಅವೆರ್‌ನೆಸ್ ಇರುತ್ತದೆ. ಅವರು ಅಮ್ಮಂದಿರನ್ನು ಸೂಕ್ಷ್ಮವಾಗಿ ಗಮನಿಸಿದರೆ ಅವರಿಂದಲೇ ಗೊತ್ತಾಗುತ್ತದೆ. ನಾನು ಬಿ.ಎ. ಮಾಡುತ್ತಿರುವಾಗ ನಮ್ಮ ಅರ್ಥಶಾಸ್ತ್ರದ ಮೇಡಂ ಪಾಠ ಮಾಡುವಾಗ ನನಗೆ ಯಾವಾಗಲೂ ಅನ್ನಿಸುತ್ತಾ ಇತ್ತು- ಹಣಕಾಸನ್ನು ಹೆಂಗೆ ಮ್ಯಾನೇಜ್ ಮಾಡಬೇಕು ಅನ್ನುವುದು. ನಮ್ಮ ಅಮ್ಮ ಅವಳ ತಿಂಗಳ ಬಜೆಟ್ ಅನ್ನು ಹೇಗೆ ಮಾಡ್ತಾಳೆ ಅಲ್ವಾ? ಬಹಳ ದೊಡ್ಡ ಎಕೊನಾಮಿಸ್ಟ್ ನಮ್ಮ ಅಮ್ಮಂದಿರು ನಮಗೆ ಅನ್ನಿಸುತ್ತಾ ಇತ್ತು. ಆದರೆ ನನಗೆ ಲಿಟರರಿ ಸೆನ್ಸಿಬಲಿಟಿ ದೃಷ್ಟಿಯಿಂದ ಡಿ.ಆರ್.ನಾಗರಾಜ್, ಕಿ.ರಂ.ನಾಗರಾಜ್, ಸೌಮಿತ್ರಾ ಚಕ್ರವರ್ತಿ, ಪಿ.ಎಸ್.ಗೀತಾ, ಎಂ.ಸಿ.ಪ್ರಕಾಶ್ ಆ ಮೇಲಿನ ದಿನಗಳಲ್ಲಿ ಅನಂತಮೂರ್ತಿಯವರು, ಕಲಬುರ್ಗಿ ಅವರು ಪ್ರಭಾವ ಬೀರಿದ್ದಾರೆ.

**ಡಿ.ಆರ್.ನಾಗರಾಜ್ ಅವರು ನಿಮ್ಮ ಚಿಂತನೆಗೆ ಯಾವ ರೀತಿ ಪ್ರಭಾವ ಬೀರಿದ್ದಾರೆ?**

**ಆಶಾ:** ಯಾವ ಥರ ಅಂತ ಅಂದ್ರೆ, ಸ್ತ್ರೀವಾದಿ ಹಿನ್ನೆಲೆಯಲ್ಲಿ ನನಗೆ ಒಳಗಿನಿಂದ ಒಂದು ಅಸ್ಪಷ್ಟತೆ ಇತ್ತಲ್ವಾ, ಅದಕ್ಕೊಂದು ತಾತ್ವಿಕವಾದ ಸ್ಪಷ್ಟತೆಯನ್ನು, ಬೌದ್ಧಿಕವಾದ ದಿಕ್ಸೂಚಿಯನ್ನು ನನಗೆ ಕೊಟ್ಟವರು ಡಿ.ಆರ್.ನಾಗರಾಜ್. ಆಗ ಅವರು ಅಕ್ಷರ ಚಿಂತನಾ ಮಾಲೆಯನ್ನು ಮಾಡುತ್ತಾ ಇದ್ದರು. ಆವಾಗ ನನಗೆ ಹೆಚ್ಚು ಸ್ಪಷ್ಟವಾಗುತ್ತಾ ಹೋಯ್ತು ಅನಿಸುತ್ತೆ.

**ಪುರಾಣದ ಅಹಲ್ಯೆ, ಸೀತೆ, ದ್ರೌಪದಿ, ಶಾಕುಂತಲೆ ಇತರೆ ಪ್ರಧಾನಧಾರೆಯ ಪಾತ್ರಗಳನ್ನು ಹೆಚ್ಚು ಚರ್ಚೆಗೆ ಒಳಪಡಿಸಿದಂತೆ. ಪ್ರಧಾನದ ಅಂಚಿನಲ್ಲಿರುವ ಅಂದರೆ ಮಂಡೋದರಿ, ಸಾವಿತ್ರಿ ಪಾತ್ರಗಳ ಬಗ್ಗೆ ಏಕೆ ಚರ್ಚಿಸಿಲ್ಲ. ಹಾಗಾಗಿ ಆಯ್ಕೆಯ ಮೂಲಕ ಪರಂಪರೆ ಕಟ್ಟುತ್ತೀರಾ?**

**ಆಶಾ:** ಅವರನ್ನು ಚರ್ಚಿಸಬಾರದು ಅಂತ ಇರಲಿಲ್ಲ. ಅಹಲ್ಯೆ, ಸೀತೆ, ದ್ರೌಪದಿ ಇನ್ನೊಂದು ಕಡೆ ಇರುವ ಮಂಡೋದರಿ, ಸಾವಿತ್ರಿ ಇವತ್ತು ನಮ್ಮ ದಿನ ನಿತ್ಯದ ಬದುಕಿನಲ್ಲಿ ಮತ್ತೆ ಮತ್ತೆ ಚರ್ಚೆಗೆ ತೆಗೆದುಕೊಳ್ಳುವ ಪಾತ್ರಗಳು ಯಾವುವು. ಅದು ಸೀತೆ, ದ್ರೌಪದಿಯನ್ನೇ ಹೊರತು, ಆ ಪ್ರಮಾಣದಲ್ಲಿ ಮಂಡೋದರಿ ಸಾವಿತ್ರಿಯರನ್ನಲ್ಲಾ. ಅವರ ಬಗೆಗೆ ಚರ್ಚೆ ಮಾಡಬಾರದು ಅನ್ನುವುದು ಇಲ್ಲವೇ ಇಲ್ಲ. ನೀವು 'ನಾರೀಕೇಳಾ' ಬಗೆಗೆ ಈ ಪ್ರಶ್ನೆ ಕೇಳುತ್ತಿದ್ದೀರಾ ಅಂದರೆ, 'ನಾರೀಕೇಳಾ'ನ ನಾನು ಶುರುಮಾಡಿದ್ದು ಒಂದು ವರ್ಷದ ಮಟ್ಟಿಗೆ ಅಂತ. ಆಮೇಲೆ ಅದನ್ನು ಎರಡು ವರ್ಷಕ್ಕೆ ಮುಂದುವರೆಸಿದೆ. ಆವಾಗ ನನಗೆ ಒಂದು ಕಡೆ ಪೌರಾಣಿಕ ಪಾತ್ರಗಳು, ಒಂದು ಕಡೆ ಐತಿಹಾಸಿಕ ಪಾತ್ರಗಳು,. ಇನ್ನೊಂದು ಕಡೆ ಸಾರ್ವಜನಿಕ ವ್ಯಕ್ತಿತ್ವಗಳು. ಇವೆಲ್ಲದಕ್ಕೂ ನಾನು ಅವಕಾಶ ಕೊಟ್ಟುಕೋಬೇಕು ಅನ್ನೋದು ಇತ್ತು. ಆದ್ದರಿಂದ ನಾನು ಇನ್ನು ಒಂದು ವರ್ಷ ಮುಂದುವರಿಸಿದ್ರೆ, ಖಂಡಿತಾ ಮಂಡೋದರಿನೂ, ಸಾವಿತ್ರಿನೂ ಚರ್ಚಿಸುತ್ತಾ ಇದ್ದೆ. ಆದ್ದರಿಂದ ಸ್ತ್ರೀವಾದವನ್ನು ಪಿತೃಸಂಸ್ಕೃತಿಯ ಹುಟ್ಟಿನ ಜೊತೆನಲ್ಲೇ ಸಮೀಕರಿಸ್ತೀನಿ. ಅದು ಇನ್ನು ಯಾವತ್ತಿನದೋ ಬೆಳವಣಿಗೆ ಅಂತ ಹೇಳಲ್ಲಾ, ಯಾವತ್ತು ಪಿತೃಸಮಾಜ ಹುಟ್ಟಿತೋ, ಆವತ್ತೇ ಸ್ತ್ರೀವಾದವು ಹುಟ್ಟಿದೆ ಅಂತಲೇ ಹೇಳುತ್ತಾ ಇರೋದು. ಯಾವ ನೀವು ಸಾವಿತ್ರಿಯ ಬಗೆಗೆ ಮಾತಾಡ್ತಾ ಇದ್ದೀರಿ ಅಲ್ವಾ? ಆ ಸಾವಿತ್ರಿ ಅನ್ನುವವಳು ಕೂಡ ಯಾವ ಸಾಂಸ್ಕೃತಿಕ ಸ್ತ್ರೀವಾದವನ್ನು ನಾನು ಇವತ್ತು ಬಹಳ ಮುಖ್ಯವಾದದ್ದು ಅಂತ ಎತ್ತಿ ಹಿಡಿತಿದ್ದೇನೋ, ಅದೇ ಸಾಂಸ್ಕೃತಿಕ ಸ್ತ್ರೀವಾದದ ಪ್ರತಿನಿಧಿ ಸಾವಿತ್ರಿ. ಅವಳು ತನ್ನ ಗಂಡನನ್ನು ಉಳಿಸಿಕೊಳ್ಳುವ ಕ್ರಮ ಇದೆಯಲ್ಲಾ ಅದು ಹೆಣ್ಣಿನ ರಕ್ಷಕ ಶಕ್ತಿ, ಪೊರೆಯುವ ಶಕ್ತಿ. ಎಂತಹವರನ್ನು ತನ್ನ ಜೊತೆಯಲ್ಲಿ ಉಳಿಸಿಕೊಳ್ಳಬೇಕು ನಾಶ ಅನ್ನೋದು ಅಲ್ಲ ಆದಷ್ಟು ಅದನ್ನು ಉಳಿಸಿಕೊಳ್ಳಬೇಕು. ಅದನ್ನು ಪ್ರೀತಿಯಿಂದ ಗೆಲ್ಲಬೇಕು ಅನ್ನುವುದೇ ಹೆಣ್ಣಿನ ಮೂಲ ದೃಷ್ಟಿಕೋನ ಎಂಬ ದೊಡ್ಡ ಪ್ರತಿನಿಧಿಯಾಗಿ ಸಾವಿತ್ರಿ ನಿಂತುಕೊಳ್ಳುತ್ತಾಳೆ.

**ಸ್ತ್ರೀವಾದವನ್ನು ಪರಂಪರೆ, ಚರಿತ್ರೆ ಮತ್ತು ಸಾಹಿತ್ಯ ಕೃತಿಗಳ ಮೂಲಕ ವಿಸ್ತರಿಸುತ್ತೀರಿ. ಆದರೆ ವರ್ತಮಾನದ ಮಹಿಳಾ ಶೋಷಣೆ ಮತ್ತು ಸಮಸ್ಯೆಗಳಿಗೆ ಹೆಚ್ಚಾಗಿ ಪ್ರತಿಕ್ರಿಯೆ ನೀಡಿಲ್ಲಾ ಏಕೆ?**

**ಆಶಾ:** ಇದು ಒಂದು ಅಜೆಂಡಾ ಇಟ್ಟುಕೊಂಡಿರುವ ಪ್ರಶ್ನೆ. ಯಾಕೆ ಅಂತ ಹೇಳ್ತೀನಿ, ಬೇಸಿಕಲಿ ನಾನು ಒಬ್ಬ ವಿಮರ್ಶಕಿ. ನಾನು ಶುರುಮಾಡಿದ್ದು ವಿಮರ್ಶೆಯಿಂದ, ಆಮೇಲೆ ಸ್ತ್ರೀವಾದವನ್ನು ನಾನು ನನ್ನ ಆದ್ಯತೆಯಲ್ಲಿ ಇಟ್ಟುಕೊಂಡಿದ್ದೀನಿ ಅನ್ನೋದು ನಿಜ. ಮತ್ತೆ ಆ ಸ್ತ್ರೀವಾದವನ್ನು ಬದುಕಿನ ಎಲ್ಲಾ ಕ್ಷೇತ್ರಗಳಿಂದ ಕಟ್ಟುವುದಕ್ಕೆ ನಾನು ಪ್ರಯತ್ನ ಪಡ್ತಾ ಇದೀನಿ ಅನ್ನೋದು ಮುಗಿದು ಹೋಗಿ ಬಿಟ್ಟಿದೆ. ನನ್ನ ಎಲ್ಲಾ ಧ್ವನಿ ಅಂತ ಬಂದು ಬಿಡುತ್ತೆ, ಹಾಗಾಗ್ಬೇಕಾಗಿಲ್ಲ. 'ನಾರೀಕೇಳಾ'ದ ಶುರುವಿನಲ್ಲಿ ಒಂದು ಟಿಪ್ಪಣಿ ಕೊಟ್ಟಿದ್ದೆ. ಅದರಲ್ಲಿ ನಾನು ಕನ್ನಡ ಮತ್ತು ಇತರ ಭಾರತೀಯ ಸಾಹಿತ್ಯದ ಪ್ರಮುಖ ಸ್ತ್ರೀಪಾತ್ರಗಳನ್ನು ಮರು ಓದಿಗೆ ಒಳಗು ಮಾಡೋದು ಈ 'ಕಾಲಂ'ನ ಉದ್ದೇಶ ಅಂತ ಹೇಳಿದ್ದೀನಿ. ನಾನು ನನ್ನ 'ಕಾಲಂ' ಅನ್ನು ಸಾಹಿತ್ಯದಿಂದ ಶುರುಮಾಡಿದವಳು. ಆ ಮೇಲೆ ಅದರಲ್ಲಿ ಚೂರು ಬದಲಾವಣೆಯನ್ನು

ತರುವುದಕ್ಕೆ, ಸಿನಿಮಾ, ಸಂಗೀತ ಮತ್ತು ರಾಜಕೀಯ ಕ್ಷೇತ್ರಗಳಿಗೆ ಹೊರಳಿಕೊಂಡಿದ್ದೇನೆ. ಇದರರ್ಥ ನಾನು ವರ್ತಮಾನದ ಕಡೆಗೆ ಕುರುಡು ಗಣ್ಣಿನವಳು, ಮಂಜುಗಣ್ಣಿನವಳು ಅಥವಾ ಅದನ್ನು ತಿರಸ್ಕರಿಸುತ್ತಾ ಇದ್ದೀನಿ ಅಂತ ಅಲ್ವೇ ಅಲ್ಲಾ. ನಾನು ನಿಜವಾಗಿ 'ನಾರೀಕೇಳಾ'ದ ಮೂಲಕ ಕಟ್ಟುವುದಕ್ಕೆ ಪ್ರಯತ್ನ ಮಾಡಿರುವುದು ಏನು ಅಂದ್ರೆ, ಹೆಣ್ಣಿನ ಒಳಗೆ ಯಾವಾಗಲೂ ಒಂದು ಶಕ್ತಿಕೇಂದ್ರ ಇದೆಯಲ್ಲ ಆ ಶಕ್ತಿಕೇಂದ್ರ ಎಲ್ಲಾ ಥರದಲ್ಲೂ ಅದು ಕೆಲಸ ಮಾಡುತ್ತಾ ಇರುತ್ತೆ. ನಮಗೆ ನೋಡುವುದಕ್ಕೆ ಒಂದು ದೃಷ್ಟಿಕೋನ ಬೇಕು ಅಷ್ಟೇ. ಮುಖ್ಯ ಉದಾಹರಣೆ ಅಂದರೆ ನಮ್ಮ ಮೊದಲನೇ ಕಾಲಂ ಅನ್ನು ನೀವು ನೋಡಿದರೆ, 'ಗಂಗವ್ವ ಗಂಗಾಮಾಯಿ'. ಅದರಲ್ಲಿ ನಾನು ಹೇಳುವುದಕ್ಕೆ ಪ್ರಯತ್ನ ಮಾಡಿದ್ದು ಏನನ್ನು? ಯಾವ ಗಂಗವ್ವ ಗಂಗಾಮಾಯಿಯನ್ನು ಪುಣೇಕರರ ಶ್ರೇಷ್ಠ ಕಾದಂಬರಿ ಅಂತ ತಿಳಿದುಕೊಂಡಿದ್ದೇವೆಯೋ ಅದನ್ನು ಒಂದು ವರ್ಕ್ ಆಫ್ ಆರ್ಟ್‌ನಲ್ಲಿ ಮಾತ್ರ ನೋಡಲಾಗಿತ್ತು. ಆದರೆ ನಾನು ಅದನ್ನು ವಿಮೆನ್ ಓರಿಯೆಂಟೆಡ್ ಆಗಿ ನೋಡುವುದಕ್ಕೆ ಪ್ರಯತ್ನ ಮಾಡುತ್ತಾ ಇದೀನಿ. ಅಂದರೆ, ಅಲ್ಲಿ ಗಂಗವ್ವ ಇದಾಳಲ್ಲ ಸ್ವಲ್ಪ ಒರಟಾದ, ಸ್ವಲ್ಪ ರೂಕ್ಷವಾದ, ತಾಯಿ ಅಂತಲೇ ನೋಡಿ ಬಿಡಬಹುದು. ಇನ್ನು ಚೂರು ಉಚಾಯಿಸಿ ಹೇಳಬಹುದಾದರೆ, ಕ್ರೂರಿಯಾದ ಅಮ್ಮ ಅಂತಲೂ ಅನಿಸಿಬಿಡಬಹುದು. ಆದರೆ ನಾನು ಅದೆಲ್ಲಾ ಮಾಡ್ತಾ ಇರುವಾಗ್ಲೂ ಒಬ್ಬ ತಾಯಿಯಾಗಿ ಅವಳಿಗೆ ತನ್ನ ಮಗು, ಅದರ ಜೀವನ, ಅದರ ವ್ಯಕ್ತಿತ್ವ, ಅದರ ಕಾಳಜಿ, ಅದರ ಭವಿಷ್ಯ ಅದಷ್ಟೇ ಮುಖ್ಯವಾಗುತ್ತದೆ. ತನ್ನ ಮಗುವಿನ ಭವಿಷ್ಯವನ್ನು ಕಾಪಾಡುವುದಕ್ಕೆ ಯಾವ ಆತಿಗೆ ಬೇಕಾದರೂ ಒಬ್ಬ ತಾಯಿ ಹೋಗುತ್ತಾಳೆ ಅನ್ನುವುದು, ಒಂದು ತಾಯ್ತನದ ಶಕ್ತಿಯನ್ನು ಹೇಳಬೇಕೇ ಹೊರತು, ನಾವು ಅದನ್ನು ಕ್ರೌರ್ಯ ಅಂತ ನೋಡಬಾರದು. ಅಂತಲೇ ನಾನು ಹೇಳುವುದಕ್ಕೆ ಪ್ರಯತ್ನ ಪಡುತ್ತಾ ಇದ್ದೀನಿ, ಅಲ್ವಾ? ಅದನ್ನು ನಾನು ಈ ಕಾಲಂನಲ್ಲಿ ಸೇರಿಸಿಕೊಳ್ಳಲಿಲ್ಲ. ಆದರೆ ಅದೇ ಪ್ರಜಾವಾಣಿಯಲ್ಲಿ ನಾನು ಕಾಲಂ ಬರೆಯುತ್ತಾ ಇದ್ದ ಕಾಲದಲ್ಲಿ ಡಿ.ಕೆ.ರವಿ ಪ್ರಸಂಗ ಆದಾಗ ವರ್ತಮಾನಕ್ಕೆ ಸ್ಪಂದಿಸಿದ್ದೇನೆ. ಆವಾಗಲೂ ನಾನು ಹೇಳಿದ್ದೇನು ಆ ರೋಹಿಣಿ ಅನ್ನುವ ಹೆಣ್ಣು ಮಗಳನ್ನು ಯಾಕೆ ಬಲಿಪಶು ಮಾಡುತ್ತಾ ಇದ್ದೀವಿ. ದಟ್ ಈಸ್ ದ ಪ್ರಾಬ್ಲಂ ಆಫ್ ದಿಸ್ ಮ್ಯಾನ್. ವೆದರ್ ಇಟೀಸ್ ಗಾಟ್ ರಿಲೇಶನ್‌ಶಿಪ್ ಈಸ್ ವಿತ್ ದಿಸ್ ವುಮನ್ ಆರ್ ನಾಟ್, ದಟ್ ಈಸ್ ಎ ಡಿಫರಂಟ್ ಇಶ್ಯು. ರೋಹಿಣಿಯ ಜೊತೆಗಿನ ಅವನ ಸ್ನೇಹದ ಕಾರಣಕ್ಕೆ ಆತ ಆತ್ಮಹತ್ಯೆ ಮಾಡಿಕೊಂಡಿದ್ದರೂನೂ ದಟ್ ಈಸ್ ದಿಸ್ ಪ್ರಾಬ್ಲೆಂ ಅಲ್ವಾ? ಅವನಿಗೆ ತನ್ನ ಎದುರಿಗಿರುವ ಒಂದು ವಾಸ್ತವವನ್ನು ಮುಖಾಮುಖಿ ಆಗುವುದಕ್ಕೆ ಬರಲಿಲ್ಲ. ಅದನ್ನು ನಿಭಾಯಿಸುವುದಕ್ಕೆ ಬರಲಿಲ್ಲ ಅಂತ ಅಂದ್ರೆ ದಟ್ ಈಸ್ ದಿಸ್ ಪ್ರಾಬ್ಲೆಂ. ಯಾಕೆ? ನೀವು ಈ ಹೆಣ್ಣು ಮಗಳನ್ನು ಹಿಂಸೆಗೆ ತರುತ್ತಾ ಇದ್ದೀರಾ, ಅಂತಲೇ ಹೇಳಿದ್ದು. ಅದು ನಾನು ವರ್ತಮಾನಕ್ಕೆ ಸ್ಪಂದಿಸಿದ್ದೇ ಆಗಿತ್ತು. ವರ್ತಮಾನಕ್ಕೆ ನಾನು ಸ್ಪಂದಿಸಿಲ್ಲ ಅನ್ನೋದಲ್ಲಾ, ಆ ಕಾಲಂಗೆ ನಾನೊಂದು ಚೌಕಟ್ಟು ಹಾಕಿಕೊಂಡಿದ್ದೆ. ಆ ಚೌಕಟ್ಟು ಏನಾಗಿತ್ತು ಅಂದರೆ ಸಾಹಿತ್ಯದ ಮುಖ್ಯ ಪಾತ್ರಗಳನ್ನು ಮರುಓದಿಗೆ, ಹೆಣ್ಣಿನ ನೋಟದಿಂದ ಅಂತ. ಇನ್ನೊಂದು ಉತ್ತರ ಕೊಡುತ್ತೇನೆ. ನಾನು ಅಲ್ಲಿ ಕಟ್ಟುವುದಕ್ಕೆ ಪ್ರಯತ್ನ ಪಟ್ಟ ನೋಟವನ್ನು ನಾವು ವರ್ತಮಾನಕ್ಕೆ ಎಕ್ಸ್‌ಟೆಂಡ್ ಮಾಡಿಕೊಂಡು ಬಿಟ್ಟರೆ, ನಾನು ಏನು ಹೇಳುವುದಕ್ಕೆ ಪ್ರಯತ್ನಾ ಮಾಡುತ್ತಾ ಇದ್ದೀನಿ ಅನ್ನುವುದು ಗೊತ್ತಾಗುತ್ತದೆ. ಮತ್ತೆ ಇಂದಿರಾಗಾಂಧಿ ಬಗ್ಗೆ ಬರೆದಿದ್ದೇನೆ. ಇಂದಿರಾಗಾಂಧಿ ಬಗ್ಗೆ ಬರೆದಿರುವುದಕ್ಕೆ ಎಕ್ಸ್‌ಟೆಂಡೆಡ್ ಟು ಜಯಲಲಿತಾ. ಜಯಲಲಿತಾ ಭ್ರಷ್ಟೆ ಅಂತ ಮಾತನಾಡುವ ಹೊತ್ತಿಗೆ ಅದರ ಮೂರು ಪಟ್ಟು ಭ್ರಷ್ಟಾಚಾರ ಮಾಡಿರುವವರನ್ನು ನಾವು

ಹೇಗೆ ನೋಡಬೇಕು? ಮತ್ತು ಮಹಿಳಾ ರಾಜಕಾರಣಿಗಳನ್ನು ನೋಡುವುದಕ್ಕೆ ನಮ್ಮಲ್ಲಿ ಒಂದು ಕೆಟ್ಟ ಕ್ರಮ ಇದೆಯಲ್ವಾ ಅಂತಹದ್ದನ್ನು ಹಾಗೇ ನೋಡಬೇಕಾಗಿಲ್ಲ. ಅನ್ನುವುದನ್ನು ಇಲ್ಲಿ ಹೇಳುತ್ತಾ ಇದ್ದೀನಿ.

**ನಿಮ್ಮ ಬಹುತೇಕ ಚರ್ಚೆಗಳಲ್ಲಿ ಜಾನಪದ ಮಹಿಳಾ ಸಾಹಿತ್ಯವನ್ನು ಹೆಚ್ಚು ವಿಶ್ಲೇಷಣೆಗೆ ಒಳಪಡಿಸಿಲ್ಲ ಏಕೆ?**

**ಆಶಾ:** ಜಾನಪದ ಸಾಹಿತ್ಯದ ಕೆಲವು ಮಹಿಳೆಯರನ್ನು ಪ್ರಮುಖವಾಗಿ 'ತತ್ವಪದಕಾರ್ತಿಯರು' ಅವರನ್ನು ನನ್ನ ಈ ಒಂದು ಕಾಲಂಗೆ ತರಬೇಕು ಅನ್ನುವುದು ಬಹಳ ಆಸೆಯಾಗಿತ್ತು. ನಟರಾಜ್ ಬೂದಾಳ್ ಅಂತಹವರ ಜೊತೆಯಲ್ಲಿ ಮಾತನ್ನು ಆಗಿದ್ದೆ. ಒಂದೆರಡು ದಿವಸ ತುಮಕೂರಿಗೆ ಕರೆದುಕೊಂಡು ಹೋಗ್ತೀನಿ ಅಂತ ಎಲ್ಲರೂ ಹೇಳಿದ್ದರು. 'ನಾರೀಕೇಳಾ' ಅನ್ನುವುದನ್ನು ಇಲ್ಲಿಗೆ ಕೊನೆ ಮಾಡುತ್ತಿದ್ದೇನೆ ಅಂತ ಆಗಬೇಕಾಗಿಲ್ಲ. ಅದು ಬೇರೆ-ಬೇರೆ ಥರದಲ್ಲಿ ಮುಂದುವರೆಯುತ್ತದೆ. ಹಾಗೂ ಜನಪದರ ಬಗೆಗೆ ಹೇಳಲೇಬೇಕಾದ ಕೆಲವು ಮುಖ್ಯವಾದ ಅಂಶಗಳು ನನಗೆ ಇವೆ. ಆದರೆ ನನ್ನ ಮುಂದಿನ ಬರವಣಿಗೆಗಳಲ್ಲಿ ಬಂದೇ ಬರುತ್ತದೆ.

**'ಕುಸುಮಬಾಲೆ' ಕೃತಿಯನ್ನು ಕುರಿತು ಇದು ಒಂದು ಸ್ತ್ರೀವಾದಿ ಪಠ್ಯ ಎಂಬ ಗ್ರಹಿಕೆ ಇದೆ. ನೀವು ಏಕೆ ಇದುವರೆಗೂ ಈ ಕೃತಿಯ ಬಗೆಗೆ ಪ್ರತಿಕ್ರಿಯೆ ನೀಡಿಲ್ಲಾ?**

**ಆಶಾ:** ಪ್ರತಿಕ್ರಿಯೆ ಬೇಕಾದಷ್ಟು ಕಡೆಗಳಲ್ಲಿ ನೀಡಿದ್ದೇನೆ. ಸಾಕವ್ವನ ಬಗೆಗೆ ಬರೆಯಬೇಕಾ? ಕುಸುಮಬಾಲೆ ಬಗೆಗೆ ಬರೆಯಬೇಕಾ? ಅಂತ ತುಂಬಾ ಯೋಚನೆ ಮಾಡಿದ್ದೀನಿ. ಕೊನೆಗೆ ಸಾಕವ್ವನನ್ನು ಆರಿಸಿಕೊಂಡೆ, ರಂಗ ಪ್ರಯೋಗದ ಮೂಲಕ ಅದು ತುಂಬಾ ಜನರನ್ನು ತಲುಪಿದೆ ಆದ್ದರಿಂದ ಸಾಕವ್ವನನ್ನು ಆರಿಸಿಕೊಂಡೆ. ಕುಸುಮಬಾಲೆ ಈಗಲೂ ನನ್ನ ಇಷ್ಟವಾದ ಹಿರೋಹಿನ್. ಐ ವಾಂಟ್ ಟು ಬಿ ಇನ್ ಮೈ ಹೌಸ್' ಅಂತ ಅವಳು ಹೇಳುವುದು ಇದೆಯಲ್ಲ, ಆ ಹೌಸ್ ಎನ್ನುವುದು ಉದ್ಧಾರದಲ್ಲಿ ಎಷ್ಟೋ ಬೇರೆ-ಬೇರೆ ಮಜಲುಗಳು, ಪದರಗಳು ಇವೆ ಅಂತ ಅನಿಸುತ್ತೆ. ಅಂದ್ರೆ ಅಲ್ಲಿ ಹೌಸ್ ಅನ್ನುವುದಕ್ಕೆ ಕುಸುಮಬಾಲೆ ಬೇರೆಯದೆ ಅರ್ಥವನ್ನು ಕೊಡುತ್ತಾ ಇದ್ದಾಳೆ. ಅಲ್ಲಿ ಹೌಸ್ ಅನ್ನುವುದು ನಾನು ಬದುಕುತ್ತಿರುವ ಫಿಸಿಕಲ್ ಮನೆ ಹೌದು. ನನ್ನ ಮನಸ್ಸಿನ ಮನೆ ಹೌದು, ನನ್ನ ವ್ಯಕ್ತಿತ್ವದ ಮನೆ ಹೌದು. ನಾನು ಕಟ್ಟಿಕೊಳ್ಳಬೇಕು ಅಂತ ಹೊರಡುವ ಸಖ್ಯದ ದಾಂಪತ್ಯದ ಮನೆ ಹೌದು. ಅಂದರೆ ತನ್ನ ಸ್ವಂತಿಕೆಗೆ, ಸ್ವಪ್ರಜ್ಞೆಗೆ ಅವಳು ನಡೆಸುತ್ತಿರುವ ಒಂದು ದೊಡ್ಡ ರೂಪಕ ಅದು, ಹೌಸ್ ಅನ್ನುವುದು ಬಹಳ ಬಹಳ ಶಕ್ತವಾದ ಒಂದು ಸ್ತ್ರೀರೂಪಕ ಅಂತ ಕರೆಯುತ್ತೇನೆ.

**ಸಾಹಿತ್ಯದ ಮೂಲಕ ಮಹಿಳೆ ತನ್ನ ಭಾಷೆಯನ್ನು ರೂಪಿಸಿಕೊಂಡ ತಕ್ಷಣ ಸಾಮಾಜಿಕವಾಗಿ ವರ್ತಮಾನದಲ್ಲಿ ಈ ಕೆಲಸ ಸಾಧಿಸಲು ಸಾಧ್ಯವೇ?**

**ಆಶಾ:** ಸಾಧ್ಯ ಯಥಾವತ್ತಾಗಿ ಆಗಿ ಬಿಡುತ್ತದೆ, ಏಕ್‌ದಮ್ ಆಗಿ ಬಿಡುತ್ತದೆ, ಅಲ್ಲಿಂದ ಅಲ್ಲಿಗೆ ಶಿಫ್ಟ್ ಆಗಿ ಬಿಡುತ್ತದೆ ಅಂತ ನಾನು ಅಂದುಕೊಂಡಿಲ್ಲ. ಆದರೆ ಆ ಪ್ರಕ್ರಿಯೆಯನ್ನು ಶುರುಮಾಡುವುದರಲ್ಲಿ, ಆ ಪ್ರಕ್ರಿಯೆಯನ್ನು ಮುಂದುವರಿಸುವುದರಲ್ಲಿ, ಆ ಪ್ರಕ್ರಿಯೆಯನ್ನು ಹೆಚ್ಚು ಬಲಪಡಿಸುವುದರಲ್ಲಿ ಈ ಭಾಷೆಗೆ ಬಹಳ ದೊಡ್ಡ ಪಾತ್ರವಿದೆ ಅಂತ ನಾನು ತಿಳಿದುಕೊಂಡಿದ್ದೇನೆ. ಇತ್ತೀಚಿನ ದಿನಗಳಲ್ಲಿ ನಾನು ಕಾವ್ಯವನ್ನು

ಹೆಣ್ಣಿನ ಭಾಷೆ ಅಂತ ಕಟ್ಟುವುದಕ್ಕೆ ನಡೆಸುತ್ತಿರುವ ಒಂದು ಪ್ರಕ್ರಿಯೆ ಇದೆಯಲ್ಲ. ಆ ಪ್ರಕ್ರಿಯೆ ಕೂಡ ಬಹಳ ಮುಖ್ಯ ಅಂತ ನನಗೆ ಯಾಕೆ ಅನಿಸುತ್ತೆ ಅಂದರೆ. ಪ್ರತಿಯೊಬ್ಬ ಹೆಣ್ಣಿನ ಒಳಗಡೆಯಲ್ಲೂ ಒಂದು ಕಾವ್ಯ ಭಾಷೆ ಇದ್ದೇ ಇರುತ್ತದೆ. ಹೆಣ್ಣಿನಲ್ಲಿ ಅದು ಇನ್ನು ಹೆಚ್ಚು ಶಕ್ತವಾಗಿ ಇರುತ್ತದೆ ಎಂದು ತಿಳಿದುಕೊಂಡಿದ್ದೇನೆ. ಏಕೆಂದರೆ ಈ ಪಿತೃ ಸಮಾಜದಲ್ಲಿ ಹೆಣ್ಣು ಆಡುವ ಭಾಷೆ ಇದೆಯಲ್ಲ. ಈ ಭಾಷೆಗೆ ಪಿತೃಸಮಾಜ ಕೊಡುವ ಅರ್ಥವೇ ಬೇರೆ ಮತ್ತು ಹೆಣ್ಣು ಉದ್ದೇಶಿಸಿರುವ ಅರ್ಥವೇ ಬೇರೆ ಅಂತ ನಾನು ಗಟ್ಟಿಯಾಗಿ ನಂಬಿದ್ದೇನೆ. ಬಹುತೇಕ ಸಂದರ್ಭಗಳಲ್ಲಿ ಹೆಣ್ಣಿನ ಮಾತುಗಳು ಪ್ರಶ್ನೆಯಲ್ಲಿಯೇ ಕೊನೆಗೊಳ್ಳುತ್ತವೆ. ಊಟಕ್ಕೆ ಬರ್ತೀರಾ? ಸಿನಿಮಾಕ್ಕೆ ಹೋಗೋಣವಾ? ಅಂತ ಯಾಕೆ, ಆದರೆ ಗಂಡಸರ ಮಾತು ನಿರ್ದಿಷ್ಟವಾಗಿ ಇರುತ್ತದೆ. ಇದೆಲ್ಲವು ಬಹಳ ಮುಖ್ಯವಾದ ಒಂದು ಪ್ರಕ್ರಿಯೆ ಅಂತ ತಿಳಿದುಕೊಂಡಿದ್ದೇನೆ. ಆದ್ದರಿಂದ ಮಹಿಳಾ ಭಾಷೆಗೆ ಒಂದು ಸಾಮಾಜಿಕ ಅಧಿಕೃತತೆ ಸಿಗಬೇಕು ಎನ್ನುವುದು ನನ್ನ ಆಶಯ. ಒಂದಾನೊಂದು ಕಾಲದಲ್ಲಿ ಸಿಕ್ಕೀತು ಮತ್ತು ಆ ಅಧಿಕೃತತೆ ಬಗೆಗೆ ಇನ್ನು ಒಂದು ಮಾತು ಹೇಳುತ್ತೇನೆ, ಸಾಮಾಜಿಕವಾದ ಅಧಿಕೃತತೆ ಅನ್ನುವುದು ಅದು ಯಾವುದು, ಯಾರು ಕೊಡಬೇಕಾದದ್ದು. ನಾನು ಅಂದುಕೊಂಡಿದ್ದೀನಿ ನಮಗೆ ನಾವೆ ಕೊಟ್ಟುಕೊಳ್ಳಬೇಕಾದದ್ದು ಮತ್ತು ಯಾವಾಗ ನಮಗೆ ನಾವೇ ಅಧೀಕೃತತೆಯನ್ನು ಕೊಟ್ಟುಕೊಳ್ಳುತ್ತೇವೋ ಆಗ ಅವರು ಅದನ್ನು ಅಧಿಕೃತ ಮಾಡಲೇಬೇಕಾದ ಒತ್ತಾಯಕ್ಕೆ ಸಿಕ್ಕಿಕೊಳ್ಳುತ್ತಾರೆ. ಅಂತ ಅಂದುಕೊಂಡಿದ್ದೇನೆ.

**ನೀವು ಕೂಡ ಮಹಿಳಾ ಭಾಷೆ ಬಳಸುತ್ತೀರಾ? ಅದರ ಸ್ವರೂಪವೇನು?**

**ಆಶಾ:** ಮಹಿಳಾ ಭಾಷೆಯನ್ನು ಬಳಸುವ ಪ್ರಯತ್ನದಲ್ಲಿಯೇ ಇದ್ದೇನೆ, ಕಟ್ಟುವ ಪ್ರಯತ್ನದಲ್ಲಿಯೇ ಇದ್ದೇನೆ. ಮಹಿಳಾ ಭಾಷೆ ಅನ್ನುವುದು ಇದೆಯಲ್ಲ ಅದು ಹೊಸ ಅರ್ಥಗಳನ್ನು ಸೃಜಿಸುವ ಒಂದು ಪ್ರಕ್ರಿಯೆಯಲ್ಲಿಯೇ ಇದೆ. ಈ ಒಂದು ಪ್ರಕ್ರಿಯೆಯಲ್ಲಿ ನಾವೆಲ್ಲರು ಇದ್ದೀವಿ ಅಂತಾನೇ ನಾನು ತಿಳಿದುಕೊಂಡಿದ್ದೇನೆ. ಮತ್ತು ಈ ಭಾಷೆಯನ್ನು ಎಷ್ಟು ಎಷ್ಟು ಪುರುಷರು ಅರ್ಥ ಮಾಡಿಕೊಳ್ಳುತ್ತಾರೊ, ಬಳಸುತ್ತಾರೊ ಅಷ್ಟು ಅಷ್ಟು ಅದು ಹೆಣ್ಣಿನ ಭಾಷೆಯಾಗುವುದಿಲ್ಲ ಒಂದು ಮನುಷ್ಯ ಭಾಷೆಯಾಗಿ, ಒಂದು ಮಾನವೀಯ ಭಾಷೆಯಾಗಿ, ಒಂದು ಅಂತಃಕರಣದ ಭಾಷೆಯಾಗಿ ಅದು ಡೆವಲಪ್ ಆಗುತ್ತದೆ. ಏಕೆ ಅಂದರೆ ಹೆಣ್ಣು ಕಟ್ಟುವುದಕ್ಕೆ ನಡೆಸುತ್ತಿರುವ ಅಥವಾ ಹೆಣ್ಣು ಬಳಸುವ ಬಳಸುತ್ತಿರುವ, ಹಿಂದಿನಿಂದ ಬಳಸುತ್ತಾ ಇದ್ದ ಒಂದು ಭಾಷೆ ಇದೆಯಲ್ಲ ಅದು ಅಂತಃಕರಣದ ಭಾಷೆ ಅಂತ ನಾನು ತಿಳಿದುಕೊಂಡಿದ್ದೇನೆ. ಇವತ್ತಿನ ಜಗತ್ತಿಗೆ ಅಂತಃಕರಣದ ಭಾಷೆ ಯಾವತ್ತಿಗಿಂತ ಹೆಚ್ಚು ಅಗತ್ಯವಾಗಿದೆ ಅಂತ ನನಗೆ ಅನಿಸುತ್ತದೆ.

**ಮೊದಲಿನಿಂದಲೂ ಮಹಿಳೆ ಸಾಹಿತ್ಯದ ಮೂಲಕ ಸಾಮಾಜಿಕ ಸ್ಥಾನ-ಮಾನಕ್ಕೆ ಹೋರಾಟ ಮಾಡಿಕೊಂಡೆ ಬಂದಿದ್ದಾಳೆ. ಇದರಿಂದ ಏನಾದರೂ ಬದಲಾವಣೆಗಳನ್ನು ಗುರುತಿಸುವಿರಾ? ಅಂದರೆ ಸಾಹಿತ್ಯಿಕವಾಗಿ ಹೋರಾಟ ಮಾಡಿದ ತಕ್ಷಣ ಸಾಮಾಜಿಕವಾಗಿ ಸಮಾನತೆ ಗಳಿಸಲು ಇದುವರೆಗೆ ಸಾಧ್ಯವಾಗಿದೆಯೇ? ಈ ಕುರಿತು ನಿಮ್ಮ ಅನಿಸಿಕೆ.**

**ಆಶಾ:** ಸಾಧ್ಯವಾಗಿದೆ ಅಂತ ನನಗೆ ಅನಿಸುತ್ತಾ ಇಲ್ಲ, ಆದರೆ ಅದು ಸಾಮಾಜಿಕ ಸ್ಥಾನಮಾನ ಅನ್ನೋದೆ ಬಹಳ ಮೇಲ್ ಓರಿಯಂಟೆಡ್ ಪ್ರಶ್ನೆ. ಯಾಕೆ ಅಂದರೆ ಈ ಸಾಮಾಜಿಕ ಸ್ಥಾನಮಾನ ಅನ್ನುವುದು ಯಾವುದು. ಇವಾಗ ಮಹಿಳೆಯನ್ನು 'ಹೌಸ್ ಮೇಕರ್' ಅಂದ ತಕ್ಷಣ ಅಲ್ಲಿ ಸಾಮಾಜಿಕ ಸ್ಥಾನಮಾನ ಸಿಗುತ್ತೆ. ಆದರೆ 'ಹೌಸ್‌ವೈಫ್' ಅಂದ ಕೂಡಲೆ ಸಾಮಾಜಿಕ ಸ್ಥಾನಮಾನ ಅಲ್ಲ ಅಂತ ಒಂದು ಮಿಥ್ಯೆಯನ್ನು, ಒಂದು ಸುಳ್ಳನ್ನು ಕೊಡಲಾಗಿದೆ. ಸಾಮಾಜಿಕ ಸ್ಥಾನಮಾನ ಅನ್ನುವುದು ಆಕಾಶದಿಂದ ಇಳಿಯಬೇಕಾಗಿರುವುದು ಅಲ್ಲ. ಇರುವುದಕ್ಕೆ ಸಿಗಬೇಕಾಗಿರುವ ಒಂದು ಪ್ರಕ್ರಿಯ ಅಲ್ವಾ ಇವತ್ತು ನಾನು ಒಂದು ಕಾಲೇಜಿನಲ್ಲಿ ಕೆಲಸ ಮಾಡುತ್ತಾ ಇದೀನಿ ಅನ್ನುವುದು ಇದೆಯಲ್ಲ ಆ ಸಾಮಾಜಿಕ ಸ್ಥಾನಮಾನಕ್ಕೆ, ಒಬ್ಬ ಹೌಸ್ ಮೇಕರ್‌ಗೆ ಸಿಗಬೇಕಾಗಿರುವ ಸಾಮಾಜಿಕ ಸ್ಥಾನಮಾನಕ್ಕೆ ವ್ಯತ್ಯಾಸ ಇರಬೇಕಾಗಿಲ್ಲ ಅನ್ನುವುದೇ ಹೆಣ್ಣಿನ ದೃಷ್ಟಿಯಲ್ಲಿ ಸಿಗಬೇಕಾಗಿರುವ ಸಾಮಾಜಿಕ ಸ್ಥಾನಮಾನ.

**ಮಹಿಳೆ ಮೊದಲಿನಿಂದಲೂ ಎಷ್ಟೆಲ್ಲಾ ಹೋರಾಟ ಮಾಡಿದರೂ ಮಹಿಳಾ ಸಾಹಿತ್ಯವನ್ನು ನೋಡುವ ದೃಷ್ಟಿಕೋನ ಬದಲಾಗಿದೆಯೇ, ಇದರ ಭಾಗವಾಗಿ ಮಹಿಳಾ ಸಾಹಿತ್ಯ ಎದುರಿಸುತ್ತಿರುವ ಸವಾಲುಗಳೇನು?**

**ಆಶಾ:** ಮಹಿಳೆಯರು ಹೋರಾಟ ಮಾಡಬೇಕು ಅನ್ನುವುದಕ್ಕಿಂತ ಹೆಚ್ಚಾಗಿ ಮಹಿಳೆಯರ ಸಾಹಿತ್ಯವನ್ನು ನೋಡಬೇಕಾಗಿರುವ ಕ್ರಮದಲ್ಲಿ ಯಾಕೆ ನಮಗೆ ಒಂದು ದೃಷ್ಟಿಕೋನವನ್ನು ಕಟ್ಟುವುದಕ್ಕೆ ಸಾಧ್ಯ ಆಗಲಿಲ್ಲ ಅಂತ. ಆದರೂ ಮಹಿಳಾ ಸಾಹಿತ್ಯವನ್ನು ನೋಡುವ ದೃಷ್ಟಿಕೋನ ನಿಧಾನವಾಗಿ ಬದಲಾಗುತ್ತಾ ಇದೆ ಅಂತ ಅನಿಸುತ್ತಾ ಇದೆ. ಏಕೆಂದರೆ ತುಂಬಾ ಜನ ನಮ್ಮ ಪ್ರಧಾನ ವಿಮರ್ಶಕರು ಅಂತ ತಿಳಿದುಕೊಂಡವರು ತಿಳಿದುಕೊಂಡಿದ್ದು ಏನು ಅಂದ್ರೆ, ಕೆಲವು ಹತ್ತು ಕೃತಿಗಳನ್ನು ವಿಮರ್ಶೆ ಮಾಡುತ್ತಾ ಇದ್ದರೆ ಅದರಲ್ಲಿ ಒಂದನ್ನು ಎರಡನ್ನೋ ಮಹಿಳೆಯರ ಕೃತಿಗಳನ್ನು ವಿಮರ್ಶೆ ಮಾಡಿಬಿಟ್ಟರೆ ನಮ್ಮ ಜವಾಬ್ದಾರಿ ಮುಗಿಯಿತು, ನಾವು ಅವರಿಗೆ ಕೊಡಬೇಕಾಗಿರುವ ಸ್ಥಾನ ಕೊಟ್ಟಿದ್ದೀವಿ ಅಂತ. ಪ್ರಶ್ನೆ ಅದಲ್ಲ. ನಮಗೆ ಬೇಕಾಗಿರುವುದು ಫೆಮಿನಿಸ್ಟ್ ಅಪ್ರೋಚ್, ಫೆಮಿನೈನ್ ಸೆನ್ಸಿಬಲಿಟಿ ಯಾವಾಗ ಬರುತ್ತದೋ ಆವಾಗ ಮಾತ್ರ ಮಹಿಳೆಯರ ಬರವಣಿಗೆಗೆ ನ್ಯಾಯವಾಗಿ ಸಲ್ಲಿಸಬೇಕಾಗಿರುವ ಸ್ಥಾನ ಸಿಗುತ್ತದೆ. ಇದರರ್ಥ ನಾವು ಮಹಿಳೆಯರು ಅನ್ನುವ ಕಾರಣಕ್ಕೆ ರಿಯಾಯಿತಿ ಕೇಳುತ್ತಾ ಇಲ್ಲ. ಮೀಸಲಾತಿಯನ್ನು ಕೇಳುತ್ತಾ ಇಲ್ಲ. ಒಂದು ವರ್ಕ್ ಆಫ್ ಆರ್ಟನ್ನು ಹೆಣ್ಣಿನ ದೃಷ್ಟಿಕೋನದಿಂದಲೂ ನೋಡುವುದನ್ನು ನಾವು ನಮ್ಮ ಸಂವೇದನೆಯ ಒಳಗಡೆನಲ್ಲಿ ಸೇರಿಕೋಬೇಕು ಅಂತ. ಮತ್ತೆ ಮಹಿಳಾ ಸಾಹಿತ್ಯ ಎದುರಿಸುತ್ತಿರುವ ಸವಾಲುಗಳು ಯಾವುವು ಅಂದರೆ ಒಂದು, ಇಲ್ಲಿ ತನಕದ ಸಾಹಿತ್ಯ ಚರಿತ್ರೆಯಲ್ಲಿ ಯಾವ-ಯಾವ ಮುಖ್ಯ ಲೇಖಕಿಯರಿಗೆ ಸಿಗಬೇಕಾಗಿರುವ ಸ್ಥಾನಮಾನಗಳು ಆ ಪ್ರಮಾಣದಲ್ಲಿ ಆ ರೀತಿಯಲ್ಲಿ ಸಿಕ್ಕಿಲ್ಲ ಅನ್ನುವುದು ಮತ್ತು ಆದಷ್ಟು ವಸ್ತುನಿಷ್ಠವಾಗಿ ನಾವು ಅದನ್ನು

ಮಾಡಬೇಕು ಅದರರ್ಥ ನಾವು ಅದನ್ನು ವೈಭವೀಕರಿಸಬೇಕು ಅಂತ ಅಲ್ಲ. ಅದೇನು ಆಗಬೇಕಾಗಿಲ್ಲ ಆದ್ರೆ ಸಾಕಾರಣವಾಗಿ ನ್ಯಾಯಬದ್ಧವಾಗಿ ಸಿಗಬೇಕಾಗಿರುವುದನ್ನು ಕೊಡಬೇಕು.

**ನಿಮ್ಮ ಸ್ತ್ರೀವಾದಿ ಚಿಂತನೆಯ ಪ್ರಕಾರ ಮಹಿಳೆಗೆ ಬೇಕಾಗಿರುವುದು ಸ್ವಾತಂತ್ರ್ಯವೋ, ಸಮಾನತೆಯೋ ಈ ಕುರಿತು ವಿವರಿಸುವಿರಾ?**

**ಆಶಾ:** ಸ್ವಾತಂತ್ರ್ಯ, ಸಮಾನತೆ ಅದೆಲ್ಲವನ್ನು ಮೀರಿದ ಅಥವಾ ಈ ಎರಡು ಒಳಗೊಂಡಿರುವ ಸ್ವಾಯತ್ತತೆ, ಈ ಸ್ವಾಯತ್ತತೆ ಅಂತ ಹೇಳ್ತಾ ಇರುವಾಗ ಅದು ವರ್ಗೀಕರಣದ ನೆಲೆಯಲ್ಲಿ ಅಲ್ಲ, ಯಾವಾಗಲೂ ಸ್ತ್ರೀವಾದವನ್ನು ವರ್ಗೀಕರಣದ ನೆಲೆಯಲ್ಲಿಯೇ ಅರ್ಥೈಸಲಾಗುತ್ತದೆ. ಅದು ಸ್ತ್ರೀವರ್ಗದ ಪರವಾಗಿ ನಡೆಸುತ್ತಿರುವ ಹೋರಾಟ ಅಂತ ಅಲ್ಲ. ಅದು ಸ್ತ್ರೀವಾದಿ ಹೋರಾಟದಷ್ಟು ಮಾನವೀಯವಾದ ಹೋರಾಟ ಇಲ್ಲಿಯ ತನಕ ಯಾವುದು ಇಲ್ಲ. ಆದ್ದರಿಂದ ಸ್ವಾತಂತ್ರ್ಯ ಸಮಾನತೆ ಅನ್ನುವುದಕ್ಕಿಂತ ಹೆಚ್ಚಾಗಿ ಅದು ಬಯಸುತ್ತಾ ಇರುವುದು ಮಾನವ ಘನತೆಯನ್ನು, ಹಾಗೂ ಈ ಸಮಾನತೆ ಎಂಬ ಪರಿಕಲ್ಪನೆಯನ್ನು ಹಾಗೇ ಬಳಸುವುದರಲ್ಲಿ ನನಗೆ ತುಂಬಾ ಉತ್ಸಾಹ ಇಲ್ಲ. ಸ್ವಾಯತ್ತತೆ ಅನ್ನುವುದನ್ನು ನಾನು ಯಾಕೆ ಬಳಸುತ್ತೇನೆ ಅಂತ ಅಂದರೆ, ಅದು ಹೆಣ್ಣನ್ನು ಒಂದು ಪೂರ್ಣ ಪ್ರಮಾಣದ ವ್ಯಕ್ತಿತ್ವದಲ್ಲಿ ನೋಡುತ್ತೇ ಅಂತ. ಹೇಗೆ ಗಂಡನ್ನು ಒಂದು ಪೂರ್ಣ ಪ್ರಮಾಣದ ವ್ಯಕ್ತಿತ್ವದಲ್ಲಿ ನೋಡಲಾಗುತ್ತದೊ ಹಾಗೆ ಹೆಣ್ಣನ್ನು ನೋಡಬಹುದಾದ ಒಂದು ನೋಡೋಕೆ ಸಾಧ್ಯ ಆಗಬೇಕಾದ ಒಂದು ಪ್ರಕ್ರಿಯೆಯನ್ನು ಶುರುಮಾಡುತ್ತದೆ.

**ಧಾರ್ಮಿಕ ಸಮುದಾಯದ ಹಿನ್ನೆಲೆಯಿಂದ ಬರೆಯುತ್ತಿರುವ ಸಾರಾ, ಷರೀಫಾ, ಬಾನುಮುಷ್ತಾಕ್ ಅವರ ಬರಹದಲ್ಲಿನ ಸ್ತ್ರೀವಾದಕ್ಕೂ, ಮುಸ್ಲಿಂ ಅಲ್ಲದ ಮಹಿಳೆಯರ ಬರಹದಲ್ಲಿನ ಸ್ತ್ರೀವಾದಕ್ಕು ಏನು ವ್ಯತ್ಯಾಸ ಇದೆ?**

**ಆಶಾ:** ನನಗೆ ಫಂಡಮೆಂಟಲ್ ಆದ ವ್ಯತ್ಯಾಸಗಳು ಇಲ್ಲವೆ ಇಲ್ಲ. ಸಾರಾ ಅಥವಾ ಬಾನು ಮುಷ್ತಾಕ್ ಅವರ ಬರವಣಿಗೆಯಲ್ಲಿ ಅಲ್ಲಿಯ ತನಕ ಅಪರಿಚಿತವಾಗಿದ್ದ ಮುಸ್ಲಿಂ ಲೋಕದ ಪರಿಚಯ ಆಯಿತು ಅನ್ನುವುದು ನಿಜ. ಆ ಮಹಿಳಾ ಲೋಕದ ಅನುಭವ ಮತ್ತು ಬಿಕ್ಕಟ್ಟುಗಳು ಮತ್ತು ಸುಖದುಃಖಗಳು ಬೇರೆ ಮಹಿಳಾ ಲೋಕಕ್ಕಿಂತ ಭಿನ್ನವಾದವು ಅಂತ ಏನು ಅನಿಸುವುದಿಲ್ಲ.

**ಆಧುನಿಕತೆಯಿಂದ ಮಹಿಳೆಯು ತನಗೆ ಬಿಡುಗಡೆ ದೊರೆತಿದೆ ಎಂದು ತಪ್ಪಾಗಿ ತಿಳಿದಿದ್ದಾಳೆ. ಈ ಮೂಲಕ ಇನ್ನೊಂದು ರೀತಿಯ ಬಂಧನಕ್ಕೆ ಒಳಗಾಗಿದ್ದಾಳೆ ಎಂದು ಗುರುತಿಸುತ್ತೀರಿ. ಅಂದರೆ ಮಹಿಳಾ ಉದ್ಯೋಗವನ್ನು ವಿರೋಧಿಸುತ್ತೀರಾ?**

**ಆಶಾ:** ಖಂಡಿತಾ ಅಲ್ಲ. ಆರ್ಥಿಕ ಸ್ವಾತಂತ್ರ್ಯವನ್ನು ಅದರ ತುತ್ತ ತುದಿಯವರೆಗೂ ನಾನು ಒಪ್ಪುತ್ತೇನೆ. ಆಧುನಿಕತೆಯನ್ನು ವಿರೋಧಿಸುತ್ತಾ ಇಲ್ಲ, ಉದ್ಯೋಗವನ್ನು ವಿರೋಧಿಸುತ್ತಾ ಇಲ್ಲ. ನಾನು ವಿರೋಧಿಸುತ್ತಾ ಇರುವುದು ಏನು ಅಂದ್ರೆ ನಾನು ಎಚ್ಚರಿಕೆಯಿಂದ ಇರಬೇಕಾಗಿರುವುದು ಎಲ್ಲಿ ಅಂತ ಹೇಳುತ್ತಾ ಇದೀನಿ. ಹಾಗೂ ಪಿತೃಸಂಸ್ಕೃತಿಯು ಛದ್ಮವೇಶಗಳಿದ್ದಾವಲ್ಲ ಅವುಗಳನ್ನು ಗುರುತಿಸಿಕೊಂಡರೆ,

ಅವುಗಳ ಬಗೆಗೆ ನಮಗೆ ಎಚ್ಚರ ಇದ್ದರೆ ಮಾತ್ರ ನಮಗೆ ಈ ಉದ್ಯೋಗಸ್ಥ ಮಹಿಳೆಯರು ಎದುರಿಸುತ್ತಿರುವ ಸವಾಲುಗಳನ್ನು ಶಕ್ತವಾಗಿ ಎದುರಿಸುವುದಕ್ಕೆ ಸಾಧ್ಯ ಅಂತ ಅನಿಸುತ್ತೆ.

**ಮಹಿಳೆಯ ಬಿಡುಗಡೆ ಎಂದರೆ ಲೈಂಗಿಕತೆಯಿಂದ ಹೆಣ್ಣು ಪಡೆಯುವ ಬಿಡುಗಡೆ ಎಂಬುದಕ್ಕೆ ನಿಮ್ಮ ಅಭಿಪ್ರಾಯವೇನು?**

**ಆಶಾ:** ಲೈಂಗಿಕತೆಯಿಂದ ಪಡೆಯುವ ಬಿಡುಗಡೆ ಅಲ್ಲ. ಲೈಂಗಿಕ ನಿರ್ಬಂಧಗಳಿಂದ ಪಡೆಯುವ ಬಿಡುಗಡೆ. ಖಂಡಿತಾ ಒಪ್ಪುತ್ತೇನೆ.

**ಪುರುಷರ ಬರಹಗಳಲ್ಲಿ ಸ್ತ್ರೀವಾದ ಯಾವ ಮಾದರಿಯಲ್ಲಿ ಇದೆ?**

**ಆಶಾ:** ಕೆಲವರು ನಮ್ಮಲ್ಲಿ ಅಪ್ಪಟ ಸ್ತ್ರೀವಾದಿ ಲೇಖಕರು ಇದ್ದಾರೆ. ಕೆಲವರು ಸಹಜವಾಗಿ, ಕೆಲವರು ಸೋದ್ದಿಶ್ಯವಾಗಿ. ಉದಾಹರಣೆಗೆ, ಶಿವರಾಮ ಕಾರಂತರು ಪ್ರಜ್ಞಾಪೂರ್ವಕವಾಗಿ ಹೆಣ್ಣನ್ನು ತನ್ನ ಸಂವೇದನೆಯ ಒಳಗಡೆಗೆ ತಂದುಕೊಳ್ಳಬೇಕು ಅಂತ ಪ್ರಯತ್ನ ಪಟ್ಟವರು. ಕುವೆಂಪುವಿಗೆ ಅನೇಕ ಸಂದರ್ಭಗಳಲ್ಲಿ 'ಕಾನೂರು ಹೆಗ್ಗಡಿತಿ' ಅಂತಹದ್ದನ್ನೆಲ್ಲಾ ಬರೆಯುವ ಸಂಧರ್ಭದಲ್ಲಿ ಅವರಿಗೆ ಹೆಣ್ಣನ್ನು ಕುರಿತ ಸಾಂಪ್ರದಾಯಿಕವಾದ, ಪಿತೃ ಸಂಸ್ಕೃತಿ ಮೂಲವಾದ ಮಿತಿಗಳನ್ನು ಮೀರಿ ಹೆಣ್ಣನ್ನು ಗ್ರಹಿಸುವುದಕ್ಕೆ, ಮನುಷ್ಯತ್ವದ ನೆಲೆಯಲ್ಲಿ ಗ್ರಹಿಸುವುದಕ್ಕೆ ಸಾಧ್ಯವಾಗಿದೆ. ಆ ದೃಷ್ಟಿಯಿಂದ ನನಗೆ ಕುವೆಂಪು ಕೂಡ ಒಬ್ಬ ಸ್ತ್ರೀವಾದಿ ಬರಹಗಾರರು ಅಂತ ಅನಿಸುತ್ತದೆ. ಲಂಕೇಶರಲ್ಲೂ ಕೂಡ ಈ ಬೆಳವಣಿಗೆ ಇದೆ. ಈ ಬೆಳವಣಿಗೆ ಲಂಕೇಶರಲ್ಲಿ ತುಂಬಾ ಪ್ರಖರವಾಗಿ ಇದೆ ಅಂತ ಅನಿಸುತ್ತೆ. 'ರೊಟ್ಟಿ' ಕತೆ ಆಗಿರಬಹುದು, 'ಮುಸ್ಸಂಜೆ ಕಥಾ ಪ್ರಸಂಗ'ದಲ್ಲಿ ದೇವಿ ಮತ್ತು ಸುಭದ್ರೆ. ಆ ಕತೆಗಳನ್ನು ನೋಡಿದಾಗ ಹಾಗೂ 'ಕಲ್ಲು ಕರಗುವ ಸಮಯ'ದ ಶ್ಯಾಮಲೆಯನ್ನು ನೋಡಿದಾಗ ಲಂಕೇಶರು ಹೆಣ್ಣನ್ನು ಕುರಿತ ಒಂದು ನಿರ್ಬಂಧಿತ ದೃಷ್ಟಿಕೋನ ಏನಿತ್ತು ನಮ್ಮ ಸಮುದಾಯದಲ್ಲಿ ಅದರಿಂದ ಸ್ವತಃ ಲಂಕೇಶರೇ ಬಿಡಗಡೆಯನ್ನು ಪಡೆದಿರುವ ಹಾಗೇ ಕಾಣಿಸುತ್ತದೆ.

**ಪುರುಷ ಬರಣಿಗೆಯ ಲಿಂಗರಾಜಕಾರಣದ ಬಗ್ಗೆ ನಿಮ್ಮ ಅಭಿಪ್ರಾಯಗಳೇನು?**

**ಆಶಾ:** ಅದು ಮೂರ್ತವಾದ, ಅಮೂರ್ತವಾದ ಎಲ್ಲಾ ರೂಪಗಳಲ್ಲಿಯೂ ನಮಗೆ ಕಾಣಿಸಿಕೊಳ್ಳುತ್ತಾ ಇರುತ್ತದೆ. ಕೆಲವು ಕಡೆ ಅದು ಸಟಲ್ ಆಗಿರುತ್ತದೆ. ಇನ್ನು ಕೆಲವು ಕಡೆ ಅದು ಬಹಳ ಮೂರ್ತವಾಗಿರುತ್ತದೆ. ಭೈರಪ್ಪನವರ ಬರವಣಿಗೆಯನ್ನು ನೋಡಿದರೆ ಏನು ಅನಿಸುತ್ತೆ 'ಮಹಿಳೆಯರು ಅತ್ಯಾಚಾರವನ್ನು ಆನಂದಿಸುತ್ತಾರೆ' ಅಂತ ಬರೆಯುತ್ತಾರೆ. 'ಓದದೆ ಇರುವ ಗಂಡಸರೆಲ್ಲಾ ಹೆಂಗಸರಾಗುತ್ತಾರೆ' 'ಓದಿರುವ ಹೆಂಗಸರೆಲ್ಲಾ ಗಂಡಸರಾಗುತ್ತಾರೆ' ಅಂತ ಅವರು ಬರೆಯುತ್ತಾರೆ. ಅನ್ನುವುದಾದರೆ ಅವರ ಮನಸ್ಸಿನ ವಿಕಾರ ಯಾವ ಸ್ವರೂಪದ್ದು ಎಂದು ನಮಗೆ ಗೊತ್ತಾಗುತ್ತದೆ. ಇನ್ನು ಒಂದು ಲಿಂಗರಾಜಕಾರಣದ ಬಗೆಗೆ ಬಹಳ ಒಂದು ತಟಸ್ಥವಾದ ನಿಲುವನ್ನು ಹೊಂದಿರುವುದು ಇದೆಯಲ್ಲ, ಅದು ಅಷ್ಟು ದೊಡ್ಡ ಅಪರಾಧ ಅಂತ ಅನಿಸುತ್ತದೆ.

**ಭೈರಪ್ಪನವರನ್ನು ಕುರಿತು ಏಕೆ ಕಟುವಾಗಿ ಬರೆಯುತ್ತೀರಿ?**

**ಆಶಾ:** ಒಂದು ಅವರು ಅಷ್ಟು ವಿಕಾರವಾಗಿ ಬರೆಯುವುದರಿಂದ; ಅಷ್ಟು ಕಟುವಾಗಿ ಬರೆಯಬೇಕು ಅಂತ ನನಗೆ ಅನಿಸುತ್ತೆ. ಎರಡನೆಯದು ಅಂತವರ ಬಗೆಗೆ ನಾವು ಮಾತನಾಡಲೇಬೇಕು. ಏಕೆ ಅಂದರೆ ಭೈರಪ್ಪನವರು ಈಸ್ ದಿ ಮೋಸ್ಟ್ ಪಾಪ್ಯುಲರ್ ರೈಟರ್ ಇನ್ ಇಂಡಿಯಾ. ಅವರ ಕೃತಿಗಳು ಹದಿಮೂರು ಭಾಷೆಗಳಿಗೆ ಅನುವಾದ ಆಗಿವೆ. ಅವರ ಪುಸ್ತಕಗಳು ಇಪ್ಪತ್ತು-ಮುವತ್ತು ಮುದ್ರಣಗಳನ್ನು ಕಾಣುತ್ತಿವೆ ಅನ್ನುವುದಾದರೆ, ಅಂತಹವರ ಕೃತಿಗಳನ್ನು ಜನರು ಅಷ್ಟು ಓದುತ್ತಾರೆ ಅನ್ನುವುದೇನೇ ಹೆಣ್ಣಿನ ಸವಾಲು ಎಷ್ಟು ತೀವ್ರವಾಗಿದೆ. ಎಷ್ಟು ನಿಜವಾಗಿದೆ ಅನ್ನುವುದನ್ನು ಹೇಳುತ್ತದೆ ಅಲ್ವಾ? ಭೈರಪ್ಪನವರ ಬಗೆಗೆ ಮಾತನಾಡುವುದಕ್ಕೆ ಇನ್ನು ಒಂದು ಕಾರಣ ಇದೆ. ಅದು 'ವಂಶವೃಕ್ಷ'ದಿಂದ ಶುರುವಾಗಿದ್ದು ಕಾತ್ಯಾಯಿನಿ ಇನ್ನೊಂದು ಮದುವೆ ಮಾಡಿಕೊಂಡಿದ್ದಕ್ಕೆ ಅವಳಿಗೆ ಗಿಲ್ಟ್‌ನಿಂದ ಗರ್ಭಪಾತ ಆಯಿತು. ಅವಳಿಗೆ ಆ ಗಿಲ್ಟ್‌ನಲ್ಲಿ ಸತ್ತೆ ಹೋಗಿ ಬಿಡುತ್ತಾಳೆ. ಅಲ್ಲಿಂದ ಇವತ್ತಿನ ತನಕ ಅವರು ಒಂದು ಚೂರಾದರೂ ಹೆಣ್ಣನ್ನು ಮನುಷ್ಯತ್ವದ ನೆಲೆಯಲ್ಲಿ, ಮನುಷ್ಯ ಘನತೆಯ ನೆಲೆಯಲ್ಲಿ ನೋಡಬೇಕು ಅನಿಸುವುದಿಲ್ಲವಾ? ಅಲ್ಲಿಂದ ಇಲ್ಲಿಯ ತನಕ ಹೆಣ್ಣನ್ನು ಇನ್ನು-ಇನ್ನೂ ಅವರ ದೇಹದ ನೆಲೆಯಲ್ಲಿಯೇ ನೋಡುವುದಕ್ಕೆ ಅವರು ಪ್ರಯತ್ನ ಪಡುತ್ತಿದ್ದಾರೆ. ಅದೊಂದು ಕಾರಣ. ಮತ್ತೆ ಅವರಲ್ಲಿ ಇರುವ ಕೋಮುವಾದಿ ನೆಲೆಗಳಿದ್ದಾವಲ್ಲ, ಅದು ಒಂದು ಪ್ರಬಲವಾದ ಕಾರಣ. ನಾನು ಅವರನ್ನು ವಿರೋಧಿಸುವುದಕ್ಕೆ. ಅದು 'ಆವರಣ'ದಂತಹ ಕಾದಂಬರಿಗಳಲ್ಲಿ ಒಂದು ಸಮುದಾಯವನ್ನು ಒಡೆಯುವ ವಿಚ್ಛಿದ್ರಕಾರಿ ಕೆಲಸದಲ್ಲಿ ತೊಡಗಿಕೊಂಡಿರುವುದು. ಒಬ್ಬ ಬರಹಗಾರರಾಗಿ ನನಗೆ ಆವತ್ತಿನಿಂದ ಇವತ್ತಿನ ತನಕ ಹೆಣ್ಣನ್ನು ಏಕ ಪ್ರಕಾರವಾಗಿ ಹೆಚ್ಚುತ್ತಿರುವ ಪ್ರಮಾಣಗಳಲ್ಲಿ, ಹೆಚ್ಚುತ್ತಿರುವ ಬಗೆಗಳಲ್ಲಿ, ಅವರು ಹೀಗೆ ಅವಹೇಳನ ಮಾಡುವುದು ತುಚ್ಛೀಕರಿಸುವುದು ಇದೆಯಲ್ಲ, ಅದು ಸಕಾರಣವಾಗಿ ಯಾರಿಗಾದರೂ ಅಸಹನೆಯನ್ನು ಹುಟ್ಟಿಸುತ್ತದೆ. ಭೈರಪ್ಪನವರು ಎಲ್ಲಾ ಅರ್ಥದಲ್ಲಿಯೂ ಮೂಲಭೂತವಾದಿಗಳು- ಹೆಣ್ಣಿನ ಮಟ್ಟಿಗೂ, ಧರ್ಮದ ಮಟ್ಟಿಗೂ. ನಾನು ಮಾತ್ರ ಅಲ್ಲ, ಕನ್ನಡದ ಯಾವುದೇ ಪ್ರಜ್ಞಾವಂತರು ಅವರನ್ನು ವಿರೋಧಿಸುವುದು ಅನಿವಾರ್ಯ ಆಗುತ್ತದೆ.

**ಶಾಂತಿನಾಥ ದೇಸಾಯಿಯವರನ್ನು ನೀವು ಸ್ತ್ರೀವಾದಿಗಳು ಎಂದು ಕರೆಯುತ್ತೀರಿ ಯಾವ ನೆಲೆಯಲ್ಲಿ ಹೀಗೆ ಗುರುತಿಸಿದ್ದೀರಿ?**

**ಆಶಾ:** ನನ್ನ ಪ್ರಕಾರ ಶಾಂತಿನಾಥ ದೇಸಾಯಿ ನಿಜವಾದ ಅರ್ಥದಲ್ಲಿ ಕನ್ನಡದ ಆಧುನಿಕ ಸಂವೇದನೆಯ ಒಬ್ಬ ಲೇಖಕ. ಈ ಆಧುನಿಕ ಸಂವೇದನೆ ಹೆಣ್ಣನ್ನು ತನ್ನ ಪಕ್ಕಕ್ಕೆ ನಿಲ್ಲಿಸಿಕೊಳ್ಳುತ್ತದೆ. ಯಾವ ಪ್ರಯತ್ನವೂ ಇಲ್ಲದೆ ಹೆಣ್ಣನ್ನು ಒಂದು ಮನುಷ್ಯ ಜೀವಿಯಾಗಿ ನೋಡುವುದಕ್ಕೆ ಬೇಕಾಗಿರುವ ಮನೋವಿನ್ಯಾಸ ಅವರಲ್ಲಿ ಇದೆ.

**ದೊಡ್ಡ-ದೊಡ್ಡ ಲೇಖಕರನ್ನು ಮುಲಾಜಿಗೆ ಒಳಗಾಗದೆ ಕಟುವಾಗಿ ಟೀಕಿಸುತ್ತೀರಿ, ಆದರೆ ಇನ್ನು ಈ ನೆಲೆಯಲ್ಲಿ ಚರ್ಚಿಸದೆ ಅವರ ಅಭಿಮಾನಿಗಳ ಸಿಟ್ಟಿಗೆ ಕಾರಣಗಳಾಗುತ್ತೇನೆ ಎಂದು ಬಿಟ್ಟಿರುವ ಲೇಖಕರು ಇದ್ದಾರೆಯೇ? ಈ ಕುರಿತ ಚಿಂತಕಿಯಾದ ನಿಮಗೆ ಕಹಿ ಅನುಭವ ಆಗಿದೆಯೇ?**

**ಆಶಾ:** ಕಹಿ ಅನುಭವ ಆಗಿದೆ ಬಸವಣ್ಣನ ಬಗೆಗೆ ನಾನು ಪ್ರಶ್ನೆಗಳನ್ನು ಎತ್ತಿದಾಗ ಕಹಿ ಅನುಭವ ಆಗಿದೆ. ಲೇಖಕರ ಜೊತೆಯಲ್ಲೇ ಕಹಿ ಅನುಭವ ಆಗಿದೆ. ಅನಂತಮೂರ್ತಿಯವರ ಹತ್ತಿರ ನಾನು ನಿಮ್ಮಲ್ಲಿ ಗಟ್ಟಿಯಾದ ಸ್ತ್ರೀ ಪಾತ್ರಗಳು ಇಲ್ಲ. ನಿಮ್ಮಲ್ಲಿ ಹೆಣ್ಣು ಕೇವಲ ಜೀವ ಕಾಮದ ಹೆಣ್ಣು ಮಾತ್ರ ಅಂದಿದ್ದಕ್ಕೆ ಅವರು ಕೋಪ ಮಾಡಿಕೊಂಡಿದ್ದಾರೆ ನನ್ನ ಹತ್ತಿರ. ಅನಂತರ ಅನಂತಮೂರ್ತಿಯವರ ಬಗ್ಗೆ ಬರೀ ಕನ್ನಡದಲ್ಲಿ ಮಾತ್ರ ಅಲ್ಲ, ಇಂಗ್ಲೀಷಿನಲ್ಲೂ ಬರೆದಿದ್ದೇನೆ. ಅದು 'ಸೆಮಿನಾರ್' ಥರದ ಪತ್ರಿಕೆಯಲ್ಲಿ ಬಂದು ತುಂಬಾ ಕಡೆಗೆ ನನಗೆ ಪ್ರತಿಕ್ರಿಯೆ ಬಂದಿದೆ. ಈ ನೆಲೆಯಲ್ಲಿ ಚರ್ಚೆ ಮಾಡದೆ ಇರುವ ಲೇಖಕರು ಯಾರು ಇಲ್ಲ. ಅಂತಹ ಒಂದು ಮುಲಾಜನ್ನು ಉಳಿಸಿಕೊಂಡಿಲ್ಲ. ಉಳಿಸಿಕೊಳ್ಳಬೇಕಾದ ಅಗತ್ಯ ಇದೆ ಅಂತ ಅನಿಸಲ್ಲ.

**ಬೇರೆ-ಬೇರೆ ಚಿಂತಕಿಯರಿಂದ ಹೊಸದನ್ನು ಏನು ಪಡೆದುಕೊಂಡಿದ್ದೀರಿ?**

**ಆಶಾ:** ತುಂಬಾ ಪಡೆದುಕೊಂಡಿದ್ದೇನೆ. ಸುಮಿತ್ರಾಬಾಯಿ, ವಿಜಯಾದಬ್ಬೆ ಇರಬಹುದು ಸಿಮೋನ್ ದಿ ಬೋವಾ, ಕ್ರಿಸ್ಟೋವಾ, ಎಲೆನಾ ಶೋವಲ್ಟರ್ ಇರಬಹುದು, ಎಲ್ಲರಿಂದಲೂ ಪಡೆದುಕೊಂಡಿದ್ದೇನೆ, ಅಂದರೆ ಅವರೆಲ್ಲರ ವಿಚಾರಗಳು ನನ್ನ ವಿಚಾರಗಳನ್ನು ಇನ್ನು ಹೆಚ್ಚು ಸ್ಪಷ್ಟ ಮಾಡಿವೆ. ಹಾಗೂ ಅಲ್ಲಿಂದ ಚೂರು ಮುಂದಕ್ಕೆ ಯೋಚನೆ ಮಾಡಬಹುದಾ ಅಂತ ಅನಿಸುತ್ತೆ. ಉದಾಹರಣೆಗೆ, ನಾನೀಗ ಸ್ತ್ರೀವಾದವನ್ನು ಜಗತ್ತಿನ ಭವಿಷ್ಯದ ಆಯ್ಕೆ ಅಂತ ಹೇಳುತ್ತಾ ಇದ್ದೀನಿ. ಜಗತ್ತಿನ ವರ್ತಮಾನದ ಆಯ್ಕೆ ಅಂತ ಹೇಳುತ್ತಾ ಇದ್ದೀನಿ. ಇವರೆಲ್ಲರಿಂದ ಪಡೆದುಕೊಂಡ ಬಂದು ರೀತಿಯ ಕೃತಜ್ಞತೆಯಲ್ಲಿಯೇ ಮುಂದುವರಿಯುತ್ತಾ ಇದ್ದೀನಿ ಅಂತ ಅನಿಸುತ್ತೆ.

**ಸಮಕಾಲೀನ ಸ್ತ್ರೀವಾದಿಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?**

**ಆಶಾ:** ತುಂಬಾ ಗೌರವ ಇದೆ ಮತ್ತು ಪ್ರೀತಿ ಇದೆ.

**ನೀಲಾ, ಮೀನಾಕ್ಷಿ ಬಾಳಿ, ಕೆ.ನೀಲಾ ಮುಂತಾದವರೆಲ್ಲ ದುಡಿಯುವ ವರ್ಗದವರ ಜೊತೆಯಲ್ಲಿದ್ದು ಸ್ತ್ರೀವಾದಿ ಚಿಂತನೆ ಮಾಡುತ್ತಿದ್ದಾರೆ. ನೀವು ತಾರಿಣಿ ಇನ್ನೂ ಕೆಲವರು ಪ್ರಬಂಧ ಮಂಡನೆ, ಪತ್ರಿಕೆಗಳಿಗೆ ಬರೆಯುವ ಮೂಲಕ ಚಿಂತನೆ ವಿಸ್ತರಿಸುತ್ತಿದ್ದೀರಾ. ಇವೆರಡರ ನಡುವೆ ಏನು ಭಿನ್ನತೆ ಗುರುತಿಸುವಿರಿ. ಹಾಗೂ ಈ ಎರಡು ಚಿಂತನೆಗಳ ನಡುವೆ ಸಂಬಂಧ ಇದೆಯಾ?**

**ಆಶಾ:** ನಾನು ಇವೆರಡು ಕಾಂಪ್ಲಿಮೆಂಟರಿ ಅಂತ ತಿಳಿದುಕೊಳ್ಳುತ್ತೇನೆ. ಒಂದು ಇನ್ನೊಂದನ್ನು ಬಲಪಡಿಸುತ್ತದೆ ಅಂತ ತಿಳಿದು ಕೊಂಡಿದ್ದೇನೆ. ಅವೆರಡು ಬೇರೆ-ಬೇರೆ ಅಂತ ಅನಿಸುವುದಿಲ್ಲ. ಇಬ್ಬರು ಬೇರೆ-ಬೇರೆ ಹಾದಿಯ ಪ್ರಯಾಣಿಕರು ಅಂತ ಅನಿಸುತ್ತದೆ.

**ದುಡಿಯುವ ವರ್ಗದ ಸ್ತ್ರೀವಾದ ಮತ್ತು ಮಧ್ಯಮ ವರ್ಗದ ಸ್ತ್ರೀವಾದ ಎಂದು ಎರಡು ಬೇರೆ-ಬೇರೆ ಎಂಬ ಚರ್ಚೆಗಳು ಇವೆ. ಇದನ್ನು ಒಪ್ಪುತ್ತೀರಾ?**

**ಆಶಾ:** ಚರ್ಚೆಗಳು ಇರುವುದು ನಿಜ. ಅವೆರಡರ ನಡುವೆ ಭಿನ್ನತೆ ಇರುವುದು ನಿಜ. ಆದರೆ ಅದನ್ನು ಒಂದು ಮಾಡಬೇಕಾಗಿರುವುದು ಇವತ್ತಿನ ನಮ್ಮ ಎದುರಿಗಿರುವ ಬಹಳ ಮುಖ್ಯ ಕರ್ತವ್ಯ ಅಂತ ನಾನು ತಿಳಿದುಕೊಂಡಿದ್ದೇನೆ.

**ಮಾರ್ಕ್ಸ್‌ವಾದದ ಹಿನ್ನೆಲೆಯಿಂದ ಬಂದ ಸ್ತ್ರೀವಾದಿಗಳಿದ್ದಾರೆ. ಇವರಲ್ಲಿ ಏನಾದರೂ ಸಮಸ್ಯೆಗಳನ್ನು ಗುರುತಿಸುವಿರಾ?**

**ಆಶಾ:** ಸಮಸ್ಯೆಗಳು ಏನು ಇಲ್ಲ. ಆದರೆ ಇವತ್ತು ಮಾರ್ಕ್ಸ್‌ವಾದಿ ಸ್ತ್ರೀವಾದ ಅನ್ನುವುದು ಇದೆಯಲ್ಲ, ಅದು ಸಾಂಸ್ಕೃತಿಕ ಸ್ತ್ರೀವಾದವನ್ನು ಒಳಗೊಳ್ಳಲೇಬೇಕಾದ ಒಂದು ಸ್ಥಿತಿಯಲ್ಲಿ ನಾವು ಇದ್ದೀವಿ ಅಂತ ಅನಿಸುತ್ತೆ. ಇವೆರಡು ಪರಸ್ಪರ ಬೆರೆತಾಗ ಒಟ್ಟು ಸ್ತ್ರೀವಾದಿ ಪ್ರಯತ್ನಗಳಿಗೆ ಇನ್ನು ಹೆಚ್ಚಿನ ಬಲ ಬರುತ್ತದೆ.

**ಇಂದಿನ ಮಹಿಳಾ ಹೋರಾಟವನ್ನು ವರ್ತಮಾನದ ಸಂಧರ್ಭದಲ್ಲಿ ಹೇಗೆ ಗ್ರಹಿಸುತ್ತೀರಿ? ಈ ಹೋರಾಟವನ್ನು ಹತ್ತಿಕ್ಕುತ್ತಿರುವ ಪುರುಷ ಪ್ರಧಾನ ಸಮಾಜದ ರಾಜಕಾರಣವನ್ನು ಹೇಗೆ ಗುರುತಿಸುತ್ತೀರಿ?**

**ಆಶಾ:** ಈ ಪುರುಷ ಪ್ರಧಾನ ರಾಜಕಾರಣ ಇದೆಯಲ್ಲ, ಆ ರಾಜಕಾರಣ ಬಹಳ ವಿಚಿತ್ರವಾಗಿ ಕೆಲಸ ಮಾಡುತ್ತಿದೆ. ಅಂತ ನನಗೆ ಅನಿಸುತ್ತೆ. ಯಾವ ಅರ್ಥದಲ್ಲಿ ಅಂದರೆ ಅದು ಮೇಲು ನೋಟಕ್ಕೆ ಹೆಣ್ಣಿನ ಹೋರಾಟಕ್ಕೆ ಸಹ ಸ್ಪಂದಿಯಾಗಿದೆ ಅಂತ ತೋರಿಸುತ್ತಾ ಇದೆ. ಆದರೆ ಅದನ್ನು ಮುಂದುವರಿಸಬೇಕಾಗಿರುವುದು ತನ್ನ ನೈತಿಕ ಜವಾಬ್ದಾರಿಯೂ ಹೌದು ಅನ್ನುವುದನ್ನು, ಅದು ತಿಳಿದುಕೊಳ್ಳಬೇಕಾದ ಪ್ರಮಾಣದಲ್ಲಿ ಸ್ಪಷ್ಟತೆಯಿಂದ ತಿಳಿಸಿಕೊಂಡಿದೆ ಅಂತ ಅನಿಸುತ್ತಾ ಇಲ್ಲ. ಇದೇ ಒಂದು ರಾಜಕಾರಣ ಅಂತ ಹೇಳಬಹುದು.

**ಪ್ರಸ್ತುತ ಮಹಿಳಾ ಹೋರಾಟದಲ್ಲಿನ ಸಂಘಟನೆಯ ಕೊರತೆಯನ್ನು ಕುರಿತು ನಿಮ್ಮ ಅಭಿಪ್ರಾಯ ತಿಳಿಸಿ?**

**ಆಶಾ:** ಸಂಘಟನೆ ಇಂದು ಅಗಾದವಾದ ಪ್ರಮಾಣದಲ್ಲಿ ಆಗಬೇಕು ಅಂತ ಅನಿಸುತ್ತದೆ. ಎಷ್ಟು ಎಷ್ಟು ಸಂಘಟನೆ ಹೆಚ್ಚಾಗುತ್ತೋ, ಅಷ್ಟು-ಅಷ್ಟು ನಮ್ಮ ಹೋರಾಟ ತೀವ್ರವಾಗುತ್ತದೆ. ಯಶಸ್ವಿ ಆಗುತ್ತದೆ. ಸಂಘಟನೆ ಅನ್ನುವುದೇ ಯಾವ ಸಂಘಟನೆಯ ಕೊರತೆ ಹೆಣ್ಣಿನ ದೊಡ್ಡ ಸವಾಲು ಅಂತ ಬೊವಾ ಹೇಳುತ್ತಾಳೊ ಆ ಸಂಘಟನೆಯ ಕೊರತೆಯ ಸವಾಲು ಈಗಲೂ ಇದೆ ಅಂತ ಅನಿಸುತ್ತೆ. ಇವತ್ತು ದುಡಿಯುವ ಹೋರಾಟದ ಸ್ತ್ರೀವಾದ. ಮೇಲ್ ವರ್ಗದ ಸ್ತ್ರೀವಾದ, ಮಧ್ಯಮ ವರ್ಗದ ಸ್ತ್ರೀವಾದ ಇವೆಲ್ಲವು ಒಗಟ್ಟಿನಲ್ಲಿ ಕೆಲಸ ಮಾಡಬೇಕು.

**ಎನ್.ಜಿ.ಓ ಸಂಘ –ಸಂಸ್ಥೆಗಳ ಮಹಿಳಾ ಹೋರಾಟದ ಬಗ್ಗೆ ಏನು ಹೇಳ್ತೀರಾ?**

**ಆಶಾ:** ತುಂಬಾ ಗೌರವ ಇದೆ. ಎಲ್ಲದರಲ್ಲೂ ಕಾಣಿಸಿಕೊಳ್ಳುವ ಅಸ್ಪಷ್ಟತೆ, ಚೂರು ಭ್ರಷ್ಟಾಚಾರ ಇನ್ನೇನೋ ಹಿತಾಸ್ತಕಿಗಳು ಹಾಗೂ ಅಲ್ಲೊಂದು ಬಹಳ ಬೇರೆ ಬಗೆಯಾದ ರಾಜಕಾರಣ ಇವೆಲ್ಲಾ ಇದೆ. ಹೀಗೆ ಇದ್ದು ಕೂಡ ದೆ ಹ್ಯಾವ್ ಗಾಟ್ ಎ ರೋಲ್ ಅನಿಸುತ್ತದೆ. ಇನ್ನು ಹೇಳಬೇಕು ಅಂದರೆ. ಎನ್.ಜಿ.ಓಗಳ ಗುರಿ ಏನು ಅನ್ನುವುದರ ಬಗ್ಗೆ ಗೊಂದಲ ಇದೆ. ಎನ್.ಜಿ.ಓಗಳ ಮೂಲಕ ನಾವು ಏನು ಮಾಡುತ್ತಿದ್ದೀವಲ್ಲಾ ಎಷ್ಟು ಜನಕ್ಕೆ ಅದು ತಲುಪುತ್ತಾ ಇದೆ. ನನಗೆ ಕೆಲವು ಸಲ ಅನಿಸುವುದು ಏನು ಅಂದರೆ ಎನ್.ಜಿ.ಓಗಳು ಒಂದು ಅಂತರಾಷ್ಟ್ರೀಯ ಲಿಂಗರಾಜಕಾರಣದ ಆಶಯಗಳೇ ಕೆಲವು ಸಲ ತಪ್ಪಾಗುತ್ತದೆ ಅಂತ ಅನಿಸುತ್ತದೆ.

**ವಾಸ್ತವದಲ್ಲಿ ಮಹಿಳಾ ಸಾಮಾಜಿಕ ಲಿಂಗ ತಾರತಮ್ಯದ ಬಿಡುಗಡೆಗೆ ಯಾವ ಪರ್ಯಾಯದ ಮಾರ್ಗಗಳನ್ನು ಸೂಚಿಸುವಿರಿ.**

**ಆಶಾ:** ಯಾವುದನ್ನು ನಾನು ಸ್ವ ಅಧೀಕೃತತೆ ಅಂತ ಕರಿಯುತ್ತಿನೋ ಅದನ್ನು ಇಲ್ಲೂ ಮುಂದುರೆಸುತ್ತೇನೆ.

**ಕನ್ನಡದಲ್ಲಿ ಸ್ತ್ರೀವಾದದ ಮುಂದಿನ ನಡೆ ಏನು? ಹಾಗೂ ಸ್ತ್ರೀವಾದಕ್ಕಿರುವ ಸವಾಲುಗಳೇನು?**

**ಆಶಾ:** ಮುಂದಿನ ನಡೆ ಇರಬೇಕಾಗಿರುವುದು ಏನು ಅಂದರೆ, ಒಟ್ಟು ನಮ್ಮ ಪರಂಪರೆಯ ಮರು ನಿರೂಪಣೆ ಮತ್ತು ಈ ಮರು ನಿರೂಪಣೆ ಒಂದು ಹೆಣಿಗೆಯಾಗಿ ಎಲ್ಲಾ ಕಡೆಗಳಿಂದ ನಾವು ಅದನ್ನು ಕಟ್ಟಬೇಕು. ನಾನು ಯಾವುದನ್ನು ಭವಿಷ್ಯದ ಸ್ತ್ರೀವಾದದ ತಾತ್ವಿಕತೆ ಅಂತ ಹೇಳುತ್ತಾ ಇದಿನೋ, ಮಾರ್ಕ್ಸ್‌ವಾದ ಮತ್ತು ಸಮಾಜವಾದ ಒಂದು ಕಾಲದಲ್ಲಿ ನಿಭಾಯಿಸಿದ ಪಾತ್ರವನ್ನು ಮುಂದಿನ ಸ್ತ್ರೀವಾದ ನಿಭಾಯಿಸಬೇಕಾಗಿದೆ. ಆದರೆ ಅದು ತನ್ನ ಹೋರಾಟವನ್ನು, ಪ್ರಯತ್ನವನ್ನು ಇನ್ನು ತೀವ್ರಗೊಳಿಸಬೇಕು ಅಂತ ನನಗೆ ಅನಿಸುತ್ತದೆ. ಸವಾಲುಗಳು ಅಂದರೆ ಈ ಒಂದು ಮರು ನಿರೂಪಣೆಗೆ ಬೇಕಾಗಿರುವ, ಮರುಕಟ್ಟುವಿಕೆಗೆ ಬೇಕಾಗಿರುವ ಒಂದು ತಯಾರಿಯನ್ನು ಮಾಡಿಕೊಳ್ಳಬೇಕು. ಅದಕ್ಕೂ ಒಂದಷ್ಟು ಜನ ಬದ್ಧರಾದವರ ಕೆಲಸಗಳು ಬಹಳ ನಿರೀಕ್ಷಿತ ಅಂತ ಅನಿಸುತ್ತದೆ. ಹೀಗೆ ಒಂದು ಟೀಮ್‌ನಲ್ಲಿ ನಾವೆಲ್ಲರು ಕೆಲಸ ಮಾಡಬೇಕು ಮತ್ತು ಅದರಲ್ಲಿ ಪುರುಷರು ಒಳಗೊಳ್ಳಬೇಕು.

**ದಲಿತ ಸಾಹಿತ್ಯದಲ್ಲಿ ಮಹಿಳಾ ಚಿಂತಕಿಯರ ಪ್ರಮಾಣ ಕಡಿಮೆ ಇದೆ ಏಕೆ?**

**ಆಶಾ:** ದಲಿತ ಸಾಹಿತ್ಯದಲ್ಲಿ ಮಹಿಳಾ ಚಿಂತಕಿಯರ ಪ್ರಮಾಣ ಕಡಿಮೆ ಇದೆ ಅನ್ನುವುದು ಒಂದು ಮಿಥ್ ಅನಿಸುತ್ತದೆ. ಅದು ಕನ್ನಡದ ಮಟ್ಟಿಗೆ ಒಂದು ಚೂರು ನಿಜ ಆಗಿರಬಹುದು ಅನ್ನುವ ಹಾಗೇ, ಅದು ಬೇರೆ ಭಾಗಗಳಲ್ಲಿ ನಿಜ ಅಲ್ಲ. ಉದಾಹರಣೆಗೆ ಮಹಾರಾಷ್ಟ್ರದಲ್ಲಿ ಇವತ್ತು ಬೌದ್ಧಿಕ ವಲಯವನ್ನು ಹಾಗೇ ನಿಭಾಯಿಸುತ್ತಿರುವವರು ಮಹಿಳೆಯರು. ವೆಸ್ಟ್ ಬೆಂಗಾಲ್‌ನಲ್ಲಿ ಕೂಡ ಮಹಿಳೆಯರೇ ನಿಭಾಯಿಸುತ್ತಿದ್ದಾರೆ. ಆದ್ದರಿಂದ ಕನ್ನಡದ ಮಟ್ಟಿಗೆ ಸ್ವಲ್ಪ ಸಮಸ್ಯೆ ಇದೆ. ಕನ್ನಡದಲ್ಲಿ

ಅವಕಾಶ ಸಿಕ್ಕಿಲ್ಲ ಅಂತ ಅಲ್ಲ. ಅದನ್ನು ಬಳಸಿಕೊಳ್ಳುವುದಕ್ಕೆ ಬೇರೆ-ಬೇರೆ ಸವಾಲುಗಳು ಇದ್ದಿರಬಹುದು ಅನಿಸುತ್ತದೆ.

**ಭಾರತದ ಬೇರೆ-ಬೇರೆ ಕಡೆಗಳಲ್ಲಿನ ಸ್ತ್ರೀವಾದಕ್ಕೆ ಹೋಲಿಸಿದರೆ ಕನ್ನಡದ ಸ್ತ್ರೀವಾದ ಹೇಗೆ ವಿಶಿಷ್ಟತೆಯಿಂದ ಕೂಡಿದೆ?**

**ಆಶಾ:** ಯಾವುದನ್ನು ನಾನು ಜಾಗತಿಕ ತಾತ್ವಿಕತೆಯಾಗಿ ಸ್ತ್ರೀವಾದ ಬೆಳೆಯುತ್ತಾ ಇದೆ ಅಂತ ಹೇಳುತ್ತಾ ಇದೇನೋ, ಅದನ್ನು ಭಾರತದ ಇತರ ಭಾಷೆಗಳಿಗಿಂತ ಸ್ಪಷ್ಟವಾಗಿ ಮಂಡಿಸಲಾಗುತ್ತಿರುವುದು ಕನ್ನಡದಲ್ಲಿ ಅಂತ ತಿಳಿದುಕೊಂಡಿದ್ದೀನಿ ಅದನ್ನು ವಿಶಿಷ್ಟತೆ ಎಂದು ಬೇಕಾದರೆ ಕರೆಯಬಹುದು.

**ಮಹಿಳಾವಾದಿಗಳು ಮತ್ತು ಮಹಿಳಾ ಪರ ಹೋರಾಟಗಾರರು ಇದುವರೆಗೆ ತಮ್ಮ ಧ್ಯೇಯ ಧೋರಣೆ ಈಡೇರುವವರೆಗೆ ಸಮಾಜದೊಂದಿಗೆ ಸಂಘರ್ಷ ನಡೆಸಿದ್ದಾರೆಯೇ? ಈ ಒಂದು ಸಂಘರ್ಷದ ಸೋಲು ಗೆಲುವುಗಳನ್ನು ಕುರಿತು ನೀವು ಯಾವ ನೆಲೆಯಲ್ಲಿ ಗ್ರಹಿಸಿದ್ದೀರಿ?**

**ಆಶಾ:** ಸಂಘರ್ಷ ಅನ್ನುವುದು ಹೆಣ್ಣಿನ ಮಟ್ಟಿಗೆ ಬಹಳ ಭಿನ್ನವಾದ ಕಾರ್ಯ ಮಾದರಿಯನ್ನು ಹೊಂದಿದೆ. ದಲಿತರು ನಡೆಸುವ ಸಂಘರ್ಷಕ್ಕೂ ಮಹಿಳೆಯರು ನಡೆಸುವ ಸಂಘರ್ಷಕ್ಕೂ ತುಂಬಾ ವ್ಯತ್ಯಾಸ ಇದೆ. ಉದಾಹರಣೆಗೆ ಮೌನವೇ ಹೆಣ್ಣಿನ ಸಂಘರ್ಷದ ಬಹಳ ಮುಖ್ಯವಾದ ಆಯುಧಗಳಲ್ಲಿ ಒಂದು. ಆದರಿಂದ ಅದನ್ನು ಸೋಲು-ಗೆಲುವು ಅಂತ ನಾನು ಹೇಳುತ್ತಾ ಇಲ್ಲ. ಆದ್ದರಿಂದ ನಾನು ಮೊಲ ಮತ್ತು ಆಮೆಯ ಕತೆಯನ್ನು ಹೇಳುತ್ತಾ ಇರುತ್ತೇನೆ. ಆಮೆಯ ನಡೆ ನಿಧಾನ ಆದರೆ ಸ್ಥಿರ. ಹೀಗೆ ಹೆಣ್ಣಿನ ಹೋರಾಟ ಅದು ಕೊನೆ ಆಗುತ್ತೆ ಅದು ತಾರ್ಕಿಕ ಅಂತ್ಯವನ್ನು ಪಡೆಯುತ್ತೆ ಎನ್ನುವ, ಆ ಥರದ ಮಾತುಗಳನ್ನು ಆಡುವುದಕ್ಕಿಂತ ಅದು ಒಂದು ಸ್ಥಿರವಾದ ಪ್ರಮಾಣದಲ್ಲಿ ಇದೆ ಮತ್ತು ಅದು ಮುನ್ನೆಲೆಗೆ ಬರುತ್ತಾ ಇದೆ.

**ನೀವು ಸಮಕಾಲೀನ ಸ್ತ್ರೀವಾದದ ಗಂಭೀರ ಚಿಂತಕಿ, ಆದರೆ ಪತ್ರಿಕೆಗಳಿಗೆ ಬರೆಯುವಾಗ ನಿಮಗೆ ಎದುರಾದ ಸವಾಲುಗಳೇನು? ಹಿತಕರ ಅಥವಾ ಅಹಿತಕರ ಅನುಭವಗಳನ್ನು ಎದುರಿಸಿದ್ದೀರಾ?**

**ಆಶಾ:** ಪತ್ರಿಕೆಗೆ ಬರೆಯುವಾಗ ನನಗೆ ನನ್ನ ಬಗೆಗೆ ಒಂದು ಅಳುಕು ಇತ್ತು. ಬೇರೆ ಇನ್ಯಾವ ಅಳುಕು ಇರಲಿಲ್ಲ. ಆದರೆ ಬಂದ ಪ್ರತಿಕ್ರಿಯ ಮತ್ತು ಅದು ತನ್ನಲ್ಲೇ ತಂದ ರೂಪಾಂತರ ಮತ್ತು ಬದಲಾವಣೆ ತುಂಬಾ ಇದೆ. ನನ್ನ 'ಸ್ತ್ರೀಮತವನುತ್ತರಿಸಲಾಗದೆ?' ಲೇಖನದ ಭಾಷೆಗಳನ್ನು ಇಲ್ಲಿನ 'ನಾರೀಕೇಳಾ'ದ ಭಾಷೆಯನ್ನು ನೋಡುತ್ತಾ ಇದ್ದರೆ ನನಗೆ ಆಶ್ಚರ್ಯ ಆಗುತ್ತದೆ. ನನಗೆ ಒಂದು ಭರವಸೆಯನ್ನು ಹೆಚ್ಚಿಸಿದೆ ಈ ಪತ್ರಿಕಾ ಬರವಣಿಗೆ. ಯಾವುದನ್ನು ನಾನು ಮುಂದಿನ ತಾತ್ವಿಕತೆ ಅಂತ ಹೇಳುತ್ತಾ ಇದೀನೋ ಅದಕ್ಕೆ ಕಾಂಪ್ಲಿಮೆಂಟರಿಯಾಗಿ ನನಗೆ ಸಿಕ್ಕ ಪ್ರತಿಕ್ರಿಯೆಗಳು ಅಂತ ಅಂದುಕೊಂಡಿದ್ದೀನಿ. ಉದಾಹರಣೆಗೆ ಬ್ಯಾಂಕ್‌ನಲ್ಲಿ, ಟ್ರೈನ್‌ನಲ್ಲಿ, ಆಟೋದಲ್ಲಿ ನನ್ನ ಓದುಗರು ಸಿಕ್ಕಿದ್ದಾರೆ. ಹೋಮ್ ಮೇಕರ್ಸ್ ಕೂಡ ನನಗೆ ಫೋನಿನ ಮೂಲಕ ಪ್ರತಿಕ್ರಿಯೆ ನೀಡಿದ್ದಾರೆ. ಅಹಿತಕರ ಅಂತ ಹೇಳಲಾರೆ. ಕೆಲವರು ಹೇಳುವುದು ಸ್ತ್ರೀವಾದದ ಆಚೆಗೆ ನನ್ನನ್ನು ಗುರುತಿಸುವುದಕ್ಕೆ ತಯಾರಿ ಇಲ್ಲದೆ ಇರುವುದು ತುಂಬಾ ತಮಾಷೆಯಾಗಿ ಕಾಣಿಸುತ್ತೆ. ವಿಲಕ್ಷಣವಾಗಿ ಕಾಣಿಸುತ್ತೆ. ಬೇರೆ ಇನ್ಯಾರೋ

ದಲಿತರ ಪರವಾಗಿ ಬರೆದ ಮಾತ್ರಕ್ಕೂ ಅವರು ಬೇರೆಯವರ ಪರವಾಗಿ ಇರುವುದಿಲ್ಲ ಅಥವಾ ಅವರನ್ನು ವಿಮರ್ಶೆಯ ಹೊರಗಿಟ್ಟು ಮಾತನಾಡುತ್ತಾರೆ ಅಂತ ಏನು ಆಗಬೇಕಾಗಿಲ್ಲ. ಆದರೆ ನನ್ನನ್ನು ಅದಕ್ಕೆ ಫಿಕ್ಸ್ ಮಾಡುವ ಒಂದು ಪ್ರಕ್ರಿಯೆ ನಡೆಯುತ್ತಲ್ಲಾ ಅದು ತುಂಬಾ ತಮಾಷೆಯಾಗಿ ಕಾಣಿಸುತ್ತೆ. ಆದರೆ ನಾನು ಇದನ್ನು ಅಹಿತಕರ ಅಂತ ಹೇಳುವುದಿಲ್ಲ.

**ಸ್ತ್ರೀವಾದಿ ಸಿದ್ಧಾಂತ ಮತ್ತು ಚಳುವಳಿಗಳೆರಡರ ಆಯಾಮಗಳನ್ನು ಹೊಂದಿರುವ ಸ್ತ್ರೀವಾದ ಕನ್ನಡದಲ್ಲಿ ಇದೆಯೇ?**

**ಆಶಾ:** ಚಳುವಳಿ ಎನ್ನುವುದು ವ್ಯಾಖ್ಯಾನದಲ್ಲಿಯೇ ಒಂದು ತೊಂದರೆ ಇದೆ. ಇವಾಗ ನಾನು ಬರೆಯುವುದು ಒಂದು ಚಳುವಳಿ ಅಲ್ವಾ? ಇಲ್ಲಿಯ ತನಕ ಕಾನೂರು ಸುಬ್ಬಮ್ಮನನ್ನು ನೋಡಿದ ಕ್ರಮಕ್ಕೂ, ನಾನು ನೋಡಿದ ಕ್ರಮಕ್ಕೂ ನೋಡುತ್ತಾ ಇರುವ ಕ್ರಮಕ್ಕೂ ತುಂಬಾ ವ್ಯತ್ಯಾಸ ಇದೆ. ಇಲ್ಲಿಯ ತನಕ ಸೀತೆಯನ್ನು ನೋಡುತ್ತಾ ಇದ್ದ ಕ್ರಮಕ್ಕೂ ನಾನು ನೋಡುತ್ತಾ ಇದ್ದ ಕ್ರಮಕ್ಕೂ ವ್ಯತ್ಯಾಸ ಇದೆ. ಅದು ಯಾಕೆ ಚಳುವಳಿ ಅಲ್ಲ. ರೈಟಿಂಗ್ ಈಸ್ ಇಟ್‌ಸೆಲ್ಫ್ ಈಸ್ ಎ ಮೂಮೆಂಟ್. ರೈಟಿಂಗ್ ಇಟ್‌ಸೆಲ್ಫ್ ಈಸ್ ಅ ರೆಬಲ್. ನನಗೆ ಅನಿಸುವುದು ಹಾಗೆ.

**ನೀವು ಸರಕಾರಿ ಪದವಿ ಕಾಲೇಜಿನಲ್ಲಿ ಅಧ್ಯಾಪಕಿಯಾಗಿ ಕಾರ್ಯ ನಿರ್ವಹಿಸುತ್ತೀದ್ದೀರಿ. ನಿಮ್ಮ ಭೋಧನೆಗೆ ಬಳಸಿದ ವಿಧಾನಗಳು ಯಾವುವು? ಈ ನಿಮ್ಮ ಚಿಂತನೆಯನ್ನು ನಿಮ್ಮ ವಿದ್ಯಾರ್ಥಿಗಳಿಗೆ ಹೇಗೆ ವಿಸ್ತರಿಸುವಿರಿ?**

**ಆಶಾ:** ಖಂಡಿತಾ ನಾನು ಏನನ್ನು ಬರೆಯುತ್ತೇನೋ ಅದೆಲ್ಲವನ್ನು ನನ್ನ ವಿದ್ಯಾರ್ಥಿಗಳ ಜೊತೆಯಲ್ಲಿ ಹಂಚಿಕೊಳ್ಳುತ್ತೇನೆ. ಟೆಕ್ಸ್ಟ್ ಈಸ್ ಎ ಪ್ರಿಟೆಸ್ಟ್ ಅಂತೀವಲ್ಲಾ ಅದು ನಿಜ. ಭೈರಪ್ಪನವರ ವಿಚಾರವನ್ನು ನಾನು ಕ್ಲಾಸಿನಲ್ಲಿ ಚರ್ಚಿಸಿದ್ದೇನೆ. ಹಾಗೇ ಯಾವುದು ಸಮಕಾಲೀನವೊ, ಯಾವುದು ಪ್ರಸ್ತುತವೊ, ಯಾವುದು ಅಗತ್ಯವೊ, ಅದೆಲ್ಲವನ್ನು ನಾನು ಚರ್ಚೆ ಮಾಡಿದ್ದೇನೆ. ಹಾಗೂ ಪಾಠ ಮಾಡುವುದು ಅನ್ನುವುದು ಇದೆಯಲ್ಲ ನನ್ನ ಬದುಕಿನ ಪರಮ ಸೌಭಾಗ್ಯಗಳಲ್ಲಿ ಒಂದು ಅಂತ ನಾನು ತಿಳಿದುಕೊಂಡಿದ್ದೇನೆ. ಮತ್ತೆ ಪ್ರತಿವರ್ಷ ಹೊಸ ವಿದ್ಯಾರ್ಥಿಗಳು ಬರುತ್ತಾರೆ. ಹಳೆಗನ್ನಡದ ಪಂಪನ ಪದ್ಯ ಆಗಿದ್ದಿರಬಹುದು. ವೈದೇಹಿ ಪದ್ಯ ಆಗಿದ್ದಿರಬಹುದು. ಸಾರಾ ಅವರ ಕತೆ ಆಗಿದ್ದಿರಬಹುದು. ಮಕ್ಕಳು ಅದಕ್ಕೆ ಪ್ರತಿಕ್ರಿಯೆ ಮಾಡುವ ಕ್ರಮ ಇದೆಯಲ್ಲ ಅದು ನನಗೆ ಯಾವಾಗಲೂ ಒಂದು ಚೈತನ್ಯವನ್ನು ಕೊಡುವಂತಹದ್ದೇ ಆಗಿರುತ್ತದೆ.

**ಬೆಂಗಳೂರಿನಂತ ನಗರದಲ್ಲಿ ಸಾಹಿತ್ಯ ಕುರಿತು ಪಾಠ ಮಾಡುವಾಗ ಯಾವ ಸವಾಲುಗಳನ್ನು ಎದುರಿಸಿದ್ದೀರಿ. ಅಲ್ಲಿನ ವಿದ್ಯಾರ್ಥಿಗಳು ಯಾವ ನೆಲೆಯಲ್ಲಿ ಸ್ಪಂದಿಸುತ್ತಾರೆ?**

**ಆಶಾ:** ನನಗೆ ಅನಿಸುವುದು ಸಾಹಿತ್ಯದ ಪಾಠ ಕೇಳುವುದಿಲ್ಲ. ಅದು ಆಂಶಿಕವಾಗಿ ಪಾರ್ಶ್ವಿಕವಾಗಿ ನಿಜ ಅಂತ ಅನಿಸುತ್ತೆ. ನಾನು ಇಲ್ಲಿಗೆ ಬರುವುದಕ್ಕಿಂತ ಮುಂಚೆ ನ್ಯಾಮತಿಯಲ್ಲಿ ಕೆಲಸ ಮಾಡುತ್ತಾ ಇದ್ದೆ, ಆ ಕಾಲೇಜಿನಲ್ಲಿ ಮಕ್ಕಳು ಎಷ್ಟು ಆಸ್ತೆಯಿಂದ ಪಾಠ ಕೇಳುತ್ತಾ ಇದ್ದರೊ. ಈಗ ನಾನು ಪಾಠ

ಮಾಡುತ್ತಾ ಇರುವ ಸೈನ್ಸ್ ಕಾಲೇಜಿನಲ್ಲಿ ಇಲ್ಲಿ ಕೂಡ ಮಕ್ಕಳು ಅಷ್ಟೇ ಕುತೂಹಲದಿಂದ ಪಾಠ ಕೇಳುತ್ತಾರೆ. ನಾವು ಹೇಗೆ ಮಕ್ಕಳಿಗೆ ಪ್ರಸೆಂಟ್ ಮಾಡುತ್ತೇವೆ ಅನ್ನುವುದು ಮುಖ್ಯ ಅನಿಸುತ್ತೆ.

**ಸಂದರ್ಶನ ದಿನಾಂಕ : ೨೦ ಜೂನ್ ೨೦೧೬**

***** ***** *****

